# ಜಾನಪದ ಗೀತೆಗಳು




ಸಂಗ್ರಾಹಕರು

ಎಂ. ಜೀವನ

ಪ್ರಕಾಶಕರು :

ಸಿಟಿ ಬುಕ್‌ಸ್ಟಾಲ್, ಹುಬ್ಬಳ್ಳಿ

ಬೆಲೆ: ೩ ರೂ

ಭಕ್ತಿ ಭಾಂಡಾರಿ

# ಬಸವಣ್ಣನವರ ವಚನಗಳು

## ಭಾವಾರ್ಥ ಸಹಿತ



ಸಂಪಾದಕರು :
" ಕರ್ನಾಟಕ ಕವಿಚಂದ್ರ "
ಶ್ರೀಕಂಠ ಶಾಸ್ತ್ರಿ



೧೦೮ ಪುಟಗಳು

ಬೆಲೆ : ೮ ಆಣೆ ಮಾತ್ರ

—ಕೆಲವು ಅಭಿಪ್ರಾಯಗಳು—

ಬಸವಣ್ಣನವರ ತತ್ವಬೋಧೆ, ಧರ್ಮ-ವೇದಾಂತಗಳ ಪರಿಚಯ ಬಯಸುವವರಿಗೆ ಯೋಗ್ಯ ಗ್ರಂಥವಿದು. "ತಾಯಿನಾಡು" ೨೧-೬-೫೪

ಈ ಕಿರುಗ್ರಂಥದಲ್ಲಿ ಬಸವಣ್ಣನವರ ಸಾವಿರಾರು ವಚನಗಳಲ್ಲಿಯ ೩೨೬ ವಚನಗಳನ್ನು ಸಂಕಲಿಸಿ, ಭಾವಾರ್ಥದೊಡನೆ, ಶ್ರೀಕಂಠ ಶಾಸ್ತ್ರಿಗಳವರು ಅಳವಡಿಸಿದ್ದಾರೆ... ಈ ಗ್ರಂಥಕ್ಕೆ ನಮ್ಮ ಹೃತ್ಪೂರ್ವಕ ಸ್ವಾಗತವಿದೆ.

"ಪ್ರಜಾವಾಣಿ" ೨೭-೬-೫೪

ಮನುಷ್ಯರ ಅಜ್ಞಾನವನ್ನು ಪರಿಹರಿಸಿ ಅವರಲ್ಲಿ ಮಾನವೀಯ ಭಾವನೆಗಳನ್ನು ಪ್ರಚೋದಿಸುವಂಥ ನೀತಿ ಸೂತ್ರಗಳನ್ನು ಸರಳವಾಗಿ, ಹೃದಯಸ್ಪರ್ಶಿಯಾಗಿ ವಿವರಿಸಿದುದೇ ಬಸವಣ್ಣನವರ ವಚನಗಳ ವೈಶಿಷ್ಟ್ಯವಾಗಿದೆ. ಈ ಪುಸ್ತಕದಲ್ಲಿ ಅಂತಹ ಕೆಲವು ಶ್ರೇಷ್ಠ ವಚನಗಳನ್ನು ಶ್ರೀ ಶಾಸ್ತ್ರಿಗಳು ಸಂಗ್ರಹಿಸಿ ಅವುಗಳ ಭಾವಾರ್ಥವನ್ನು ಕೊಟ್ಟಿರುವರು. "ರಾಷ್ಟ್ರಮಿತ್ರ" ೨-೭-೫೪

ಪ್ರಾಚೀನವಾದ ಉಪನಿಷತ್ತು, ಗೀತೆ ಮತ್ತಿತರ ಶಾಸ್ತ್ರ ಗ್ರಂಥಗಳಲ್ಲಿ ಪ್ರತಿಪಾದಿಸಿದ ಘನತತ್ವಗಳನ್ನು ಭಟ್ಟಿ ಇಳಿಸಿ, ಕನ್ನಡಿಗರಿಗೆ ರಸಪಾಕವನ್ನು ಉಣಬಡಿಸಿದಂತೆ ಈ ವಚನಗಳು ಇವೆಯೆಂದರೆ ತಪ್ಪಾಗದು.

"ನವಯುಗ" (ಮಂಗಳೂರು) ೨೪-೬-೫೪

ಪ್ರಾಸಂಗಿಕವಾಗಿ ಉದಾಹರಿಸಲು ಮತ್ತು ಜೀವನ ಸಮಸ್ಯೆಗಳನ್ನೆದುರಿಸುವ ಧೈರ್ಯಮಾಡಲು ಈ ವಚನಸಂಗ್ರಹ ಅಮೂಲ್ಯವಾಗಿದೆ. "ಕರ್ಮವೀರ" ೨೧-೨-೫೫

**ಸಿಟಿ ಬುಕ್ ಸ್ಟಾಲ್,** ದುರ್ಗದಬೈಲ್, **ಹುಬ್ಬಳ್ಳಿ**

ಮುದ್ರಕರು: ಎಸ್. ವಿ. ಶ್ರೇಷ್ಠಿ, ರಾಯಲ್ ಪ್ರಿಂಟಿಂಗ್ ಪ್ರೆಸ್, ಹುಬ್ಬಳ್ಳಿ
ಪ್ರಕಾಶಕರು: ಎಸ್. ವಿ. ಶ್ರೇಷ್ಠಿ ಸಿಟಿ ಬುಕ್‌ಸ್ಟಾಲ್, ಹುಬ್ಬಳ್ಳಿ.

# ಮುನ್ನುಡಿ

ಜಾನಪದ ಗೀತೆಗಳ ಈ ಸಂಗ್ರಹದ ಮುದ್ರಣ ಕಾರ್ಯವು ಪ್ರಾರಂಭವಾದಾಗ ನನ್ನ ಬಹಳಷ್ಟು ಜನ ಗೆಳೆಯರು 'ಇದಕ್ಕೆ ಒಂದು ದೀರ್ಘ ಮುನ್ನುಡಿಯನ್ನು ಬರೆಯಿರಿ' ಎಂದು ಹೇಳಿದರು. ಅವರೆಲ್ಲ ಹಾಗೆ ಹೇಳಲು ಒಂದು ಕಾರಣವೂ ಇದೆ. ಏಕೆಂದರೆ ಈ ವರೆಗೆ ಬಂದ ಒಂದೆರಡು ಜಾನಪದ ಗೀತೆಗಳ ಸಂಗ್ರಹಕಾರರು ಅದೇ ರೀತಿ ಮಾಡಿದ್ದಾರೆ. ಅಂದರೆ ಗೀತೆಗಳು ಐವತ್ತು ಪುಟಗಳಷ್ಟಿದ್ದರೆ ಮುನ್ನುಡಿಯು ಎಪ್ಪತ್ತು ಪುಟಗಳಷ್ಟು- ಆದರೆ ನನಗೆ ಅದೇ ರೀತಿ ಪುಟ ತುಂಬಿಸುವ ಇಚ್ಛೆಯಿರಲಿಲ್ಲ. ಅಂದರೆ ಈ ಗೀತೆಗಳ ಬಗೆಗೆ ನನಗೆ ಅನಾದರವೆಂದಲ್ಲ. ಇವುಗಳಿಗೆ ಒಂದು ಸತ್ವಯುತ ಹಿನ್ನೆಲೆಯಿದೆ. ಅಂತೆಯೇ ಎಷ್ಟು ಬರೆದರೂ ಕಡಿಮೆಯೇ ಎಂದು ನನ್ನ ಅಭಿಪ್ರಾಯ. ಇಂಥ ಸತ್ವಯುತ ಗೀತೆಗಳನ್ನು ಸಂಗ್ರಹಿಸುವ ಕಾರ್ಯವು ಎಷ್ಟು ತೊಂದರೆದಾಯಕವೆಂಬುದನ್ನು ಹೇಳುವದೂ ಅಸಾಧ್ಯ.

ಜಾನಪದ ಗೀತೆಗಳೆಂದರೆ ತಾಯಿಯ ಎದೆಯ ಹಾಲಿನಂತೆ. ಅಮೃತದಷ್ಟು ಮಧುರವೂ ಶಕ್ತಿಯುತವೂ ಆದಂಥ ಆ ಹಾಲನ್ನು ಯಾವನು ವರ್ಣಿಸಬಲ್ಲನು ? ಈ ವರೆಗೆ ಎಷ್ಟು ಜನ ವರ್ಣಿಸಿದ್ದಾರೆ ? ಮುಂದೆ ಯಾವುನಾದರೂ ವರ್ಣಿಸಬಲ್ಲನೆ ? ಅಂದಾಗ ಆ ಹಾಲಿಗೆ ಸರಿಸಮವಾಗಿ ನಿಲ್ಲಬಲ್ಲ ಈ ಗೀತೆಗಳ ಬಗೆಗೆ ದೀರ್ಘ ಮುನ್ನುಡಿ ಬರೆಯುವದು ಅನವಶ್ಯಕವೆಂದು ಹೇಳಿದರೆ ಸಾಕಾಗಬಹುದಲ್ಲವೇ ?

ಈ ಗೀತೆಗಳತ್ತ ನಾನು ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿರುವಾಗಲೇ ಆಕರ್ಷಿತನಾಗಿದ್ದೆ. ಬೇಸಿಗೆಯ ಹಾಗು ದೀಪಾವಳಿಯ ಬಿಡುವಿನ ದಿವಸಗಳಲ್ಲಿ ನಾನು ಮಾಳೀಕೊಪ್ಪಕ್ಕೆ ಹೋದಾಗ ನನ್ನ ತಾಯಿಗೆ ದುಂಬಾಲು ಬಿದ್ದು ಪದಗಳನ್ನು ಕೇಳುತ್ತಿದ್ದೆ. ಅಂದಿನಿಂದ ಪ್ರಾರಂಭವಾದ ಈ ಗೀಳು ಇಲ್ಲಿಯವರೆಗೆ ಬಂದಿದೆ. ನಿರಕ್ಷರಿಯಾದ ನನ್ನ ಪತ್ನಿಯೂ ಸುಮಾರು ನಾಲ್ಕು ನೂರರಷ್ಟು ಪದಗಳನ್ನು ಹೇಳಿಕೊಟ್ಟಿದ್ದಾಳೆ. ಆಗ ನಾನು ಸಂಗ್ರಹಕಾರ್ಯಕ್ಕೆ ಕೈಹಾಕಿದೆ. ಜೊತೆಗೆ ಕನ್ನಡನಾಡಿನ ಎಲ್ಲ ಭಾಗಗಳ ಜಾನಪದ ಗೀತೆಗಳನ್ನೂ ಸಾಧ್ಯವಾದ ಮಟ್ಟಿಗೆ ಕೂಡಿಸಬೇಕು ಎಂದು ಯೋಚಿಸಿದೆ. ಕಾರ್ಯವು ಸಣ್ಣದಾಗಿರಲಿಲ್ಲ. ಆದರೂ ಗೆಳೆಯರನ್ನು ನಂಬಿ ಮುಂದುವರಿದೆ.

ಹಳೆಯ ಮೈಸೂರು ಕಡೆಯ ಗೀತೆಗಳಿಗಾಗಿ ಹಾಸನ ನಗರಸಭೆಯ ಗಾರ್ಡನ್ನಿನ ಮಾಲಿ ಸೋಮಣ್ಣ ಹಾಗು ತುಮಕೂರಿನವರೊಬ್ಬರು ಬಹಳ ಸಹಾಯ ಮಾಡಿದ್ದಾರೆ. ಗೆಳೆಯ ಕೆ. ಎಸ್. ಎಸ್. ರಾವ್‌ರವರಂತೂ ದುಂಬಾಲು ಬಿದ್ದು ಈ ಕಾರ್ಯವನ್ನು ನನ್ನಿಂದ ಮಾಡಿಸಿದ್ದಾರೆ. ಸಾಸನೂರಿನ ಗೆಳೆಯರಾದ ಶ್ರೀ ಸಂಗಪ್ಪ ಚಂದಪ್ಪ ದೇಸಾಯಿಯವರು ತಾವು ದೇಹಾಲಸ್ಯದಿಂದ ನರಳುತ್ತಿದ್ದರೂ ಅದನ್ನು ಗಮನಿಸದೆ ನನಗೆ ಸಹಾಯವಿತ್ತಿದ್ದಾರೆ. ರಾಯಚೂರಿನ ಕಡೆಯ ಪದಗಳಿಗಾಗಿ ಸಂತಿ ಕೆಲೂರಿನ ಗೆಳೆಯ ಚಂದ್ರಶೇಖರ ಹೆಸರೂರ ಬಹಳ ಸಹಾಯವಾಗಿದ್ದಾನೆ. ಅದರಂತೆ ಶ್ರೀ ಶಿವಪುತ್ರ ಆರ್. ಗುಂಜಾಳರೂ ತಮ್ಮ ಕೈಲಾದಷ್ಟು ಸಹಾಯ ಮಾಡಿದ್ದಾರೆ.

ಎಲ್ಲ ಕಡೆಗೂ ಸಿನಿಮಾ ಹಾಡುಗಳೇ ಕೇಳಬರುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ನನಗಾಗಿ ಕಷ್ಟ ಬಟ್ಟು ಗೀತೆಗಳನ್ನು ಸಂಗ್ರಹಿಸಿಕೊಟ್ಟ ಸೋದರಿಯರಾದ ಸೌ. ಶಾಂತಾದೇವಿ ಹಿರೇಮಠ (ಧಾರವಾಡ) ವೈ. ಸಾವಿತ್ರಿದೇವಿ (ಹೊಸಪೇಟೆ) ಕೆ. ಸಕ್ಕುಬಾಯಿ (ಕುಂದಾಪೂರ) ಮೊದಲಾದವರಿಗೆಲ್ಲ ಅತ್ಯಂತ ಉಪಕೃತನಿದ್ದೇನೆ. ಬಹಳ ವರ್ಷಗಳಿಂದ ಇವುಗಳನ್ನು ಶೇಖರಿಸುತ್ತಿರುವ ನನಗೆ ಎಲ್ಲರ ಹೆಸರುಗಳನ್ನೂ ಇಲ್ಲಿ ನೆನೆಯುವದು ಅವಶ್ಯ. ಆದರೆ ಅದರದೇ ಒಂದು ಪುಸ್ತಕವಾದೀತೆಂಬ ಭಯದಿಂದ ಅವರೆಲ್ಲರಿಗೂ ನಾನು ಉಪಕೃತನಿದ್ದೇನೆಂದಷ್ಟೇ ಹೇಳ ಬಯಸುತ್ತೇನೆ. ಅಲ್ಲದೆ ಇಂಥ ಸಂಗ್ರಹವನ್ನು ಪ್ರಕಟಿಸಲು ಮುಂದೆ ಬಂದ ಸಿಟಿ ಬುಕ್ ಸ್ಟಾಲಿನ ಒಡೆಯರಿಗೂ ನನ್ನ ನೆನಕೆಗಳು ಸಲ್ಲಬೇಕು.

ಈ ಸಂಗ್ರಹದಲ್ಲಿ ಒಂದೆರಡು ಪದ್ಯಗಳು ಎರಡೆರಡು ಸಲ ಬಂದಿರಲೂ ಸಾಕು. ಅದನ್ನು ಓದುಗರು ಸಹನೆಯಿಂದ ಕ್ಷಮಿಸಬೇಕು. ಹಾಗು ಇದಕ್ಕೆ ಓದುಗರಿಂದ ಪ್ರೋತ್ಸಾಹನೆ ದೊರೆತಲ್ಲಿ ಮುಂದಿನ ಸಲ ಪದ್ಯಗಳನ್ನು 'ಅಕಾರಾದಿ'ಯಲ್ಲಿ ಕೊಡುವದಲ್ಲದೆ, ಸಂಗ್ರಹಕಾರ್ಯವನ್ನು ಮುಂದು ವರಿಸಿಯೇ ಇದ್ದ ನಾನು, ಇಷ್ಟೇ ದೊಡ್ಡದಾದ ಇನ್ನೂ ಒಂದು ಭಾಗವನ್ನು ಹೊರತರಬೇಕೆಂಬ ವಿಚಾರದಿದೆ. ಈ ಕಾರ್ಯದಲ್ಲಿ ಓದುಗರಾಗಿಯಾಗಿ ಎಲ್ಲರೂ ಸಹಕರಿಸುವಿರೆಂದು ನಂಬಿರುವೆ.

ಉಣಕಲ್ಲ (ಹುಬ್ಬಳ್ಳಿ) ಎಂ. ಜೀವನ

# ಅರ್ಪಣ

ನನ್ನಲ್ಲಿ ಜಾನಪದ ಗೀತೆಗಳ ಬಗೆಗೆ ಅನುರಾಗವನ್ನು ಹುಟ್ಟಿಸಿದ

**ನನ್ನ ತಾಯಿಗೆ**

ಮತ್ತು

ಜಾನಪದ ಗೀತೆಗಳನ್ನು ಆದರದಿಂದ ಕಾಣುವ ಕನ್ನಡ ನಾಡಿನ

**ಸೋದರಿಯರಿಗೆ**

—ಸಂಗ್ರಾಹಕ

# ಜಾನಪದ ಗೀತೆಗಳು

★★

## ದೇವರ ಸ್ತುತಿ

ಬೆಳಗಾಗಿ ನಾನೆದ್ದು ಯಾರ್ಯಾರ್ನ ನೆನಿಯಲಿ ।
ಎಳ್ಳು-ಜೀರಿಗಿ ಬೆಳಿಯುಂಥಾ ।
ಎಳ್ಳು ಜೀರಿಗಿ ಬೆಳಿಯುಂಥಾ-ಭೂಮಿ ತಾಯೀನ ।
ಎದ್ದೊಂದು ಘಳಿಗಿ ನೆನದೇನ ||೧||

* * *

ಶರಣೆಂಬೆ ಶಿವನೀಗೆ ಶರಣೆಂಬೆ ಗುರುವೀಗೆ ।
ಶರಣೆಂಬೆ ಶಿವನ ಮಡದೀ-ಗೆ- ।
ಶರಣೆಂಬೆ ಶಿವನ ಮಡದೀ-ಗೆ- ಗೌರಮ್ಮಗೆ ।
ಶರಣೆಂದು ಕಲ್ಲ ಹಿಡಿದೇನ ||೨||

* * *

ಕುಟ್ಟು-ಬೀಸೂ ಹಾಡು ಯಾವಾಕಿ ಕಲಿಸ್ಯಾಳ ।
ಕೃಷ್ಣನ ತಂಗಿ ಸುಭದ್ರಿ ।
ಕೃಷ್ಣನ ತಂಗಿ ಸುಭದ್ರಿ-ಕಲಿಸ್ಯಾಳ ।
ಕೃಷ್ಣನ ಮ್ಯಾಲೆ ಪದಗೋಳ ||೩||

* * *

ಶಿವ ಶಿವ ಅಂದ್ವರ ಸಿಡಿಲೆಲ್ಲ ಬಯಲಾಗಿ ।
ಕಷ್ಟ ಬಂದೆರಗಿ ಕಡೆಗಾಗಿ ।
ಕಷ್ಟ ಬಂದೆರಗಿ ಕಡೆಗಾಗಿ-ಎಲೆ ಮನವೆ ।
ಶಿವನೆಂಬ ಶಬ್ದ ಬಿಡಬ್ಯಾಡ ||೪||

ಬಂಟ್ನಾಳ ಶರಣಯ್ಯ ನಾನಿನ್ನ ಮಗಳಯ್ಯ ।
ಲೇಸಗಿತ್ತಿಯ್ಯ ಬಡಿವಯ್ಯ ।
ಲೇಸಗಿತ್ತಿಯ್ಯ ಬಡವೆಯ್ಯ–ನನಮ್ಯಾಲ ।
ಸಾಸ್ವಿ ಕಾಳಷ್ಟು ದಯವಿರಲಿ ||೫||

* * *

ಉದ್ದೀನ ಹೊಲವನ್ನ ದೊಡ್ಡೊಟ್ಟಿ ಬಸವಣ್ಣ ।
ಉದ್ದೀನುಂಡಲಿಗೆ ಹೆರತುಪ್ಪಾ ।
ಉದ್ದೀನುಂಡಲಿಗೆ ಹೆರತುಪ್ಪಾ–ಕೊಡತೇವಿ ।
ಇದ್ದಷ್ಟು ಮತಿ ಕೊಡು ನಮಗ ||೬||

* * *

ಎಳ್ಳೀನ ಹೊಲದಾಗ ಉಳ್ಯಾಡೋ ಬಸವಣ್ಣ ।
ಎಳ್ಳೀ ನುಂಡಲಿಗೆ ಹೆರತುಪ್ಪಾ ।
ಎಳ್ಳೀ ನುಂಡಲಿಗೆ ಹೆರತುಪ್ಪಾ–ಕೊಡತೇವಿ ।
ಎಳ್ಳಷ್ಟು ಮತಿ ಕೊಡು ನಮಗ ||೭||

* * *

ಇಂದೂ ನನ್ನಂಗಳದಾಗ ಶ್ರೀಗಂಧ ನಾತಾವ ।
ಬಂದೀದಾ ನೇನ ಶ್ರೀಹರಿ ।
ಬಂದೀದಾ ನೇನ ಶ್ರೀಹರಿ–ನನಮನಿಗೆ ।
ಗಂಧದ ಮಡವ ಕಲಕೂತ ||೮||

* * *

ನಿದ್ದೀ ಗಣ್ಣೀಲಿ ಕಂಡ ಸುದ್ದಗುರುವಿನ ಪಾದ ।
ಎದ್ದು ನೋಡಿದರ ಬಟಾ ಬೈಲ ।
ಎದ್ದು ನೋಡಿದರ ಬಟಾ ಬೈಲ–ಗುರುರಾಯ ।
ರುದ್ರನ ಮಹಿಮೆ ತಿಳಿಯಾದ ||೯||

* * *

ಎಲ್ಲೆಲ್ಲಿ ನೋಡಿದರೂ ಥೆಳ್ಳನ್ನ ಕಲ್ಲಿಲ್ಲ ।
ಜಳ್ಳಂತ ಹರಿಯೋ ಜಲವಿಲ್ಲ ।
ಜಳ್ಳಂತ ಹರಿಯೋ ಜಲವಿಲ್ಲ–ಲಿಂಗಯ್ಯನ ।
ವಸ್ತ್ರ ನಾನೆಲ್ಲಿ ಒಗೆಯಾಲಿ ||೧೦||

ಸೊಲ್ಲಾಪ್ರದ ಒಳಗ ಸೆಲ್ಲಿಲ್ಲ ಮಕ್ಕಳಿಗಿ ।
ಹಾಸು ಮಂಚಿಲ್ಲ ಹವಳದವ ।
ಹಾಸು ಮಂಚಿಲ್ಲ ಹವಳದವ ಸಿದ್ರಾಮನ ।
ದಂಡು ಕೋಲಿಲ್ಲ ಪವಳದವ ॥೧೧॥

* * *

ಕಣಬಟ್ಟ್ಯ ಕ್ವಾರ್‍ಯೇರಿ ಕಂಡ್ಯರಂಜಿಕೆ ಬರುವ ।
ಮುಂಜಾನದಾಗ ನೆನೆವರ ।
ಮುಂಜಾನದಾಗ ನೆನೆವರ-ವೀರಭದ್ರ ।
ತುಂಬಿದಾರೂತಿ ತರುವೇನ ॥೧೨॥

* * *

ಮಾದೇವ ನಿನ ಮೊತ್ತುಗ ನಾನ್ಯಾರ್‍ನ್ಯಾ ನಂಬ್ನಿ ।
ನಾ ಮಾಡಿನೆಂಬ ಅಳವಿಲ್ಲ ।
ನಾ ಮಾಡಿನೆಂಬ ಅಳವಿಲ್ಲ-ಮುಕ್ಕಣ್ಣ ।
ನೀ ನಡಸು ನನ್ನ ಸರುವೆಲ್ಲ ॥೧೩॥

* * *

ಆರೂತಿ ಹಿಡಕೊಂಡು ಆರ್‍ಯಾಣ ತಿರಗೀದೆ ।
ದೇವರಿಲ್ಲೇನು ಗುಡಿಯಾಗ ।
ದೇವರಿಲ್ಲೇನು ಗುಡಿಯಾಗ-ಲಿಂಗಯ್ಯ ।
ಮಾಯ ಬಿಲ್ಲೇನು ನನಮ್ಯಾಲಿ ॥೧೪॥

* * *

ಕರುಣಾ ಬಂದರ ಕಾಯೋ ಮರಣಾ ಬಂದರ ಒಯ್ಯೋ ।
ಕರುಣಿ ಕಲ್ಯಾಣದ ಬಸವಣ್ಣಾ ।
ಕರುಣಿ ಕಲ್ಯಾಣದ ಬಸವಣ್ಣಾ-ಕಾಸಿಲಿಂಗ ।
ಕಡಿತನಕ ಕಾಯೋ ಅಭಿಮಾನ ॥೧೫॥

* * *

ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲೀ ।
ಕಲ್ಲು ಕಾವೇರೀ ಕಪಿಲೇಯ ।
ಕಲ್ಲು ಕಾವೇರೀ ಕಪಿಲೇಯ. ನೆನದಾಕರ !
ಆದೀತ್ಯ ಪಾಪ ಪರಿಹಾರ ॥೧೬॥

ಏಳೂತಲೆ ನೆನದೇನು ಭಾಳಲೋಚನದವನ ।
ಜೋಳಿಗೆ ಹೊನ್ನ ಮಳೆಗರೆದ ।
ಜೋಳಿಗೆ ಹೊನ್ನ ಮಳೆಗರೆದ-ಬೆಟ್ಟಾದ ।
ದೇವ ಮಲ್ಲಯ್ಯನ ನೆನದೇನು ॥೧೭॥

* * *

ದೇವ್ರರ ನೆನೆದರ ಸಾವ್ನುಟ್ಟು ನಮಗಿಲ್ಲ ।
ಹಾವು ಕಚ್ಚಿದರೂ ವಿಷವಿಲ್ಲ ।
ಹಾವು ಕಚ್ಚಿದರೂ ವಿಷವಿಲ್ಲ-ಸರ್ಪನದ ।
ಹೆಡೆಯ ದಾಟಿದರೂ ಭಯವಿಲ್ಲ ॥೧೮॥

* * *

ಮುಂಗೋಳಿ ಕೂಗೇದ ಮೂಡು ಕೆಂಪೇರೇದ ।
ರವಿನಾರಾಯಣ ರಥವೇರಿ ।
ರವಿನಾರಾಯಣ ರಥವೇರಿ-ಬರುವಾಗ ।
ನಾವೆದ್ದು ಕೈಯ ಮುಗಿದೇವು ॥೧೯॥

* * *

ರಂಗ ಬರ್‍ತಾನೆಂದು ರಂಗೋಲೀ ನಾನ್ಹೊಯ್ದೆ ।
ರಂಗನ ಹಿಂದೆ ರಮಣೇರು ।
ರಂಗನ ಹಿಂದೆ ರಮಣೇರು-ಬರ್‍ತಾರಂತ ।
ಮಂಗಳಾರುತಿ ನಾತಂದೆ ॥೨೦॥

* * *

ಹೊತ್ತು ಮುಳುಗಿದರೇನು ಕತ್ತಲಾದರೇನು ।
ಅಪ್ಪ ನಿನ ಗುಡಿಗೆ ಬರತೇನಿ ।
ಅಪ್ಪ ನಿನ ಗುಡಿಗೆ ಬರತೇನಿ-ಕಳಕಪ್ಪ ।
ಮುತ್ತೀನ ಬಾಗೀಲು ತೆರೆದಿರೋ ॥೨೧॥

* * *

ಕರಡೀಯ ಕಲ್‌ಮಾಡಿ ಹುಲಿಯ ಹುತ್ತಾ ಮಾಡಿ ।
ಹಿಡಿದಿದ್ದ ಬೆತ್ತಾ ಮರೆಮಾಡಿ ।
ಹಿಡಿದಿದ್ದ ಬೆತ್ತಾ ಮರೆಮಾಡಿ-ಮಾದೇವ ।
ಹೊರಟಾನು ಜೇನು ಮಲೆಗಾಗಿ ॥೨೨॥

ಮೊದಲಾಗ ನೆನದೇನು ಮದನ ಗೋವಿಂದನ ।
ಹದಿನೆಂಟು ನಾಮ ದೊಡಿಯಾನ ।
ಹದಿನೆಂಟು ನಾಮ ದೊಡಿಯಾನ–ನೆನದಾರ ।
ಹೊತ್ತಿದ್ದ ಪಾಪ ಪರಿಹಾರ ||೨೩||

* * *

ರಂಗಯ್ನ ನೋಡಾಕ ಕೇಕು ಮಾಣಿಕ-ವ್ಯಾಕ ।
ಅಂಗಯ್ಯಾಗ ತುಂಬ ಹಣವ್ಯಾಕ ।
ಅಂಗಯ್ಯಾಗ ತುಂಬ ಹಣವ್ಯಾಕ–ಬೇಟೆಗಾರ ।
ಸಿಂಗಾರದ ರಂಗಯ್ನ ನೋಡಾಕ ||೨೪||

* * *

ಹುವಿನ್ಯಾಗ ಹುದಿಗ್ಯಾನ ಮಾಲ್ಯಾಗ ಮಲಗ್ಯಾನ ।
ಮೊಗ್ಗ್ಯಾಗ ಕಣ್ಣು ತೆರದಂಥ
ಮೊಗ್ಗ್ಯಾಗ ಕಣ್ಣು ತೆರದಂಥ–ಲಿಂಗಯ್ನ ।
ನೋಡುತಲೆ ನಿದ್ದಿ ಬಯಲಾಗಿ ||೨೫||

* * *

ಅಕ್ಕೀ ಪೂಜಿಯ ಮಾಡೋ ಕಪ್ಪುರದ ಬೆಳಕೀಲಿ ।
ಅಪ್ಪ ಮಲ್ಲಯ್ಯ ಕಿರಿಬೆವತ ।
ಅಪ್ಪ ಮಲ್ಲಯ್ಯ ಕಿರಿಬೆವತ–ನನತಮ್ಮ ।
ಎತ್ತರಿಸಿ ಬೀಸೋ ಚೌರೀನ ||೨೬||

* * *

ಶರಣರ ನೆನದರ ಸರಗೀಯ ಇಟ್ಹಂಗ ।
ಹವಳ ಮಲ್ಲಿಗೀ ಮುಡಿಧಂಗ ।
ಹವಳ ಮಲ್ಲಿಗೀ ಮುಡಿಧಂಗ-ಕಲ್ಯಾಣದ ।
ಶರಣರ ನೆನಿ ನನ ಮನವು ||೨೭||

* * *

ಪಲ್ಲಕ್ಕಿ ಹೊತ್ತಾಗ ಮೆಲ್ಲಕ ನಡಿಯೆಂದ ।
ಪಲ್ಲಕ್ಕೆನ ಗೊಂಡೆ ಆದರ್‍ಯಾವ ।
ಪಲ್ಲಕ್ಕೆನ ಗೊಂಡೆ ಆದರ್‍ಯಾವ-ಮಲ್ಲಯ್ಯನ ।
ಅರಳೆಲಿ ಮುತ್ತು ಉದಿರ್‍ಯಾವ ||೨೮||

ಕೃಷ್ಣ ಕೃಷ್ಣ ಎಂದು ಮತ್ತ ಬೀದಿಗಿ ಬಂದ |
ಕೃಷ್ಣ ನಮಗೆಲ್ಲಿ ದೊರೆತಾನ |
ಕೃಷ್ಣ ನಮಗೆಲ್ಲಿ ದೊರೆತಾನ-ಈ ಪರಿ |
ಎಷ್ಟು ದಿನ ಹಿಂಗ s ಕಳಿಯಾಲೆ ||೨೯||

* * *

ಯಾಲಕ್ಕಿ ತಂದೇನಿ ಏಳಪ್ಪ ಬಲಭೀಮ |
ಯಾಲಕ್ಕಿ ಒಳಗ ಎಳಿನಾಮ |
ಯಾಲಕ್ಕಿ ಒಳಗ ಎಳಿನಾಮ-ತಂದೇನಿ |
ಏಳೋ ನಿಂಬರಗಿ ಬಲಭೀಮಾ ||೩೦||

* * *

ಮಂದಿ ಮಂದೀಯೆಂದು ಮಂದೀ ಸಂಬಲಿ ಹೋದ |
ಮಂದಿ ಬಿಟ್ಟಾರ ನಡುನೀರ |
ಮಂದಿ ಬಿಟ್ಟಾರ ನಡುನೀರ-ಮಲ್ಲಯ್ಯ |
ತಂದಿ ನನ ಕೈಯ ಬಿಡಬ್ಯಾಡ ||೩೧||

* * *

ಮಲ್ಲೀಕಾರ್ಜುನಾ ನಿನ್ನ ನಾಮsದ ಬೀಜವ |
ನಾನೆಲ್ಲಿ ಬಿತ್ತಿ ಬೆಳೆಯಲೀ |
ನಾನೆಲ್ಲಿ ಬಿತ್ತಿ ಬೆಳಿಯಲೀ- ನಿನಹೆಸರು |
ನಾಲೀಗೀ ಮ್ಯಾಲ ಬೆಳದೇನೋ ||೩೨||

* * *

ಮೂಗಿನ್ಯಾಗ ಮೂಗುತಿ ನಕ್ಕsರ ಕರಿಕಲ್ಲು |
ಅಕ್ಕಾ ನೀನ್ಯಾರ ಮಗಳವ್ವ |
ಅಕ್ಕಾ ನೀನ್ಯಾರ ಮಗಳವ್ವ-ಹಲಸಂಗಿ |
ಗಚ್ಚೀನ ಗುಡಿಯ ಜಕ್ಕವ್ವ ||೩೩||

* * *

ಸತ್ಯsವಂತರೆಂದು ಶರಣs ಮಾಡಲಿ ಹೋದೆ |
ಮತ್ಯಾಕ ಮಾರಿ ತಿರವೀರಿ |
ಮತ್ಯಾಕ ಮಾರಿ ತೀರವೀರಿ-ಬಸವಣ್ಣಾ |
ಮುತ್ತು ತಂದೇನಿ ಮಗಡಕ್ಕ ||೩೪||

ಅಪ್ಪ ಕಳಕವುಲ್ಲ ಇತ್ತ ವಾರಿಯು ತಿರುವ ।
ಮುತ್ತು ತಂದೇನಿ ಮಗಡಕ್ಕ ।
ಮುತ್ತು ತಂದೇನಿ ಮಗಡಕ್ಕ-ನೀ ಕೊಟ್ಟಿರುವ ।
ಪುತ್ರನ್ನ ತಂದೇನಿ ಜಡಿ ಇಳುವ ||೩೫||

* * *

ಆಕಾಶದಡವ್ಯಾಗ ಧೂಪದ ಹೊಗಿ ಎದ್ದು ।
ಆಯ್ತು ಮಲ್ಲಯ್ಯನ ಶಿವಪೂಜಿ ।
ಆಯ್ತು ಮಲ್ಲಯ್ಯನ ಶಿವಪೂಜಿ-ಆಗ್ಯಾಗ ।
ಆಕಾಶದ ಘಂಟಿ ಘಳಲ್ಲೆಂದು ||೩೬||

* * *

ಬಿತ್ತೀದ ಹೊಲದಾಗ ಒತ್ತಿ ಹಾಯಾಕಿಯಾರ
ಮುತ್ತಿನುಡಿಯಕ್ಕಿ ಬಸವಮ್ಮ ।
ಮುತ್ತಿನುಡಿಯಕ್ಕಿ ಬಸವಮ್ಮ-ಹಾಯ್ದರ ।
ಬಿಚ್ಚಿ ಬಿದ್ದಾವ ಬಿಳಿಜೋಳ ||೩೭||

* * *

ಯಾರಾಸೆ ನನಗಿಲ್ಲ ಭಾಗ್ಯದ ಬಲವಿಲ್ಲ ।
ಹೊಸಪ್ಯಾಟಿ ಊರ ಗುಡ್ಡದನ್ ।
ಹೊಸಪ್ಯಾಟಿ ಊರ ಗುಡ್ಡದನ್-ಜಂಬುನಾಥ ।
ನಿನ್ನಾಸೆ ನನಗ ಅನುಗಾಲ ||೩೮||

* * *

ಹೂವೀನ್ನ ಚ್ಚಡಾ ಹೊತ್ತು ಮಂಕುದರೀ ವ್ಯಾಗೇರಿ ।
ಲಂಕೀ ಕೋಟೆಂದಾ ಬರುವಂಥಾ ।
ಲಂಕೀ ಕೋಟೆಂದಾ ಬರುವಂಥಾ-ಹನುಮಪ್ಪಾ ।
ಮೊಗ್ಗಿ ಬಾಡ್ಯಾವೂ ಬಿಸಲೀಗಿ ||೩೯||

* * *

ಊರ ಮುಂದಿರುವವನೆ ಶೂರನೆ ವೀರನೆ ।
ಗೀರು ಗಂಧದ ಒಡಿಯನೆ ।
ಗೀರು ಗಂಧದ ಒಡಿಯನೇ-ಹನಮಪ್ಪ ।
ನೀರೀಗ್ಹೋಗುತ ಕೈಮುಗಿದೆ ||೪೦||

ಉದ್ದಂಡ ಹನಮಂತನ ಬುದ್ಧೀಗೆ ಸಮನ್ಯಾರು।
ಎದ್ದು ಹಾರ್‍ಯಾನ ಗಗನಕ್ಕ।
ಎದ್ದು ಹಾರ್‍ಯಾನ ಗಗನಕ್ಕ-ಲಂಕೀಸುಟ್ಟು।
ಬಂದು ರಾಮನಿಗ ಶರಣೆಂದು ||೪೧||

* * *

ಹಟ್ಟೀಗೆ ಹಿಂದಾಗಿ ಕೊಟ್ಟೀಗೆ ಮುಂದಾಗಿ।
ಬಟ್ಟೀ ಧರಿಸೋರು ಇವರ್‍ಯಾರ।
ಬಟ್ಟೀ ಧರಿಸೋರು ಇವರ್‍ಯಾರ-ಮೂಡಣ।
ಬಟ್ಟನ ಮುಖದ ಹನುಮಪ್ಪ ||೪೨||

* * *

ಉಮದೀಯ ಮಾಲಕಾರೀ ಉಡು ಹೊರಿಯಾಕ ಬಂದ।
ಬಂಗಾರ ಬಿಸಿಲ ಬಡದಾವ।
ಬಂಗಾರ ಬಿಸಿಲ ಬಡದಾವ-ಬಬಲಾದಿ।
ಕೊಂತೆವ್ವ ಸೆರಗ ಮರಿಮಾಡ ||೪೩||

* * *

ಕಸವನು ಹೊಡೆದ ಕೈಯು ಕಸ್ತೂರಿ ನಾತಾವು।
ಬಸವಣ್ಣ ನಿನ್ನ ಸಗಣೀಯ।
ಬಸವಣ್ಣ ನಿನ್ನ ಸಗಣೀಯ-ಬಳಿದ ಕೈ
ಎಸಳ ಯಾಲಕ್ಕಿ ಗೊನಿನಾತ ||೪೪||

* * *

ಆನೀ ಗಾತ್ರದ ಕೆಂಡ ಅಪ್ಪಳಿಸಿ ಬರುವಾಗ।
ಆಗ್ಯಾರು ಲಂಕೆ ಸುಡುವವರು।
ಆಗ್ಯಾರು ಲಂಕೆ ಸುಡುವವರು-ರಾಮನ।
ನಚ್ಚೀನ ಭಂಟ ಹನುಮಪ್ಪ ||೪೫||

* * *

ಹೋಗಾಗ ಎಡಕಾದಾ ಬರುವಾಗ ಬಲಕಾದಾ।
ಈಗ ನನ್‌ಕೊಡಕ ಎದುರಾದಾ।
ಈಗ ನನ್ ಕೊಡಕ ಎದುರಾ-ದಾ-ಮಲ್ಲಯ್ಯ।
ಕೊಡ ಹೊತ್ತು ಕೈಯ ಮುಗದೇನ ||೪೬||

ಕೂಡಲ ಸಂಗಯ್ಯ ಹೊಳಿದಾಗ ಹ್ಯಾಂಗಿದ್ದಿ ।
ಹಳ್ಳ್ಯೊತ್ತಿ ಸಣ್ಣ ಮಳಲೊತ್ತಿ ।
ಹಳ್ಳ್ಯೊತ್ತಿ ಸಣ್ಣ ಮಳಲೊತ್ತಿ-ಗಂಗೀಯ ।
ನೀರೊತ್ತಿ ಲಿಂಗ ನೆನದಾನ ।।೪೭।।

* * *

ಅಂದಽ ಚಂದದ ಗುಡ್ಡ ಮುಂದ ಜೋಗುಳ ಭಾವಿ ।
ಮುನ್ನೂರ ಅರವತ್ತು ಎಳಿಪಾವ ।
ಮುನ್ನೂರ ಅರವತ್ತು ಎಳಿಪಾವ-ಜನದಾಗ ।
ರಂಭಿ ಸತ್ಯವ್ವ ನೆಲಿಸ್ಯಾಳ ।।೪೮।।

* * *

ಹನುಮ ಹಗ್ಗವ ತಂದ ಗರುಡಾಳ ಪಿಕ್ಷಿ ತಂದ ।
ಲಂಕೀ ವನದಾಗ ಸಿರಿ ಇರುವ ।
ಲಂಕೀ ವನದಾಗ ಸಿರಿ ಇರುವ-ಸೀತವ್ವ ।
ಉಂಗೂರ ತಂದಽ ಹನುಮಂತಾ ।।೪೯।।

* * *

ಪರವತಕ ಹೋಗ್ಯಾಳ ಪಾತಾಳ ಗಂಗವ್ವ ।
ಯಾತ ಹಚ್ಚಿದರ ಸವಿಯಽಳ ।
ಯಾತ ಹಚ್ಚಿದರ ಸವಿಯಽಳ-ಮಲ್ಲಯ್ಯ ।
ಯಾತರಿಗೆ ಹೋಗಿ ಮಲತಾಳ ।।೫೦।।

* * *

ಸಾಳೀಗಿ ಮನಿ ಸುಟ್ಟ ಅಂಗಽಡೆಂಗಡಿ ಸುಟ್ಟ ।
ಅಂದಕ್ಕ ರಾವಣನ ಎಳಿ ಮೀಸಿ ।
ಅಂದಕ್ಕ ರಾವಣನ ಎಳಿಮೀಸಿ-ಗಡ್ಡ ಸುಟ್ಟ ।
ರಾಮನಿಗೆ ಶರಣು ಮಾಡ್ಯಾನ ।।೫೧।।

* * *

ಹಾಸುಗಲ್ಲಿನ ಮ್ಯಾಲ ಹಾಯ್ದು ಹೋದವರ್ಯಾರ ।
ಪಾದ ಮೂಡ್ಯಾವ ಪರಿ ಪರಿ ।
ಪಾದ ಮೂಡ್ಯಾವ ಪರಿ ಪರಿ-ಜಂಬುನಾಥ ।
ಹಾಯ್ದು ಹೋಗ್ಯಾನ ಜಳಕಕ್ಕ ।।೫೨।।

ಜಂಬೂನಾಥಗ ಜಂಬೂನೇರಿಳ ಹೂವ ।
ಜಂಬುವಿನ ಅಕ್ಕ ಸಾವಿತ್ರಿಗೆ ।
ಜಂಬುವಿನ ಅಕ್ಕ ಸಾವಿತ್ರಿಗೆ-ಕಳಿಸೇನ ।
ಕೊಯ್ದು ಮಲ್ಲೀಗಿ ನೆನೆದಂಡಿ ||೫೩||

* * *

ಪಾರೀಸ ನಾಥಗ ಪಾರೀಜಾತದ ಹೂವ ।
ಪಾರೀಸನ ತಂಗಿ ಪದುಮಾಗ ।
ಪಾರೀಸನ ತಂಗಿ ಪದುಮಾಗ-ಕಳಿಸೇನ ।
ಮೊಗ್ಗು ಮಲ್ಲೀಗಿ ನೆನೆದಂಡಿ ||೫೪||

* * *

ಕಡ್ಲೀ ಹೊಲದಾಗಿರುವ ಕಡುಬಿನ್ಹೊಟ್ಟೀ ಬಸವಾ ।
ಕಡಲಿಯುಂಡೀಗೆ ಹೆರತುಪ್ಪಾ ।
ಕಡಲಿಯುಂಡೀಗೆ ಹೆರತುಪ್ಪಾ-ಕೊಡತೇವಿ ।
ಕಂಡಷ್ಟು ಮತಿಯ ಕೊಡು ನಮಗ ||೫೫||

* * *

ಆರತಿ ಬೆಳಗಿ ಬೆರಳೆಲ್ಲ ನೊಂದು ।
ಧೂಪವ ಬೀಸಿ ಭುಜನೊಂದು ।
ಧೂಪವ ಬೀಸಿ ಭುಜನೊಂದು-ಸರಸೋತಿ ।
ನಾಮುವ ಹಾಡಿ ಸ್ವರನೊಂದು ||೫೬||

* * *

ಬೆಳ್ಳೀ ಬೆಟ್ಟದ ವ್ಯಾಲ ಕಂಡೇನು ಸಿರಿಜವನ ।
ಲೋಕದ ಮಾತೆ ಗಿರಿಜಾತೆ ।
ಲೋಕದ ಮಾತೆ ಗಿರಿಜಾತೆ-ಪಾರ್ವತಿ ।
ನಿನ ಧ್ಯಾನದಲಿ ಕಂಡೆ ಕೋಟಿ ಜಂಗಮರ ||೫೭||

* * *

ಕೋಟಿ ಕೋಟಿಯು ಕಂಡೆ ಕೊರಳ ಲಿಂಗವ ಕಂಡೆ ।
ದಾಟುತ್ತಾ ಕಂಡೆ ಜಲಧೀ-ಯು- ।
ದಾಟುತ್ತಾ ಕಂಡೆ ಜಲಧೀ-ಯು-ಗಂಗವ್ವನ ।
ಜಾತ್ರ್ಯಾಗ ಕಂಡೆ ಪರಸೀನ ||೫೮||

ಆರತಿ ಬೆಳಗೇನು ಪಾದವ ಸೆನದೇನು ।
ಒಲಿಯವ್ವ ತಾಯಿ ಸಿರಿದೇವಿ ।
ಒಲಿಯವ್ವ ತಾಯಿ ಸಿರಿದೇವಿ-ಲಕ್ಷ್ಮೆವ್ವ ।
ಹೊನ್ನೀನ ಕಳಸಾ ಇಡಿಸೇನು ||೫೯||

* * *

ತಾಯೀನ ನೆನದರ ಬೇಗನೆ ಪದಬರಲಿ ।
ಗಂಗಿ ದಡದಾಗ ನೆಲಸೀದ ।
ಗಂಗಿ ದಡದಾಗ ನೆಲಸೀದ–ತಾಯಿ ಸರಸೋತಿಗೆ ।
ಭಕುತೀಲಿ ಕೈಮುಗಿದು ಬೇಡೇನ ||೬೦||

* * *

ಅಕ್ಕನ್ನ ನೆನೆದರ ಗಕ್ಕನೆ ಪದಬರಲಿ ।
ಅಕ್ಕ ಹಾಳ ಗಂಗಿ ಥಡದಾಗ ಸರಸೋತಿ ।
ಅಕ್ಕ ಹಾಳ ಗಂಗಿ ಥಡದಾಗ–ಸರಸೋತಿ ಆಕೀಗೇ ।
ಭಕುತಿಲೇ ಕೈಮುಗಿದು ಬೇಡೇನ ||೬೧||

* * *

ಗುಡ್ಡದ ಬಿದಿರೇ ಗುಡಸಿಲಿಗೆ ನೆರಳಾದಿ ।
ಜಾಣ ರಂಗಯ್ಗ ಕೊಳಲಾದಿ ।
ಜಾಣ ರಂಗಯ್ಗ ಕೊಳಲಾದಿ-ಸಿಂಬಿದಿರು ।
ಮುತ್ತು ಕೇರಾಕ ಮೊರವಾಡಿ ||೬೨||

* * *

ಬಿಳಿಗಿರಿಯ ರಂಗ ಬಿಳಿಯ ಕುದುರೆಯನೇರಿ ।
ಬೆಳಗಾಗಿ ಬ್ಯಾಟಿಗ್ಹೊರಟಾನ ।
ಬೆಳಗಾಗಿ ಬ್ಯಾಟಿಗ್ಹೊರಟಾನ-ಖಡ್ಗವ ।
ಹೊಳೆದಲ್ಲಿ ಮುಖವ ತೊಳೆದಾನ ||೬೩||

ಅಚ್ಚ ತುಳಸೀ ದಂಡೆ ನಿಚ್ಚ ನೀಲೀ ನಾಮ ।
ಪಕ್ಷೀಯ ಮ್ಯಾಗ ಮೆರಿಯಂಥ ।
ಪಕ್ಷೀಯ ಮ್ಯಾಗ ಮೆರಿಯಂಥ-ರಂಗಯ್ಗ ।
ತಾಯಿ ಲಚಿಮಿ ಆರತಿ ಎತ್ತ್ಯಾಳ ||೬೪||

ಹಣ್ಣು ಕಾಯಿಯ ಪೂಜೆ ಚಿನ್ನಾದ್ಬುಲಿಯವನೆ ।
ಬರಲಾರೆ ನಿಮ್ಮ ಏಳ್ ಮಲೆಗೆ ।
ಬರಲಾರೆ ನಿಮ್ಮ ಏಳ್ ಮಲೆಗೆ-ಮಾದೇವಾ ।
ಒಪ್ಪಿಸಿ ಕೊಳ್ರೀ ಹರಕೀನ ॥೬೫॥

* * *

ಹರಕೀಯ ಒಪ್ಪುವರೆ ಚಿಕ್ಕಪ್ಪ ಮಗಳಲ್ಲ ।
ಬಳಸಿ ಬಾರವ್ವ ಪ್ರಾಕಾರ ।
ಬಳಸಿ ಬಾರವ್ವ ಪ್ರಾಕಾರ-ಇರದಿದ್ರ ।
ಮಾದೇವ ನಿನಗ ಮುನಿದಾಗ ॥೬೬॥

* * *

ಜಂಬಯ್ಯ ಬರುವಾಗ ಜಗವೆಲ್ಲ ಘಮ್ಮೆಂದು ।
ಹೊಲದಾಗ ಕರಿಕಿ ಚಿಗರ್ಯಾವ ।
ಹೊಲದಾಗ ಕರಿಕಿ ಚಿಗಿರ್ಯಾವ-ಮಾದೇವ ।
ಮೂಡ್ಲಾಗ ಮಳೆಯು ಸುರದೇತ ॥೬೭॥

* * *

ಮಕ್ಕಳ ಕೊಡು ಶಿವನೆ ಮತ್ತೊಂದು ನಾ ಒಲ್ಲೆ ।
ಹತ್ತು ಮಂದ್ಯಾಗ ಹರ್ಯ ನೀರ ।
ಹತ್ತು ಮಂದ್ಯಾಗ ಹರ್ಯ ನೀರ-ತರುವಂಥ
ಮುತ್ತೈದಿ ತನವ ಕೊಡು ಶಿವನೆ ॥೬೮॥

* * *

ಕಲ್ಲಿನ ಕುಟುಕರು ಹಂಸಭಾವಿಯ ಪಂಚಾಳ್ರು ।
ಚಿನ್ನzದ ಉಳಿಯ ಮಸಗೊಂಡು ।
ಚಿನ್ನzದ ಉಳಿಯ ಮಸಗೊಂಡು-ಮಲ್ಲಯ್ಯ ।
ಕಲ್ಲಿನ ಮಾಳಿಗಿ ಕಟದಾರ ॥೬೯॥

* * *

ಮುರಾಡzದ ನಡಿಯವನೆ ತೀಡಿದ 'ಈ ಬತ್ತಿ'ಯವನೆ ।
ರಾಜ್ಯವನೆಲ್ಲ ಸಲಹುವನೆ ।
ರಾಜ್ಯವನೆಲ್ಲ ಸಲಹುವನೆ-ಮಲ್ಲಯ್ಯ ।
ದೂರzದ ಪರಸಿ ನೆರದೈತಿ ॥೭೦॥

ತೇರು ಎಳದಾವು ತಾಣಕ್ಕ ನಿಂತಾವು ।
ತಾರೋ ಜಂಬಯ್ಯ ದವನವ ।
ತಾರೋ ಜಂಬಯ್ಯ ದವನವ–ಬಾಳೆಹಣ್ಣು ।
ಬೇಡಿಕೋಳ ಮಗಳs ಸೆರಗೊಡ್ಡಿ ||೭೧||

* * *

ನಾಲ್ಕು ಮೂಲೆಗೆ ನಾಲ್ಕು ಚಿನ್ನsದ ಕಂಬಗಳು ।
ಬೆಳ್ಳೀಯ ಗಂಟೆ ಸರಪsಣಿ ।
ಬೆಳ್ಳೀಯ ಗಂಟೆ ಸರಪsಣಿ–ಲೋಕಾsವು ।
ತಲ್ಲಣಿಸೆ ತೇರು ಸರದಾವ ||೭೨||

* * *

ಜಾತ್ರೀಗೆ ಹೋಗ್ತೀನೀ ದವನsವ ತರ್ತೀನಿ ।
ಹೂವ ತರ್ತೀನಿ ತುರುಬೀಗೆ ।
ಹೂವ ತರ್ತೀನಿ ತುರುಬೀಗೆ-ಅತ್ತಿಯ ಮಗಳs ।
ಬಂದೀ ತರ್ತೀನಿ ಬಲಗೈಗೆ ||೭೩||

* * *

ಅಕ್ಕವ್ವ ಸರಸೋತಿ ಹಟ್ಯಾಗ್ಯಾಕ ನಿಂತಿ ।
ಕೊಡತೇನಿ ಬಾರ ನಿನಗಿಂಬ ।
ಕೊಡತೇನಿ ಬಾರ ನಿನಗಿಂಬ–ನನ್ಮನದ ।
ಜಗುಲಿ ಮ್ಯಾಗ ಒರಗವ್ವ ||೭೪||

* * *

ಹಳ್ಳs ಕೊಳದಾಗ ಮುಳ್‌ಜಾಜೀ ವನದಾಗ ।
ಎಲ್ಲೆಲ್ಲೋ ನಿನ್ನ ಹುಡುಕೀದೆ ।
ಎಲ್ಲೆಲ್ಲೊ ನಿನ್ನ ಹುಡುಕೀದೆ-ಸರಸೋತಿ ।
ಎಲ್ಲಿ ಹೋದೆವ್ವ ಪದಬರಲಿ ||೭೫||

* * *

ಚಂದಗಾವಿಯ ಸುಟ್ಟು ಮಲ್ಲೀಗಿ ಹೂ ಮುಡಿದು ।
ಅಂದಾಲದೊಳಗೆ ಪಗಡೀಯ ।
ಅಂದಾಲದೊಳಗೆ ಪಗಡೀಯ–ಆಡೂವ ।
ರಂಭಿ ಸರಸೋತಿ ಕೊಡು ಮತಿಯ ||೭೬||

ಹಾದೀಯ ಮನಿಯವಳೆ ಪಾದs ದುಂಗುರದವಳೆ ।
ಗೋದೀಯ ಸೀರಿ ನೀರಿಗಿಯವಳೆ ।
ಗೋದೀಯ ಸೀರಿ ನೀರಿಗಿಯವಳೆ–ಸರಸೋತಿ ।
ಬೋಧೀಸು ತಾಯಿ ಸವಿ ನುಡಿಯ ॥೭೭॥

* * *

ಹಡೆದವ್ವ ಸರಸೋತೀ ಬಾಗ್ಲಾಗ ಯಾಕ್ನಿಂತಿ ।
ತೋರ್ಸೇನು ಬಾರs ನಿನಗಿಂಬ ।
ತೋರ್ಸೇನು ಬಾರs ನಿನಗಿಂಬ–ನನ್ಮನದ ।
ಜಗುಲಿಮ್ಯಾಲೆ ಒರಗವ್ವ ॥೭೮॥

* * *

ಅಟ್ಟs ಬೆಟ್ಟsದೊಳಗ ಪುಟ್ ಜಾಜೀವನದಾಗ ।
ಸೆಟೆಯವಳೆ ನಿನ್ನ ಹುಡುಕೀದೇ ।
ಸೆಟೆಯವಳೆ ನಿನ್ನ ಹುಡುಕೀದೇ–ಸರಸೋತಿ ।
ಎತ್ತ ಹೋದೆವ್ವ ಪದ ಬರಲಿ ॥೭೯॥

* * *

ನುಗ್ಗೀಯ ಮರದಡಿಗೆ ನಿದ್ದೀಯ ಮಾಡ್ಹೋಗಿ ।
ಎಗ್ಗಿಲ್ದೆ ಬಂದೆ ನಿನ್ಬಳಿಗೆ ।
ಎಗ್ಗಿಲ್ದೆ ಬಂದೆ ನಿನ್ಬಳಿಗೆ–ಸರಸೋತಿ ।
ಚಂದುಳ್ಳ ಹಾಡು ಕಲಿಸವ್ವ ॥೮೦॥

* * *

ಏಳೇಲೆ ಮಾವೀನ ತಾಳೀನಲ್ಲಿರುವವಳೆ ।
ತಾಳsದ ಗತಿಗೆ ನಲಿಯುವಳೆ ।
ತಾಳsದ ಗತಿಗೆ ನಲಿಯುವಳೆ–ಸರಸೋತಿ ।
ನಾಲಿಗೆಗಕ್ಷರವ ಕಲಿಸವ್ವ ॥೮೧॥

* * *

ಎಂಟೇಲೆ ಮಾವೀನ ದಂಟೀನಲ್ಲಿರುವವಳೆ ।
ಘಂಟೀಯ ಗತಿಗೆ ನಲಿಯುವಳೆ ।
ಘಂಟೀಯ ಗತಿಗೆ ನಲಿಯುವಳೆ–ಸರಸೋತಿ ।
ಗಂಟಲದ ತೊಡರ ಬಿಡಿಸವ್ವ ॥೮೨॥

ಸರಸೀಯ ಬಳಿಯಲ್ಲಿ ಸರಸ ಮಾಡುವ ಹೆಣ್ಣೆ ।
ಅವಸರ್ದಾಗ ಬಂದೆ ನಿನ ಬಳಿಗೆ ।
ಅವಸರ್ದಾಗ ಬಂದೆ ನಿನ ಬಳಿಗೆ–ಸರಸೋತಿ ।
ಕೆಲಸಾ ಬಿಟ್ಟು ಹಾಡು ಕಲಿಸವ್ವ ||೮೩||

* * *

ಎತ್ತsಲಾರದ ಬಡಿಗಿ ಬಗಲಾಗ ಜೋಳಿಗಿ ।
ಎತ್ಲಾಗ ಹೊರಟೀರಿ ಹೊರಪಯಣ ।
ಎತ್ಲಾಗ ಹೊರಟೀರಿ ಹೊರಪಯಣ-ಮಲ್ಲಯ್ಯ ।
ಬಡವರ ಮನಿಯಾಗ ನಿನ ಸೇವೆ ||೮೪||

* * *

ಎತ್ತಲಾರದ ಶಂಖು ಹೆಗಲಲ್ಲಿ ರಾಮ್ಬಾಣಾ ।
ಎತ್ಲಾಗ ಹೊರಟೀರಿ ಹೊರಪಯಣ ।
ಎತ್ಲಾಗ ಹೊಟೀರಿ ಹೊರಪಯಣ-ರಂಗಯ್ಯ ।
ಬಡವರ ಮನೀಯ ಹರಿಸೇವೆ ||೮೫||

* * *

ನೆಸ್‌ವೀಯ ಬಡಗೀಯ ಬೇಗನೆ ಬರಹೇಳಿ ।
ಭಾರಿ ಉಳಿ ಬಾಚಿ ಸಹಿತ್ವಾಗಿ ।
ಭಾರಿ ಉಳಿ ಬಾಚಿ ಸಹಿತ್ವಾಗಿ–ಮಲ್ಲಯ್ಯನ ।
ಭಾರೀಯ ತೇರು ಕಟೀಲಾಕ ||೮೬||

* * *

ಕೊಟ್ಟೂರ ಬಡಗೀಯ ತಟ್ಟನೆ ಬರಹೇಳಿ ।
ಕಟ್ಟೀ ಉಳಿ ಬಾಚಿ ಸಹಿತ್ವಾಗಿ ।
ಕಟ್ಟೀ ಉಳಿ ಬಾಚಿ ಸಹಿತ್ವಾಗಿ-ಮಲ್ಲಯ್ಯನ ।
ಭಾರೀ ತೇರು ಕಟೀಲಾಕ ||೮೭||

* * *

ಹರಪನ ಹಳ್ಳೀಯ ವಾರ್ಯಾಗ ಇರುವವನೆ ।
ಗಿರಿಜೆಯ ಮಗನೆ ಬಸವಣ್ಣ ।
ಗಿರಿಜೆಯ ಮಗನೆ ಬಸವಣ್ಣ–ಬೆಳ್ಳಿದೇವಾ ।
ಒಳ್ಳೇಯ ಪದಗಳ ಬರಕೋಡೋ ||೮೮||

ಹೆಬ್ಬಾಕಲಲ್ಲಿರುವ ಕೊಟ್ಟೂರ ಬಸವಂಗೆ ।
ಕಬ್ಬೀನ ಜಲ್ಲಿ ನೆನೆಗಡಲಿ ।
ಕಬ್ಬೀನ ಜಲ್ಲಿ ನೆನೆಗಡಲಿ–ಸಲ್ಲಿಸುವೆ ।
ಕೊಟ್ಟೂರ ಬಸವಾ ಕೊಡುಮತಿಯಾ ||೮೯||

* * *

ಆರತಿ ಹಿಡುಕೊಂಡು ಆರ್ಯಾಣ ತಿರುಗಿದರ ।
ದೇವರಿಲ್ಲೇನ ಗುಡಿಯಾಗ ।
ದೇವರಿಲ್ಲೇನ ಗುಡಿಯಾಗ–ಕಳಕ ಮಲ್ಲ ।
ದವನದ ಮಗ್ಗ್ಯಾಗ ಅಡಿಗ್ಯಾನ ||೯೦||

* * *

ಹಚ್ಚೀ ಬಟ್ಟಿನ ಮ್ಯಾಲೆ ಹರಿದ.ತೋ ಕುಂಕೂಮ ।
ನೆತ್ತೀಮ್ಯಾಲೆ ಐದು ನೆನೆದಂಡಿ ।
ನೆತ್ತೀಮ್ಯಾಲೆ ಐದು ನೆನೆದಂಡಿ-ಹಾಕಿಕೊಂಡು ।
ಮುತ್ತೈದಿ ಸಾವುಕೊಡು ಶಿವನೆ ||೯೧||

* * *

ಕ್ಯಾವೀಯ ಹೊದ್ದಾರ ಕ್ಯಾವೀಯ ಧರಿಸ್ಯಾರ ।
ಮಾವೀನ ಮರಕ ಮಲಿಗ್ಯಾರ ।
ಮಾವೀನ ಮರಕ ಮಲಿಗ್ಯಾರ-ಅಂದಾನಸ್ವಾಮಿ ।
ಮಾಯಾದರವ್ವ ಮಠದಾಗ ||೯೨||

* * *

ಹೊತ್ತಽ ಮುಳುಗಿದರೇನ ಕತ್ತಲಾವರೇನ ।
ಅಪ್ಪ ನಿನ ಗುಡಿಗೆ ಬರುವೇನ ।
ಅಪ್ಪ ನಿನ ಗುಡಿಗೆ ಬರುವೇನ–ಕಳಕಮಲ್ಲ ।
ಮುತ್ತೀನ ಬಾಗೀಲು ತೆರೆದೀಡ ||೯೩||

* * *

ಮಂದೇನು ಕೊಟ್ಟೇತ ಮನವೇನು ದಣಿದೀತ ।
ಮುಂಜಾನ ದಾನ ಗಿರಿಮಲ್ಲ ।
ಮುಂಜಾನ ದಾನ ಗಿರಿಮಲ್ಲ–ಕೊಟ್ಟೂರ ।
ಮನಿ ತುಂಬಿ ನಮ್ಮ ಮನ ತುಂಬಿ ||೯೪||

ಪಾದsತೀರ್ಥವ ಸಲಿಸಿ ಪಾವsನಾಯಿತು ಜನ್ಮ।
ರೋಮ ರೋಮೆಲ್ಲ ರವಿಚಿನ್ನ।
ರೋಮ ರೋಮೆಲ್ಲ ರವಿಚಿನ್ನ–ಗುರು ನಿಮ್ಮ।
ಪಾದದಲಿ ಕಂಡೆ ಪದಗೋಳು॥ ॥೯೫॥

* * *

ಹೊತ್ತಿನಂತೆ ಎದ್ದು ಯಾರ್ಯಾರ ನೆನಿಯಾಲಿ।
ಕಲ್ಲು ಕಾವೇರಿ ಕಪಿನೀಯ।
ಕಲ್ಲು ಕಾವೇರಿ ಕಪಿನೀಯ–ನೆನೆದsರ।
ಅಂಟೇದ ಪಾಪ ಪರಿಹಾರ ॥೯೬॥

* * *

ಏಳುತಲಿ ನೆನವೇನು ಭಾಳಲೋಚನ ಪದನ।
ಜೋಳಕ್ಕ ಹೊನ್ನ ಮಳೆಗರದ।
ಜೋಳಕ್ಕ ಹೊನ್ನ ಮಳೆಗರದ-ಕೈಲಾಸದ।
ದೇವ ಮಲ್ಲಯ್ಯನ ನೆನವೇನು ॥೯೭॥

* * *

ನಾರಾಯಣ ನಿನ್ನ ನಾಮದ ಬೀಜವ।
ನಾನೆಲ್ಲಿ ಬಿತ್ತಿ ಬೆಳಿಯಾಲಿ।
ನಾನೆಲ್ಲಿ ಬಿತ್ತಿ ಬೆಳಿಯಾಲಿ-ನಿನನಾಮ।
ನಾಲೀಗಿ ಮ್ಯಾಲ ಬೆಳದೇನೊ ॥೯೮॥

* * *

ಎದ್ದವಳೇ ನೆನದೇನು ಸಿದ್ಧೂರ ಯೋಗೀಯ।
ಮದ್ದೂರ ಕೆರೆಯ ಬಸವನ್ನ।
ಮದ್ದೂರ ಕೆರೆಯ ಬಸವನ್ನ-ನೆನೆದsರ।
ಹೊತ್ತಿದ್ದ ಪಾಪ ಪರಿಹಾರ ॥೯೯॥

ಮೂಡಲ ಮುತ್ತಯ್ಯ ನೋಡಯ್ಯ ಬಡತsನ।
ಮೂಡ್ಲಲ್ಲಿ ಜೋಳ ಎದೆಯುದ್ದ।
ಮೂಡ್ಲಲ್ಲಿ ಜೋಳ ಎದೆಯುದ್ದ-ಬೆಳೆದsರ।
ಮಾಡೂವೆ ನಿನಗೆ ಹರಿಸೇವೆ ॥೧೦೦॥

ಯಾರಾಸೆ ನನಗಿಲ್ಲ ಭಾಗ್ಯದ ಬಲವಿಲ್ಲ ।
ಕಲ್ಲೊಳ್ಳಿ ಊರ ಕರಿ ರಂಗ ।
ಕಲ್ಲೊಳ್ಳಿ ಊರ ಕರಿರಂಗ-ವೆಂಕೋಬ ।
ನಿನ್ನಾಸೆ ನನಗ ಅನುಗಾಲ ||೧೦೧||

* * *

ಹೂವಿನ್ಯಾಗ ಹುದಿಗ್ಯಾನ ಮಾಲ್ಯಾಗ ಮಲಿಗ್ಯಾನ ।
ಮೋಗ್ಯಾಗ ಕಣ್ಣ ತೆರದಾನ ।
ಮೋಗ್ಯಾಗ ಕಣ್ಣ ತೆರದಾನ-ಲಿಂಗಯ್ನ ।
ನೋಡುತಗೆ ನಿದ್ದಿ ಬಯಲಾತು ||೧೦೨||

* * *

ತಿರುಪತಿಯ ಹಾದೀಲಿ ಕಲ್ಲಿಲ್ಲ ಮುಳ್ಳಿಲ್ಲ ।
ಸಾಸೀವೆ ತೋರ-ಗಿಡವಿಲ್ಲ ।
ಸಾಸೀವೆ ತೋರ ಗಿಡವಿಲ್ಲ-ತಿಮ್ಮಪ್ಗ ।
ಸೋಸಿ ಬಿತ್ತಪ್ಪ ದವನಽವ ||೧೦೩||

* * *

ತಿರುಪತಿಯ ಹಾದೀಲಿ ತಿರುತುಳಸಿ ಮರಹುಟ್ಟಿ ।
ಬೇಲೂರ್ಗೆ ಬೇರು ಹರಿದಾವೊ ।
ಬೇಲೂರ್ಗೆ ಬೇರು ಹರಿದಾವೋ-ತಿಮ್ಮಪ್ಪ ।
ಕಲ್ಯಾಣಕ ಮುಗ್ಗಿ ಸುರಿದಾವೋ ||೧೦೪||

* * *

ಮೂಡಲ ತಿಮ್ಮಪ್ಪ ಮುತ್ತ ಮಾರುತ ಬಂದ ।
ಬೇಲೂರ ಚನ್ನ ಬೆಲೆ ಮಾಡೋ ।
ಬೇಲೂರ ಚನ್ನ ಬೆಲೆ ಮಾಡೋ-ಕೊಟ್ಟಽರೆ ।
ಬೇಡಽವೆ ಗಿಡ್ಡಿ ಕೊರಳೀಗೆ ||೧೦೫||

* * *

ಯಾಲಕ್ಕಿ ಹೂವಾಯ್ತು ಎಲೆಗೊಂದು ಕಾಯಾಯ್ತು ।
ಹೋಗುವ ದಾಸರಿಗೆ ಹೊರೆಯಾಯ್ತು ।
ಹೋಗುವ ದಾಸರಿಗೆ ಹೊರೆಯಾಯ್ತು-ತಿಮ್ಮಪ್ಗ ।
ಯಾಲಕ್ಕಿಯಾಯ್ತು ಮುಡುಪೀಗೆ ||೧೦೬||

ಬೆಟ್ಟಽವ ಹತ್ತೂತ ಕಿರುಬೆವರು ಬೆವರೂತ ।
ನಡಿ ನಡಿಗೆ ಸೋಂಕ ಗುಡಿಸೂತ ।
ನಡಿ ನಡಿಗೆ ಸೋಂಕ ಗುಡಿಸೂತ-ತಿಮ್ಮಪ್ಪ ।
ಬೆಟ್ಟ ಹತ್ತುವದೆ ಬೆಳಗಾಯ್ತು ||೧೦೭||

* * *

ಬೆಟ್ಟದ ಮ್ಯಾಲ ನಮಗಿಷ್ಟಾರು ಯಾರುಂಟು ।
ಶ್ರೇಷ್ಠ ತಿಮ್ಮಪ್ಪ ನಮ್ಮಾತ ।
ಶ್ರೇಷ್ಠ ತಿಮ್ಮಪ್ಪ ನಮ್ಮಾತ-ಆದಽರ ।
ಇಷ್ಟಾರ್ಥ ವಿತ್ತು ಸಲುಹೂವ || ||೧೦೮||

* * *

ತಿರುಪತಿ ಹಾದೀಲಿ ತಿದ್ದಯ್ಯ ಹೋರೀಯು ।
ಗೆಜ್ಜಿ ಸರಪಽಣಿ ಧರಿಸಯ್ಯ ।
ಗೆಜ್ಜಿ ಸರಪಽಣಿ ಧರಿಸಯ್ಯ-ಮೂಡಽಣ ।
ದೊಡ್ಡನಿಗೆ ದಂಡ ನಡೆಸಯ್ಯ ||೧೦೯||

* * *

ಸ್ವಾಮೀಯ ಮದುವೀಗೆ ಭೂಮಿ ಚಪ್ಪರ ಹೂಡಿ ।
ಗಾಳಿ ಹಂಜರದ ಗಳಬೀಸಿ ।
ಗಾಳಿ ಹಂಜರದ ಗಳಬೀಸಿ-ತಿಮ್ಮಪ್ಪ ।
ಸ್ವಾಮಿನಿನ ಮದುವೆ ಶನಿವಾರ ||೧೧೦||

* * *

ಬೆಟ್ಟಽದ ತಿಮ್ಮಪ್ಪ ಬೇಲೂರ ಚೆನ್ನಿಗ ।
ನಾಗಮಂಗಲದ ನರಸಿಂಹ ।
ನಾಗಮಂಗಲದ ನರಸಿಂಹ-ಈ ಮೂವ್ವರು ।
ನಾಡೆ ಲೋಕಽದ ಚಲುವಽರು ||೧೧೧||

* * *

ಹರ ಹರ ಎಂದು ಹರಿವ ಗಂಗೆಯ ಮಿಂದೆ ।
ಶಿವ ಶಿವ ಎಂದು ಮುಳುಗಿದೆ ।
ಶಿವ ಶಿವ ಎಂದು ಮುಳುಗಿದೆ-ಸಮುದ್ರವ ।
ತೆರೆಬಂದು ಪಾಪ ಕಳೆದುವು ||೧೧೨||

ಏಳು ಏಳು ಹರಿಯೆ ಏಳು ಚಿನ್ನದ ಗಿರಿಯೆ ।
ತೋಳು ಚಪ್ಪರದ ತುಳಸೀಯು ।
ತೋಳು ಚಪ್ಪರದ ತುಳಸೀಯು-ಗಿಡದಲ್ಲಿ ।
ಏಳಯ್ಯ ಹರಿಯೆ ಬೆಳಗಾಯ್ತು ||೧೧೩||

* * *

ಬಾರಿ ಸರಪಽಣಿ ಬಲಗೈಲಿ ನಿಂಬೆಹಣ್ಣು ।
ವೋಲಾಡಿ ಶಂಖನೂದುವ ।
ವೋಲಾಡಿ ಶಂಖನೂದುವ-ರಂಗಯ್ಯ ।
ಮೇಲಾಡಿ ಬಂದ್ಲು ತುಳಸಮ್ಮ ||೧೧೪||

* * *

ಶಂಖು ನುಡಿದಾವು ತೆಂಕಲದ ಒಡೆಯನಿಗೆ ।
ಎಣ್ಣೆ ಮಜ್ಜನದ ಒಡೆಯನಿಗೆ ।
ಎಣ್ಣೆ ಮಜ್ಜನದ ಒಡೆಯನಿಗೆ-ರಂಗಯ್ಯ ।
ಶಂಖು ನುಡಿದಾವೋ ಶನಿವಾರ ||೧೧೫||

* * *

ತೇರು ನಾಳೇ ಎಂದು ಸಾರಿದರು ಪರಸೀಯ ।
ಮಲೆಯ ಸೋಲಿಗರ ಭಾವೈಕ ।
ಮಲೆಯ ಸೋಲಿಗರ ಭಾವೈಕ-ಬರಲೆಂದು ।
ಸಾರಿದರು ತೇರು ನಾಳೆಂದು ||೧೧೬||

* * *

ಬೆಳ್ಳಿ ಬೆಟ್ಟದ ಮೇಲೆ ಬಿಳಿ ಎಮ್ಮೆ ಕಾಯುವನೆ ।
ಬೆಳ್ಳಿ ಕೋಲೀನ ಬಿಳಿಗೀರಿ ।
ಬೆಳ್ಳಿ ಕೋಲೀನ ಬಿಳಿಗೀರಿ-ನಿನ್ನೆಮ್ಮೆ ।
ಎಲ್ಲಿ ಮೇದಲ್ಲಿ ತಳಿಗ್ಯಾವೋ ||೧೧೭||

* * *

ತಳಿಗಿದರೆ ತಳಗಽಲಿ ತಿಳಿನೀರ ಕುಡಿಯಽಲಿ ।
ಕಾರಂಜಿ ಮಡುವ ಕಲಕಽಲಿ ।
ಕಾರಂಜಿ ಮಡುವ ಕಲಕಽಲಿ-ನನ್ನೆಮ್ಮೆ ।
ಸಾಕಾಗುವಷ್ಟು ಕರೆಯಽಲಿ ||೧೧೮||

ಸಾಕಷ್ಟು ಹಾಲೀಗೆ ಬೇಕಾದ ಮಂತಾಡಿ।
ವಜ್ರ ಮಾಣಿಕದ ಕಡಗೋಲು।
ವಜ್ರ ಮಾಣಿಕದ ಕಡಗೋಲು-ತಕ್ಕೊಂಡು।
ಗುಜ್ಜಾಡಿ ಮೊಸರ ಕಡೆದಾಳೊ ॥೧೧೯॥

*   *   *

ಮೊಸರು ಕಡಿಯುವಾಗ ಹೊಸಮುತ್ತು ಗಲಿರೆಂದು।
ಬಚ್ಚಲ ಕಂಬ ಬಳುಕೀತು।
ಬಚ್ಚಲ ಕಂಬ ಬಳುಕೀತು-ಲಕ್ಷ್ಮಿದೇವಿ।
ಮುತ್ತೈದೆ ಮೊಸರ ಕಡೆವಾಗ ॥೧೨೦॥

*   *   *

ಉದ್ದವಾದವು ತೇರು ಉರಿಯವಾದವು ಹೊರಜಿ।
ಉದ್ದಂಡಕಾರ ಜಗದೊಡೆಯ।
ಉದ್ದಂಡಕಾರ ಜಗದೊಡೆಯ–ನಿನತೇರು।
ಮದ್ಯಾಣ್ಕ ಮೊದಲ ಹರಿದಾವೊ ॥೧೨೧॥

*   *   *

ಬೆಟ್ಟದವರೇ ಕಾಯ್ನ ಸೋಲಿಗರು ಕೊಯ್ವಾಗ।
ನೋಡುಬಾ ಗೆಣೆಯ ಮರವೇರಿ।
ನೋಡುಬಾ ಗೆಣೆಯ ಮರವೇರಿ-ರಂಗಯ್ನ।
ಜೋಡೀಯ ಕುದುರೆ ಕುಣಿದಾವ ॥೧೨೨॥

*   *   *

ಹತ್ತು ಗಳಿಗೇಯಾಯ್ತು ಹತ್ತಯ್ಯ ತೇರೀಗೆ।
ಇಟ್ಟಾಡು ತಾವ ಹಣಜವನ।
ಇಟ್ಟಾಡು ತಾವ ಹಣಜವನ–ಬಾಳೇಹಣ್ಣು।
ಸೃಷ್ಟಿ ಪಾಲಕನ ಎಡಬಲಕ ॥೧೨೩॥



# ಬೀಸುವ ಕಲ್ಲು

ಜೋಳ ಬೀಸುವ ಕಲ್ಲಿ ಸಕ್ಕರೆಯ ಒಡೆಗಲ್ಲಿ ।
ತಂದೆಯ ಮನೆಯ ರಜಗಲ್ಲಿ ।
ತಂದೆಯ ಮನೆಯ ರಜಗಲ್ಲಿ–ಪಚ್ಚೀಕಲ್ಲಿ ।
ಚಿತ್ತರದ ಕಲ್ಲಿ ಕೊಡು ಧನಿಯ ||೧೨೪||

*   *   *

ರಾಗಿ ಬೀಸುವ ಕಲ್ಲಿ ರನ್ನ ಮುತ್ತಿನ ಕಲ್ಲಿ ।
ಅಣ್ಣಽನ ಮನೆಯ ಸಿರಿಗಲ್ಲಿ ।
ಅಣ್ಣಽನ ಮನೆಯ ಸಿರಿಗಲ್ಲಿ–ಪಚ್ಚೆಕಲ್ಲಿ ।
ಶೋಭನದ ಕಲ್ಲಿ ಕೊಡು ಧನಿಯ ||೧೨೫||

*   *   *

ಅಕ್ಕಿ ಬೀಸುವ ಕಲ್ಲಿ ಸಕ್ಕರೆಯ ಪುಡಿಗಲ್ಲಿ ।
ಧರುಮಾರ ಮನೆಯ ಪದಗಲ್ಲಿ ।
ಧರುಮಾರ ಮನೆಯ ಪದಗಲ್ಲಿ–ಪಚ್ಚೆಕಲ್ಲಿ ।
ಮುತ್ತಿನ ಕಲ್ಲಿ ಕೊಡು ಧನಿಯ ||೧೨೬||

*   *   *

ಕಲ್ಲವ್ವ ತಾಯಿ ನುರಿಸವ್ವ ಜೋಳವನು ।
ಜಲ್ಲ ಜಲ್ಲಽನೆ ಉದುರವ್ವ ।
ಜಲ್ಲ ಜಲ್ಲಽನೆ ಉದುರವ್ವ–ನಾನಿನಗೆ ।
ಬೆಲ್ಲ ದಾರುತಿಯ ಬೆಳಗೇನು ||೧೨೭||

*   *   *

ಕಲ್ಲಮ್ಮ ತಾಯಿ ಮೆಲ್ಲಮ್ಮ ರಾಗೀಯ ।
ಜಲ್ಲ ಜಲ್ಲಽನೆ ಉದುರಮ್ಮ ।
ಜಲ್ಲ ಜಲ್ಲಽನೆ ಉದುರಮ್ಮ–ನಾ ನಿನಗೆ ।
ನೆಲ್ಲಕ್ಕಿ ಪಡಿಯ ನಡಿಸೇನು ||೧೨೮||

## ಗೆಲುವ ನೀಡು

ನಿನ್ ಹಾದೀಲಿ ಚಲ್ಲೀವಿ ಮಲ್ಲೀಗಿ ಪರಿಮಳ ।
ಬೇಡೂವೆ ಕಾರ ಬೆಟ್ಟದ ।
ಬೇಡೂವೆ ಕಾರ ಬೆಟ್ಟದ–ಮಲ್ಲಯ್ಯ ।
ಸೋಲಿಸ ಬೇಡ ಗೆಲಿಸಯ್ಯ ||೧೨೯||

* * *

ಹಾದೀ ಬೀದ್ಯಾಗೆಲ್ಲ ತುಂಬೇದ ನಿನ್ ಪರಸಿ ।
ರಥವೇರಿ ಬರುವ ಕೊಟ್ಟೂರ ।
ರಥವೇರಿ ಬರುವ ಕೊಟ್ಟೂರ–ಬಸವಣ್ಣ ।
ಸೋಲಿಸ ಬೇಡ ಗೆಲಿಸಯ್ಯ ||೧೩೦||

* * *

ಚಿನ್ನದ ಗುಡಿಯವನೆ ಮುತ್ತಿನ ರಥದವನೆ ।
ಗುಂಡ್ಲುಲಿಯ ಮ್ಯಾಲೆ ಮೆರಿಯುವನೆ ।
ಗುಂಡ್ಲುಲಿಯ ಮ್ಯಾಲೆ ಮೆರಿಯುವನೆ–ಮಾದಯ್ಯ ।
ಸೋಲಿಸ ಬೇಡ ಗೆಲಿಸಯ್ಯ ||೧೩೧||

* * *

ನಂಜನ ಗೂಡಿನಲ್ಲಿ ನೆಂಟ ನೀನಿರುವಾಗ ।
ಎಂಟೆಂಟು ದಿನಕ ಬರುವೇನು ।
ಎಂಟೆಂಟು ದಿನಕ ಬರುವೇನು–ನಂಜುಂಡ ।
ಸೋಲಿಸ ಬೇಡ ಗೆಲಿಸಯ್ಯ ||೧೩೨||

ವೆಂಕಟ ರಮಣಗೆ ಎಳೆಯ ಗೋವಿಂದನೆ ।
ಭಕುತರಿಗೊಲಿಯೋ ಸುಗುಣನೆ ।
ಭಕುತರಿಗೊಲಿಯೋ ಸುಗುಣನೆ–ತಿಮ್ಮಯ್ಯ ।
ಸೋಲಿಸ ಬೇಡ ಗೆಲಿಸಯ್ಯ ||೧೩೩||



## ಎಂಥ ಹುಡುಗ ಬೇಕು ?

ಒಕ್ಕಲಿಗರ ಹುಡುಗನ್ನ ಒಲ್ಲೆ ನನ್ತಾಯಿ ।
ಉಕ್ಕೇಯು ಸಾಲಾಗ ಮನೆಮಾರು ।
ಉಕ್ಕೇಯು ಸಾಲಾಗಮನೆಮಾರು-ಮಾಡಿಕೊಂಡು ।
ದುಃಖ ಮಾಡ್ತಾನ ಕಣದಾಗ ||೧೩೪||

* * *

ಅಗಸರ ಹುಡುಗನ್ನ ಒಲ್ಲೆ ನನ್ಹಡೆದವ್ವ ।
ಕಣಕಾಲು ಮೊಣಕಾಲು ಮೈಲೀಗೆ ।
ಕಣಕಾಲು ಮೊಣಕಾಲು ಮೈಲೀಗೆ-ಮಾಡಿಕೊಂಡು ।
ತಿಣುಕಾಡ್ತ ಬಟ್ಟೆ ಒಗೆವ್ರನು ||೧೩೫||

* *

ಒಡ್ಡರ ಹುಡುಗನ್ನ ಒಲ್ಲೆ ತಾಯವ್ವ ।
ಗುದ್ದಲಿ ಸಲಿಕಿ ಹೆಗಲ್ಮ್ಯಾಲೆ ।
ಗುದ್ದಲಿ ಸಲಿಕಿ ಹೆಗಲ್ಮ್ಯಾಲೆ-ಇಟಗೊಂಡು ।
ಗುದ್ದ್ಯಾಡಿ ಮಣ್ಣ ಕಡಿದಾನು ||೧೩೬||

*

ಕೂಡಿದರೆ ಕೂಡ್‌ಬೇಕು ಬೇಡರ ಹುಡುಗನ್ನ ।
ಪಾವುಡದ ಚುಂಗು ಮೊಳದುದ್ದ ।
ಪಾವುಡದ ಚುಂಗು ಮೊಳದುದ್ದ-ಬಿಟಗೊಂಡು ।
ಓಡ್ಯೋಗುವ ಮೊಲವ ಹೊಡೆದಾನು ||೧೩೭||



## ಕಲ್ಯಾಣದ ಬಸವ

ಕಲ್ಯಾಣ ಮನಿಯಾಗ ಎಲ್ಲರ ಶರಣರ ಕಂಡೆ ।
ಬಲ್ಲಿದನ ಕಂಡೆ ಬಸವಣ್ಣನ ।
ಬಲ್ಲಿದನ ಕಂಡೆ ಬಸವಣ್ಣನ-ಪಾದಕ್ಕ ।
ಚಲ್ಯಾಡಿ ಬಂದೆ ನನ ಮನವೆ ||೧೩೮||

ಬಸವ ನಿನ ಕಲ್ಯಾಣ ದಶ ದಿಕ್ಕ ಕೇಳ್ಯಾವ ।
ಮುಸುಕಿ ಜನ ಬಂತು ಮಂಟಪಕ ।
ಮುಸುಕಿ ಜನ ಬಂತು ಮಂಟಪಕ-ಕಲ್ಯಾಣ ।
ಉಸುರಾತೊ ಶಿವನೆ ಶರಣರಿಗೆ ॥೧೩೯॥

* * *

ಶರಣರ ನೆನೆದರ ಸರಗೀಯು ಇಟ್ಹಾಂಗ ।
ಅರಳ ಮಲ್ಲೀಗಿ ಮುಡಿದ್ಹಾಂಗ।
ಅರಳ ಮಲ್ಲೀಗಿ ಮುಡಿದ್ಹಾಂಗ-ಕಲ್ಯಾಣದ ।
ಶರಣರನು ನೆನೆ ಎಲೆ ಮನವೆ ॥೧೪೦॥

* * *

ಕಲ್ಯಾಣ ಬಯಲಾಗ ಎಲ್ಲ ಶರಣರು ಕೂಡಿ ।
ಬಲ್ಲವರು ಮಾತ ಹೇಳ್ಯಾರ ।
ಬಲ್ಲವರು ಮಾತ ಹೇಳ್ಯಾರ-ಜನದಾಗ ।
ಹೊಲ್ಲೆಂಬೊ ಶಬುದ ಮಾಯಾತ ॥೧೪೧॥

* * *

ಮಾತು ಕುಲ ಹೊಲೆಯಲ್ಲ ಜಾತಿ ಸೂತಕವಲ್ಲ ।
ನೀತಿ ನಿರ್ಬಳಕಿ ಕಲ್ಯಾಣ ।
ನೀತಿ ನಿರ್ಬಳಕಿ ಕಲ್ಯಾಣ-ಮಹಾ ಮನೆಗೆ ।
ದಾತ ಬಸವಣ್ಣ ಶಿವಭಕ್ತ ॥೧೪೨॥



## ತವರಿನ ದೊಡ್ಡಸ್ತಿಕೆ

ಜೋಗಿ ಜಂಗಮರೇ ಹೋಗಿ ನನ ತವರೀಗೆ ।
ಸಣ್ಣಕ್ಕಿ ದಾನ ಕೊಡತಾನ
ಸಣ್ಣಕ್ಕಿ ದಾನ ಕೊಡತಾನ-ನನ ಅಣ್ಣಾ ।
ಹೊನ್ನಿನ ದಾನ ಕೊಡತಾನ ॥೧೪೩॥

ನೀರುಳ್ಳಿ ದಾನ ನೀರು ಮಜ್ಜಿಗೆ ದ್ಹಾನ ।
ಮತ್ತೆ ಅಂಬಲಿದಾನ ಕೊಡತಾನ ।
ಮತ್ತೆ ಅಂಬಲಿದಾನ ಕೊಡತಾನ-ಅಣ್ಣಯ್ಯ ।
ಅಂಬುಲದ ಮುದ್ದೆ ಕೊಡತಾನ ||೧೪೪||

* * *

ಅತ್ತೀಗೆ ಬಸುರಿ ಮನಿಮುಂದೆ ಚಪ್ಪರ
ಅನ್ನ ಛತ್ರವ ಇಡಿಸ್ಯಾನ ।
ಅನ್ನ ಛತ್ರವ ಇಡಿಸ್ಯಾನ-ಅಣ್ಣಯ್ಯ ।
ಮನಿಮುಂದೆ ಇಡಿಸ್ಯಾನ ಅರವಟಿಗೆ ||೧೪೫||

* * *

ಹಾದೀಯ ಅರಮನೆ ಬೀದೀಯ ಪಡಸಾಲೆ ।
ಏಳುಸುತ್ತಿನ ಕಲ್‌ಭಾವಿ ।
ಏಳು ಸುತ್ತಿನ ಕಲ್‌ಭಾವಿ-ಕಟ್ಟಿಸ್ಯಾನ ।
ಇಡಿಸ್ಯಾನ ತಮ್ಮಯ್ಯ ಅರವಟ್ಟಿಗೆ ||೧೪೬||

## ಬಳೆಗಾರ

ಇನ್ನೆಲ್ಲಿ ನೋಡಲೆಂಥ ಬಳಿಗಾರ ಸೆಟ್ಟೀನ ।
ನಮ್ಮ ನಾಡಾಗ ಬಳೆಯಿಲ್ಲ ।
ನಮ್ಮ ನಾಡಾಗ ಬಳೆಯಿಲ್ಲ-ಬಳೆಗಾರ ।
ಹೋಗಿ ಬಾರಯ್ಯ ನನ್ನ ತವರೀಗಿ ||೧೪೭||

* * *

ನಿನ್ನ ತವರೂರ ನಾನೇನು ಬಲ್ಲೆನಮ್ಮ ।
ಗೊತ್ತಿಲ್ಲ ನನಗೆ ಗುರಿಯಿಲ್ಲ ।
ಗೊತ್ತಿಲ್ಲ ನನಗೆ ಗುರಿಯಿಲ್ಲ-ಮುತ್ತೈದಿ ।
ತೋರಿಸು ತವರೂರ ಹಾದೀಯ ||೧೪೮||

ಬಲಕ ಬಾಳಿಯು ಬಿಟ್ಟು ಎಡಕ-ಸೀಗಿಯು ಬಿಟ್ಟು ।
ನಟ್ಟ ನಡುವೆ ಹೊರಟ್ಹೋಗು ।
ನಟ್ಟ ನಡುವೆ ಹೊರಟ್ಹೋಗು-ಬಳೆಗಾರ ।
ಅಲ್ಲಿರುವದು ನನ್ನ ತವರೂರು ||೧೪೯||

* * *

ಅಣ್ಣನ ಮನಿಯಾಗ ನಂದೀ ಕೋಲ್ಕೈದು ।
ಗೊಂಬಿಯು ತೇರ್ಕೈದು ಹರಿದಾವು ।
ಗೊಂಬಿಯು ತೇರ್ಕೈದು ಹರಿದಾವು-ಬಳೆಗಾರ
ಅದೆ ಕಾಣೋ ನನ್ನ ತವರೂರು ||೧೫೦||

* * *

ಅಚ್ಚ ಕೆಂಪು ಬಳೆ ಕರಿಯ ಪಟ್ಟಿ ಬಳೆ ।
ನನ್ನ ಹಡೆದವ್ವಗೆ ಬಲು ಆಸೆ ।
ನನ್ನ ಹಡೆದವ್ವಗೆ ಬಲು ಆಸೆ-ಬಳೆಗಾರ ।
ಕೊಂಡ್ಹೋಗೋ ನನ್ನ ತವರೀಗಿ ||೧೫೧||



## ಹೊಗಳಿಕೆ

ಕೋಲನಾಡತೇವಿ ಕೊನೆಯ ಗುಡ್ಡದ ಮ್ಯಾಲ ।
ನವಿಲಿಂಗೆ ನಂಬೋ ಬೈಲಲ್ಲಿ ।
ನವಿಲಿಂಗೆ ನಂಬೋ ಬೈಲಲ್ಲಿ-ನಮ್ಮಯ್ಯ ।
ತಾವು ಕೂತು ಕೋಲ ಹೊಯಿಸ್ಯಾರು ||೧೫೨||

* * *

ಕಟ್ಟೇದ ಮುಂಡಾಸ ಕರಿಯನಿಗೆ ಕೊಟ್ಟರಿ ।
ಯೋಚನೆ ಮಾಡಿ ನಗತೀರಿ ।
ಯೋಚನೆ ಮಾಡಿ ನಗತೀರಿ-ನಮ್ಮಯ್ಯ ।
ಕೊಡಬೇಕು ನಿಮ್ಮ ಮಗನೀಗೆ ||೧೫೩||

ಊರ ಮುಂದೆಲ್ಲ ಹೊಗಳ್ಯಾರ ನಮ್ಮಯ್ನ |
ಕೇರಿ ಮುಂದೆಲ್ಲ ಮೆರೆದಾರೆ |
ಕೇರಿ ಮುಂದೆಲ್ಲ ಮೆರೆದಾರೆ-ಏನೆಂದು |
ದೊರೆಯು ನಮ್ಮಯ್ನ ಬಿರುದೆಂಬೆ ||೧೫೪||

* * *

ಅಟ್ಟ್ಯಾನ ಹತ್ಯಾರ ಪೆಟ್ಟ್ಯಾನೆ ಬಿಚ್ಚ್ಯಾರ |
ಶಾರೆಗೊಂದು ಮೂರು ಇಳಿಮೂರು |
ಶಾರೆಗೊಂದು ಮೂರು ಇಳಿಮೂರು-ನಮ್ಮಯ್ಯ |
ಬಿಚ್ಚಿ ಒಗೆದಾರ ವೈಮ್ಯಾಲ ||೧೫೫||

* * *

ಒಂದು ಮಡ್ಡೆಂಬೂದು ಬಂಡ್ಯೆಲ್ಲ ಗಾಲ್ಯೆಲ್ಲ |
ಪಾವಾಣೆ ಎಂಬೋದು ಹೊದಿಕ್ಯೆಲ್ಲ |
ಪಾವಾಣೆ ಎಂಬೋದು ಹೊದಿಕ್ಯೆಲ್ಲ-ನಮ್ಮಯ್ಯ |
ವಸ್ತ್ರ ವಗೆದಾರ ನಮ್ಮಯ್ಯ ||೧೫೬||

* * *

ಒನಕೆ ಒಳ್ಳೇದವ್ವ ಒಲಿದು ಕುಟ್ಟುವರಿಲ್ಲ |
ಸೀರೆ ಒಳ್ಳೇದವ್ವ ಸೆರಗಿಲ್ಲ |
ಸೀರೆ ಒಳ್ಳೇದವ್ವ ಸೆರಗಿಲ್ಲ-ಹೆಣ್ಣೀನ |
ಗುಣ ಒಳ್ಳೇದವ್ವ ರುಣವಿಲ್ಲ ||೧೫೭||

* * *

ಕಾಣೀಕಿ ಬಂದಾವು ಐದು ತೆಂಗಿನಕಾಯಿ |
ಯಾರ್ಯ್ಯಾರಿಗಂತ ಕಳಿಸಲಿ |
ಯಾರ್ಯ್ಯಾರಿಗಂತ ಕಳಿಸಲಿ-ನನ್ನಮ್ಮ |
ಬೇರು ಬಿಟ್ಟಂತೆ ಬಳಗವು ||೧೫೮||

* * *

ಅತ್ತೆ ಸತ್ತರೆ ಸೊಸೆಯು ಏನೆಂದು ಮರುಗುವಳು |
ಹಿತ್ತಲ ಕದವ ತಡೆಕೊಂಡು |
ಹಿತ್ತಲ ಕದವ ತಡೆಕೊಂಡು-ನಮ್ಮನೆಯ |
ಮೃತ್ಯು ದೇವತೆಯೆ ತೊಲಗೀತು ||೧೫೯||

ತಾಯಿ ಸತ್ತರೆ ಮಗಳು ಏನೆಂದು ಕೊರಗುವಳು ।
ಬಾಗೀಲ ಕದ ತಡೆಕೊಂಡು ।
ಬಾಗೀಲ ಕದ ತಡೆಕೊಂಡು-ನಮ್ಮನೆಯ ।
ಭಾಗ್ಯದೇವತೆಯೋ ನಡೆಯೀತು ॥೧೬೦॥



## ನಿಸರ್ಗದ ವರ್ಣನೆ

ಹಳ್ಳsದ ದಂಡ್ಯಾಗ ಹಸರು ಬಣ್ಣದ ಗುಬ್ಬಿ ।
ಬಿಸಲೀಗಿ ಬಾಯ ಬಿಡತ್ತೈತಿ ।
ಬಿಸಲೀಗಿ ಬಾಯ ಬಿಡತ್ತೈತಿ–ಆ ಗುಬ್ಬಿ ।
ಕುಸಲsದ ನಗುವ ನಗತ್ತೈತಿ ॥೧೬೧॥

* * *

ಹಳ್ಳsದ ಹೊಲದಾಗ ಬೆಳ್ಳsನ ಬಿಳಿಜೋಳ ।
ಮೆಲ್ಲsಕ ಮೇಲಿಯೋ ಗಿಣಿರಾಮ ।
ಮೆಲ್ಲsಕ ಮೇಲಿಯೋ ಗಿಣಿರಾಮಾ-ನನ್ನಣ್ಣ ।
ಕಲ್ಲ ಬಂದಾವು ಕಡಿಗಾಗೋ ॥೧೬೨॥

* * *

ಹಚ್ಚsನ ಮೈಯವನೆ ಹವಳsದ ತುಟಿಯವನೆ ।
ಎತ್ತ ಹೋಗಿದ್ಯೋ ಗಿಳಿರಾಮ ।
ಎತ್ತ ಹೋಗಿದ್ಯೋ ಗಿಳಿರಾಮಾ–ತವರವರ ।
ಉತ್ತತ್ತಿ ಬನಕ ಉಲುವಿಲ್ಲ ॥೧೬೩॥

* * *

ಬೆಳ್ಳsಗ ಬೆಳಗಾಗಿ ಬೆಳ್ಳಿ ಮೂಡಲವಾಗಿ ।
ಒಳ್ಳೊಳ್ಳೆ ಮೀನ ಗರಿ ತೆಗೆದು ।
ಒಳ್ಳೊಳ್ಳೆ ಮೀನ ಗರಿ ತೆಗೆದು–ಆಡ್ಯಾವ ।
ಗರತಿ ಗಂಗಮ್ಮನ ಉಡಿಯಾಗ ॥೧೬೪॥

ಹಿಪ್ಪೀ ಹೂವಿಗಾಗಿ ಹೆತ್ತs ತಾಯಿನ ಕೊಂದು ।
ಮತ್ತ ಕೋಗಿಲ ಮರನೇರಿ ।
ಮತ್ತ ಕೋಗಿಲ ಮರನೇರಿ-ಕೂಗಿದರ ।
ಹೆತ್ತವ್ವ ಎಲ್ಲಿ ದೊರೆತಾಳ ॥೧೬೫॥

* * *

ಮಾಗೀಯ ಮಳಿಗಾಲ ಹ್ಯಾಂಗಿದ್ದಿ ಕೋಗಿಲ ।
ಆಗರ ಭಾಳ ಅಡಕೀಯು ।
ಆಗರ ಭಾಳ ಅಡಕೀಯು-ಬನದಾಗ ।
ಕೂಗ್ಯಾಡಿ ಹೊತ್ತ ಕಳದೇನ ॥೧೬೬॥

* * *

ವರಳ ಸುತ್ತಲೆ ಅಕ್ಕಿ ಕೊರಳ ಸುತ್ತಲೆ ಮುತ್ತ ।
ಗುಡಿಸುತ್ತ ಗೂಳಿ ಬಸವಣ್ಣ ।
ಗುಡಿಸುತ್ತ ಗೂಳಿ ಬಸವಣ್ಣ-ಸೊನ್ನಲಿಗೆ ।
ಸಿದ್ಧರಾಮನ ಸುತ್ತ ಸಿರಿಗಂಗಿ ॥೧೬೭॥

* * *

ಛಂದsಕ ನಮ್ಮವರು ಮಾವೀನ ಮರಹಚ್ಚಿ ।
ಗಿಡಕೊಂದು ಗಿಣಿಯ ಸಲುವ್ಯಾರ ।
ಗಿಡಕೊಂದು ಗಿಣಿಯ ಸಲುವ್ಯಾರ-ಬ್ಯಾಡಯ್ಯ ।
ಗಿಣಿ ಬೆದಿರ್ಯಾವಣ್ಣ ಬರಬ್ಯಾಡ ॥೧೬೮॥

* * *

ಗಿಡದಾಗ ಗಿಡ ಚಲುವ ಮಾವೀನ ಗಿಡ ಚಲುವ ।
ಹಕ್ಕಿ ಪಕ್ಕ್ಯಾಗ ಗಿಣಿ ಚಲುವ ।
ಹಕ್ಕಿ ಪಕ್ಕ್ಯಾಗ ಗಿಣಿ ಚಲುವ-ಮ್ಯಾಲೀನ ।
ಚಿಕ್ಕ್ಯಾಗ ಚಲುವ ಚಂದ್ರಾಮ ॥೧೬೯॥

* * *

ತುಂಬೀದ ಕೆರಿಯಾಗ ತೂಬೆತ್ತವನ್ಯಾರ ।
ತಾಯಿ ಗಂಗವ್ವ ನಿನ ಕಂದ ।
ತಾಯಿ ಗಂಗವ್ವ ನಿನಕಂದ-ತೋಟsದ ।
ಹೊಂಬಾಳೆಗೆ ನೀರ ಬಿಡತೇನಿ ॥೧೭೦॥

ಜಾಲಽದ ಹೂವು ಯಾವಾಗ ಪರಿಮಽಳ ।
ಕಾವಽಳ ಬಿದ್ದು ಬಿಸಿಲೇರಿ ।
ಕಾಽವಳ ಬಿದ್ದು ಬಿಸಿಲೇರಿ-ಬರುವಾಗ ।
ಕಾಡು ಮೂಡೆಲ್ಲ ಪರಿಮಽಳ ||೧೭೧||

* * *

ಮೂಡ ಮೂಡೀದ ಪಡುವನಿದ್ದರುಗಟ್ಟ ।
ತಾವರೆ ಕೆರೀಲಿ ತಳಗಿದ್ದ
ತಾವರೆ ಕೆರೀಲಿ ತಳಗಿದ್ದ-ಸೂರೀಂದ್ರ
ನೀಸೂಡದೆ ಮಂಜು ಹರಿಯಽದೋ ||೧೭೨||

* * *

ಅಂಕದ ಆಲದ್ಮರ ಬಿಂಕದ ಗೋಣೀಮರ ।
ಕೆಂಪು ನಾಗಮರ ಕರಿಬೇವು ।
ಕೆಂಪು ನಾಗಮರ ಕರಿಬೇವು-ಮರಪಡಿ ।
ಕೆಂಪೀನ ಸೋಗೆ ಕುಣಿದಾವು ||೧೭೩||

* * *

ಆಕಾಶದ್ದುರಗೋಲು ಭೂಮಿ ತೂಕದ ಕುಂಟಿ ।
ಎಳೆಯುವದು ನೇಗಲೆರಡೆತ್ತು ।
ಎಳೆಯುವದು ನೇಗಲೆರಡೆತ್ತು-ಕಟಗೊಂಡು ।
ಜಾಣ ಹರಿಗ್ಯಾನ ಜವನಾವ ||೧೭೪||

* * *

ಸೂರ್ಯ ದೇವನಿಗೆ ಮೂರ್ಹೊತ್ತಿನ ಕಾಳಽಗ ।
ಸಾಯಲಿಲ್ಲ ಧರೆಗೆ ಬೀಳಲಿಲ್ಲ ।
ಸಾಯಲಿಲ್ಲ ಧರೆಗೆ ಬೀಳಲಿಲ್ಲ-ಸೂರ್ಯನಿಗೆ ।
ತಾಯನ್ನ ಶಾಪ ಬಿಡಲಿಲ್ಲ ||೧೭೫||

* * *

ಚೊಕ್ಕಳ್ಳಿ ಚೊಕ್ಕೆಂತು ಹುಳಿಮಾವು ಉರಿಕೊಂತು ।
ಮೂಡಳ್ಳಿ ಗದ್ದೆ ಮುಳಿಗ್ಹೋಯ್ತು ।
ಮೂಡಳ್ಳಿ ಗದ್ದೆ ಮುಳಿಗ್ಹೋಯ್ತು-ಏನ್ಹೆಳ್ಳಿ ।
ಕುಪ್ಪಳ್ಳಿ ಗಡಗಡನೆ ನಡುಗೀತು ||೧೭೬||

ಮಂಜು ಮನೆ ಮಾಡಿ ಮರಳು ಗೋಡೆ ಹಾಕಿ ।
ತಿಂಗಳ ಬೆಳಕ ಕದಮಾಡಿ ।
ತಿಂಗಳ ಬೆಳಕ ಕದಮಾಡಿ–ಹೋದವನ ।
ಹೆಜ್ಜೆ ಹೊರಗಾಯ್ತು ಮರಳಲ್ಲಿ ||೧೭೭||

* * *

ಹಳ್ಳಳ್ಳ ಗುಂಟ ನಳ್ಳೀಯ ತಡಕುವಳ ।
ಎಳ್ಳೂವಿನಂಥ ಹುಡುಗೀಯ ।
ಎಳ್ಳೂವಿನಂಥ ಹುಡುಗೀಯ-ಅವಕಂಡು ।
ನಳ್ಳೀಯ ಗಡಿಗೆ ಒಡೆದಿಟ್ಟ ||೧೭೮||

* * *

ಬಾಳೇಯ ಮೀನ ಬಾ ನಮ್ಮ ಗಾಳಕ್ಕೆ ।
ಏಳು ಸುತ್ತೀನ ಗಣಗಾಲೆ ।
ಏಳು ಸುತ್ತೀನ ಗಣಗಾಲೆ- ತಾಳಿಹೂವೆ ।
ಬಾ ನಮ್ಮ ಮಂಡೆ ತುರುಬೀಗೆ ||೧೭೯||

* * *

ಪಟ್ಟಣದ ಹಾದೀಲಿ ಬಟ್ಟೆ ಒಗೆಯುವನ್ಯಾರೋ ।
ಪಟ್ಟೆ ಉಂಗುರದ ಮಡಿವಾಳ ।
ಪಟ್ಟೆ ಉಂಗುರದ ಮಡಿವಾಳ-ರ ಹುಡುಗಾ ।
ಪಟ್ಟಣದ ದಾರಿ ಎಲ್ಲೈತಿ ||೧೮೦||

* * *

ಆಳುಂಟು ಅರಸಿಕೆರೆ ಕೋಳುಂಟು ಕುಣಿಗಾಲ ।
ಸೂಳೇರುಂಟೆಲ್ಲೊ ಶಿವಗಂಗೆ ।
ಸೂಳೇರುಂಟೆಲ್ಲೊ ಶಿವಗಂಗೆ–ಊರ್ ಮುಂದೆ ।
ಎಂಥವರು ಬಾಯ ಬಿಡತಾರ ||೧೮೧||

* * *

ಈರಣ್ಣ ಬರುವಾಗ ನೀರೆರಡು ಭಾಗಾಗಿ ।
ಗೋರಿ ಕಲ್ಲೊಡೆದು ಮರಳಾಗಿ ।
ಗೋರಿ ಕಲ್ಲೊಡೆದು ಮರಳಾಗಿ–ಗಂಗಣ್ಣ ।
ಪೂಜೆಗೊಂಬಾಳೆ ತರಲಾಕ ||೧೮೨||

ಗೋಕುಲದ ಒಳಗೆಲ್ಲ ಏಕಾಂತವೇನೈತಿ ।
ಶ್ರೀಕಾಂತ ಹೋದ ಮಥುರೇಗೆ ।
ಶ್ರೀಕಾಂತ ಹೋದ್ಧ ಮಥುರೇಗೆ–ಗೋಪೀಯ ।
ವ್ಯಾಕೂಲ ಇದ್ದರಿರುಳೆಲ್ಲ ||೧೮೩||

* * *

ಹರಿಗೆ ಹಾವಿನ ಹಾಸು ಹರಗೆ ಚರ್ಮದ ಹಾಸು ।
ಸಿರಿಗೊಂದು ತಾವು ನೆಲೆಯಿಲ್ಲ ।
ಸಿರಿಗೊಂದು ತಾವು ನೆಲೆಯಿಲ್ಲ–ಇದು ಮೂರ ।
ವಿಧಿಮಾಡಿ ಗೆಲುವ ಪಡೆದಾನು ||೧೮೪||

* * *

ತುರುಕರ ಹುಡುಗನಿಗೆ ತುದಿಗಾಲ ಪಾಪಾಸು ।
ಹರಕಂಗಿ ವ್ಯಾಲೆ ಜಾಕೀಟು ।
ಹರಕಂಗಿ ವ್ಯಾಲೆ ಜಾಕೀಟು–ಹಾಕ್ಕೊಂಡು ।
ಹರಸ್ಯಾಡುತಾನ ಹುಡುಗೇರ್ನ ||೧೮೫||

*

ಮಾದಿಗರ ಹುಡುಗೀಗೆ ತರಬರದ ಜವ್ವನ ।
ಹಾದರದ ಕೂಸು ತೊಡಿಮ್ಯಾಲೆ ।
ಹಾದರದ ಕೂಸು ತೊಡಿಮ್ಯಾಲೆ–ಹಾಕ್ಕೊಂಡು ।
ಹಾದ್ಯಾಗ ಶೋಕ ಪಡತಾಳ ||೧೮೬||

* * *

ಗದ್ದೇಯ ಬೈಲಾಗ ಬಿದ್ದಾನ ಪಾರಾಗಿ ।
ಮದ್ದೀನ ಚೀಲ ತಲೆದಿಂಬು ।
ಮದ್ದೀನ ಚೀಲ ತಲೆದಿಂಬು–ಇಟಗೊಂಡು
ಬಿದ್ದೀರು ಅವಳ ಮಗನಾಗಿ ||೧೮೭||

* * *

ಬೀಸೂವ ಕಲ್ಲೀಗೆ ನಾ ಮುಂದು ತಾ ಮುಂದು ।
ರಾಯ ಅಣ್ಣಯ್ನ ಮನೆಯಲ್ಲಿ ।
ರಾಯ ಅಣ್ಣಯ್ನ ಮನೆಯಲ್ಲಿ–ಕಲ್‌ಮ್ಯಾಲೆ ।
ಸೂರ್ಯ ಚಂದ್ರರ್ನ ಬರದಾರ ||೧೮೮||

ಮುತ್ತೀನ ಚಿಬ್ಬಲ ತಕ್ಕೊಳ್ರಿ ಬೆಳಗಾತು ।
ಹೂವು ಜಾಜಿಗಳು ಅರಳ್ಯಾವ ।
ಹೂವು ಜಾಜಿಗಳು ಅರಳ್ಯಾವ-ಗೋಕುಲದ ।
ಮೂಡ್ಲ ದಿಕ್ಕೀನ ವನದಾಗ ॥೧೮೯॥

* * *

ಚಿಕ್ಕೋಡಿ ದಾರ್‍ಯಾಗ ಚಿಲಕುರ್ಕಿ ಮಾರವಳೆ ।
ತಿಲಕ ಬಟ್ಟೀನ ಕರಿಚಲುವೆ ।
ತಿಲಕ ಬಟ್ಟೀನ ಕರಿಚಲುವೆ-ಎಲಿಹೆಣ್ಣೆ ।
ಚಿಕ್ಕೋಡಿ ದಾರಿ ಯಾವದ್ಹೇಳೆ ॥೧೯೦॥

* * *

ಸೂಳೀಗೆ ಸುತ್ತಿನೋಲೆ ಮಡದಿಗೆ ಮೂಗ್ಬಟ್ಟು ।
ಮೆಚ್ಚಿ ಬಂದವಳಿಗೆ ಬಿಚ್ಚೋಲೆ ।
ಮೆಚ್ಚಿ ಬಂದವಳಿಗೆ ಬಿಚ್ಚೋಲೆ-ಅಕ್ಕವ್ವ ।
ಪಟ್ಟದ ರಾಣೀಗೆ ಹರಳೋಲೆ ॥೧೯೧॥

* * *

ಆ ಬೇಲಣ್ಣನ ಮನೆ ಈಚೇಲಿ ತಂಗಿ ಮನೆ ।
ನಟ್ಟ ನಡುವೆ ಜಾಜಿ ವನದಲ್ಲಿ ।
ನಟ್ಟ ನಡುವೆ ಜಾಜಿ ವನದಲ್ಲಿ-ತಂಗೆವ್ವ ।
ಸುರಗೀಯ ಹೂವ ಕೊಯ್ದಾಳ ॥೧೯೨॥

* * *

ತುಂಬೀದ ಹೊಳಿಯಾಗ ಕೊಂಬ ಕಾಣಸತಾವು ।
ಬಂಗಾರ ದಿಣಿಯು ಬಸವಣ್ಣ ।
ಬಂಗಾರ ದಿಣಿಯು ಬಸವಣ್ಣ-ಬರುವಾಗ ।
ರಂಭೇರಾರೂತಿ ಬೆಳಗ್ಯಾರ ॥೧೯೩॥

* * *

ಗರಡೀಯ ಮನಿಯಾಗ ಗಂಭೀರ ಹೋಗ್ಯಾನ ।
ಗಂಧಽದ ಲೋಡ ತಿರುವ್ಯಾನ ।
ಗಂಧಽದ ಲೋಡ ತಿರುವ್ಯಾನ-ಧೊರಿ ಮಗ ।
ಗಂಭೀರ್‍ಗ ಮಗಳ ಕೊಡಬೇಕು ॥೧೯೪॥

ನಾರಾಯಣಾ ಬಾರೋ ನಾರೀ ಕಂದಯ್ಯ ಬಾರೋ ।
ನರಲೋಕದಾಗ ಇರುವವನೆ ।
ನರಲೋಕದಾಗ ಇರುವವನೆ-ಕೃಷ್ಣಯ್ಯ ।
ನಂದ ಗೋವಿಂದ್ನೆ ಕರಕೋಳೊ ||೧೯೫||

* * *

ಗೋಪಮ್ಮ ನಿನ್ನಮಽಗ ದೀಪದ ಕುಡಿಹಾಂಗ ।
ದೀವೀಗೆಯಂತೆ ಉರಿಯೂವ ।
ದೀವೀಗೆಯಂತೆ ಉರಿಯೂವ-ಕೃಷ್ಣಯ್ಯ ।
ನಂದ ಗೋವಿಂದ್ನೆ ಕರಕೋಳೊ ||೧೯೬||

* * *

ಬೀಸೂವ ಕಲ್ಲೀನ ತೂಬ್ಯಾರಽ ಮಾಡ್ಯಾರ ।
ಜಾಣೆ ತಂಗೆವ್ನ ಎಡಗೈಯು ।
ಜಾಣೆ ತಂಗೆವ್ನ ಎಡಗೈಯು-ಹವಳಽವ ।
ಯಾವ ಅಕ್ಸಾಲಿ ಮಾಡ್ಯಾನ ||೧೯೭||

* * *

ಸಂಗಾತಿ ನೀ ಬಾರೆ ಮೂಡ ಸೀಮಿಯ ಹೆಣ್ಣೆ ।
ಉಂಗುರುವ ತಾರೆ ಬೆರಳೀಗೆ ।
ಉಂಗುರುವ ತಾರೆ ಬೆರಳೀಗೆ-ಚಂತಽದ ।
ರಂಭೆ ನಿನ್ ಹ್ಯಾಂಗ ಮರೆಯಾಲಿ ||೧೯೮||

* *

ಮೂಡ ಸೀಮೆಯ ಹೆಣ್ಣು ಬೇಡ ನನ ಅಣ್ಣಯ್ಯ
ನೀಡೀದ ಕಾಲು ತೆಗೆಯಾಳು ।
ನೀಡೀದ ಕಾಲು ತೆಗೆಯಾಳು-ಆ ಬಾಲಿ ।
ನೆರೆಯುವರಿಗಂಜಿ ಬಾಳ್ಯಾಳೆ ||೧೯೯||



ಊರಿಗುಕ್ಕಳ ಜೋಳ ಯಾರೀಗೆ ಬಡತsನ ।
ನಮ್ಮ ಪಾಡೇನು ಹಡೆದವ್ವ ।
ನಮ್ಮ ಪಾಡೇನು ಹಡೆದವ್ವ-ಕುಂತೀಯು ।
ಮಕ್ಕಳಿಗೆ ತಪ್ಪಿಲ್ಲ ಬಡತsನಾ ॥೨೧೧॥

* * *

ಹರಿಯುವಾ ನದಿಯನ್ನು ಹರೆಯsದ ಹೆಣ್ಣನ್ನು ।
ಅರಿಸೀಣ ಮನದ ಪರಿಯನ್ನು ।
ಅರಿಸೀಣ ಮನದ ಪರಿಯನ್ನು-ಜಾಣsರು ।
ಮನಬಂದ ತೆರದಿ ತಿಳಿಯೋರು ॥೨೧೨॥

* * *

ಗಂಡsನ ಮನೆಯು ಚೆಂಡಸೀಗೆಯ ಗುತ್ತಿ ।
ಗಂಡನೆಂಬವನು ಉರಿಮಾರಿ ।
ಗಂಡನೆಂಬವನು ಉರಿಮಾರಿ-ಕಂಡsರೆ ।
ಕಂದ ಕಿಚ್ಚಿದ್ದು ಕೆದರ್‍ಯಾನೋ ॥ ॥೨೧೩॥

* * *

ಹಂತವಿಲ್ಲದ ಭಾವಿ ಜಂತವಿಲ್ಲದ ಸೀರೆ ।
ಸಂತೋಷವಿಲ್ದ ಸತಿ ಪುರುಷ್ನ ।
ಸಂತೋಷವಿಲ್ದ ಸತಿ ಪುರುಷ್ನ-ಕೈ ಹಿಡಿದು ।
ಚಿಂತೆ ಮಾಡಿದರೆ ಫಲವೇನು. ॥೨೧೪॥

* * *

ಅಟ್ಟಡಿಗೆ ಅಳಿಯನಿಗೆ ಚಿಟ್ಟೆ ತುಪ್ಪ ಮಗಳಿಗೆ ।
ಸಾಲsದ ಪತ್ರ ಮಗನಿಗೆ ।
ಸಾಲsದ ಪತ್ರ ಮಗನೀಗೆ-ತಾಯವ್ವ ।
ಸಾಲ್ಯದಾ ಸೀರೆ ಮಗಳೀಗೆ ॥೨೧೫॥

* * *

ತೋಟsದ ಕಾಲೇವು ದಾಟೋದು ತಡವೇನು ।
ನೀಟಾಗಿ ಬೆಳೆದ ತರಳೇಯು ।
ನೀಟಾಗಿ ಬೆಳೆದ ತರಳೇಯು-ಹೆಣ್ಣಿನ್ಮೇಲೆ ।
ಮಾತು ಬರುವsದು ತಡವೇನು ॥೨೧೬॥

ಆಡಿ ಎಂಬುವ ಕೆಟ್ಟ ಕೇಡ ನೆನೆದವ ಕೆಟ್ಟ ।
ನೋಡದವ ಕೆಟ್ಟ ಬೆಳೆಭೂಮಿ ।
ನೋಡದವ ಕೆಟ್ಟ ಬೆಳೆ ಭೂಮಿ–ಪರಸತಿಯ ।
ಮುಖನೋಡಿ ಕೆಟ್ಟ ಕುಲಗೇಡಿ ॥೨೧೭॥

* * *

ಆಯುಷ್ಯ ಹಿರಿದೆಂದು ಹಾರ‍್ಯಾನ ಸಮುದ್ರವ ।
ಆಕಾಶದಂಥ ತೆರೆಬಂದು ।
ಆಕಾಶದಂಥ ತೆರೆಬಂದು–ಬಡಿವಾಗ ।
ಈಶ್ವರನೆ ನಿನ್ನ ಮರೆಯಪ್ಪ ॥೨೧೮॥

* * *

ಹಾಡಬೇಕು ಹರಿ ಎಂದು ಬೇಡಬೇಕು ಶಿವನೆಂದು ।
ಪಾಲಿಸಬೇಕು ಅರಸರು ।
ಪಾಲಿಸಬೇಕು ಅರಸರು–ಮಾಡಿದ ಬದುಕ ।
ತಾವುಂಡು ದಾನ ಕೊಡಬೇಕು ॥೨೧೯॥

* * *

ಆಯುಷ್ಯ ದೋಲೇಯ ಆರ‍್ಕೊಟ್ಟರೆನಗ್ಹೇಳು ।
ನಾರಾಯಣಕೊಟ್ಟ ಶಿವಕೊಟ್ಟ ।
ನಾರಾಯಣಕೊಟ್ಟ ಶಿವಕೊಟ್ಟ–ಓಲೆಯು ।
ಯಾರಿಗೂ ಓದಲು ತಿಳಿಯಽದು ॥೨೨೦॥

ಕಣ್ಣು ಕಾಣುದು ಕಷ್ಟ ಕಿವಿಯು ಕೇಳುದು ಕಷ್ಟ ।
ಯಾವುದಕೂ ಕಷ್ಟ ಬಡತಽನ ।
ಯಾವುದಕೂ ಕಷ್ಟ ಬಡತಽನ-ಬಂದಽರೆ ।
ಕೂಡೆಂಬ್ರು ಹೊಳ್ಳಿಯ ತುದಿಯಾಗ ॥೨೨೧॥

* * *

ಗಂಡನಽ ಗುಣವನ್ನು ಕಂಡೆನೆಂಬಳು ಜಾಣೆ ।
ಹಿಂಡೆತ್ತಿನೊಳಗೆ ಬಸವಽನ ।
ಹಿಂಡೆತ್ತಿನೊಳಗೆ ಬಸವಽನ–ಪಾದಽವ ।
ಕಂಡೆನೆಂಬೋಳು ಕಡು ಜಾಣೆ ॥೨೨೨॥

ಸರಿಗೆ ಪಂಜೆಯ ನುಟ್ಟು ಬೆರಳಿಗುಂಗುರವಿಟ್ಟು ।
ಸರಿಯುವರ ಕೂಡ ಬರುವಾಗ ।
ಸರಿಯುವರ ಕೂಡ ಬರುವಾಗ-ಸಾಲಗಾರ ।
ಸೆರಗ್ಹಿಡಿದು ನಿಲಿಸಿ ಬಿಡುವನು

* * *

ಗಂಗಿಯಷ್ಟು ಮಾಯ ಗೌರಿಗಿಲ್ಲೇಳು ಶಿವನೆ ।
ನಡುನೀಡ ತಂಪು ದಡಕಿಲ್ಲ ।
ನಡುನೀರ ತಂಪು ದಡಕಿಲ್ಲ-ಮರ್ತ್ಯದಾಗ ।
ಮಗಳಷ್ಟು, ಮಾಯ ಸೊಸೆಗಿಲ್ಲ ||೨೨೪||

ಇಬ್ಬರ್ಹೆಂಡಿರ ಕಾಟ ಇರುಳು ತಿ.,ಣೇ ಕಾಟ
ಕಬ್ಬಕ್ಕಿ ಕಾಟ ಬಲು ಕಾಟ ।
ಕಬ್ಬಕ್ಕಿ ಕಾಟ ಬಲು ಕಾಟ-ಯಮರಾಯ ।
ಒಬ್ಬ ಬಿಟ್ಟೊಬ್ಬ ಕೊಂಡೊಯ್ಯೊ ||೨೨೫||

* * *

ಕಾಳೀಗೆ ಕಷ್ಟ್ಯಾಕ ಬೋಳೀಗೆ ತುರುಬ್ಯಾಕ ।
ಬಡವನ ಮಡದೀಗೆ ಬೆಡಗ್ಯಾಕ ।
ಬಡವನ ಮಡದೀಗೆ ಬೆಡಗ್ಯಾಕ-ದಂಡೀನ ।
ಬಿಡಿ ಕುದುರಿಗ್ಯಾಕ ಮೊಕ-ಹಾರ ||೨೨೬||

* * *

ಕುಟ್ಟಲಾರದ ಕುಸಬಿ ಬೀಸಲಾರದ ಬೆಡಗಿ ।
ಅಟ್ಟುಣ್ಣಲಾರ್ದ ಅರಬೆಡಗಿ ।
ಅಟ್ಟುಣ್ಣಲಾರ್ದ ಅರಬೆಡಗಿ-ನೀನೀಗ ।
ಬಟ್ಲ ಕೊಟ್ಟೇನು ತಿರಿದುಣ್ಣೆ ||೨೨೭||

* * *

ಅಕ್ಕನ್ನ ಕರಿಸೆಂದ್ರ ಚಿತ್ತೀಯ ಬಿಸಿಲೆಂದ ।
ಚಿಕ್ಕ ಹೆಂಡತಿಯ ಕರಿಸೆಂದ್ರೆ ।
ಚಿಕ್ಕ ಹೆಂಡತಿಯ ಕರಿಸೆಂದ್ರೆ-ನನ್ನಣ್ಣ ।
ಸತ್ತೀಗೆ ಮುತ್ತ ಬಿಗಿಸೀದ ||೨೨೮||

ತಂಗೀಯು ಕರಿಸೆಂದ್ರ ಅಂದಳಕ ಬಿಸಿಲೆಂದ ।
ರಂಭೆ ಹೆಂಡತಿಯು ಕರಿಸೆಂದ್ರ ।
ರಂಭೆ ಹೆಂಡತಿಯು ಕರಿಸೆಂದ್ರ–ನನ್ನಣ್ಣ ।
ಅಂದಳಕ ಮುತ್ತು ಬಿಗಿಸೀದ ||೨೨೯||

* * *

ಜೋಳ ಬೀಸಂದಽರ ರೋಗ ಬಂತೆಂಬಽಳು ।
ಜೋಳದಂಬಲಿ ಕೆನೆ ಮೊಸರು ।
ಜೋಳದಂಬಲಿ ಕೆನೆ ಮೊಸರು–ಉಣುವಾಗ ।
ಈಗ ನೋಡವಳ ಕೈಬಾಯ ||೨೩೦||

* * *

ಗಂಡ ಹೆಂಡಿರ ಮಾತು ಒಂದೆ ಹಾಸಿಗಿ ಮ್ಯಾಲ ।
ಗಂಧ ಸಿಂಪಡಿಸಿ ನಗತಾಳ ।
ಗಂಧ ಸಿಂಪಡಿಸಿ ನಗತಾಳ--ನನ ತಮ್ಮ ।
ಗಂಗಿ ನಿನಗೆಲ್ಲಿ ದೊರೆತಾಳ ||೨೩೧||

ಬಡವಽರ ಮಗಳಲ್ಲ ನಡುವೊಂದು ಹಿಡಿಯಲ್ಲ ।
ನಡೆದರೆ ಬಾಳೆ ಸುಳಿಯಲ್ಲ ।
ನಡೆದರೆ ಬಾಳೆ ಸುಳಿಯಲ್ಲ--ತಂಗೆವ್ವ ।
ನುಡಿದರೆ ಕೋಗಿಲೆ ಧನಿಯಲ್ಲ ||೨೩೨||

* * *

ನಮ್ಮಽನೆ ದೇವ್ರಿಽಗೆ ಏನೆಂಜಲಾದಾವು ।
ಹಾಲೆಂಜಲಾತು ಕರು ಕುಡಿದು ।
ಹಾಲೆಂಜಲಾತು ಕರು ಕುಡಿದು--ಬಾಳೇಯ ।
ಹಣ್ಣೆಂಜಲಾತು ಗಿಣಿ ತಿಂದು ||೨೩೩||

* * *

ಕನ್ನೆಣ್ಣೆ ನಿನಗ್ಯಾಕ ಕೆನ್ನೆ ಮ್ಯಾಲಿನ ತುರುಬು ।
ಉತ್ನೆತ್ತಿಗ್ಯಾಕ ಹುರಿಗೆಜ್ಜಿ ।
ಉತ್ನೆತ್ತಿಗ್ಯಾಕ ಹುರಿಗೆಜ್ಜಿ–ಗಾಣಿಗನ ।
ಮೊನ್ನೆತ್ತಿಗ್ಯಾಕ ಜಣರೆಂಬೆ ||೨೩೪||

ಒಳ್ಳೇಯ ಅಡಿಕೇಗೆ ಎಲ್ಲತ್ತೊ ತರಗೇಲೆ ।
ನೆಲ್ಲೀಕಾಯಂಥ ಬಟುವsನ ।
ನೆಲ್ಲೀಕಾಯಂಥ ಬಟುವsನ-ಹೆಣ್ಣೀಗೆ ।
ಎಲ್ಲಿದ್ದ್ಯೊ ಜೋಗಿ ದರವೇಸಿ ||೨೩೫||

* * *

ಕಂಟವಿಲ್ಲದ ಹರವಿ ಜಂತವಿಲ್ಲದ ಭಾವಿ ।
ಗಂಟ್ಗೆ ಮಾರಿದರ ದಣಿತಾನ ।
ಗಂಟ್ಗೆ ಮಾರಿದರ ದಣಿತಾನ--ಮಾಡಿದರೆ ।
ಎಂಟೆಂಟು ದಿನಕ ಹೋರಾಟ ||೨೩೬||

* * *

ಹಳ್ಳsದ ದಂಡ್ಯಾಗ ಹಸುರು ಬಣ್ಣದ ಗುಬ್ಬಿ ।
ಬಿಸಲೀಗೆ ಬಾಯ ಬಿಡತಾವ ।
ಬಿಸಲೀಗೆ ಬಾಯ ಬಿಡತಾವ--ಆ ಗುಬ್ಬಿ ।
ಕುಸಲsದ ನಗುವ ನಗತಾವ ||೨೩೭||



## ತಂದೆ-ತಾಯಿಗಳು, ತವರುಮನೆ

ತಾವರಿಯ ಗಿಡಹುಟ್ಟಿ ದೇವರಿಗೆ ನೆರಳಾದಿ ।
ನಾ ಹುಟ್ಟಿ ಮನೀಗೆ ಎರವಾದೆ ।
ನಾಹುಟ್ಟಿ ಮನೀಗೆ ಎರವಾದೆ-ಹಡೆದವ್ವ ।
ನೀ ಕೊಟ್ಟ ಮನೀಗೆ ಹೆಸರಾದೆ ||೨೩೮||

* * *

ಬ್ಯಾಸೀಗೀ ದಿವಸಕ್ಕ ಬೇವೀನ ಮರ ತಂಪ ।
ಭೀಮsರತಿಯೆಂಬ ಹೊಳಿತಂಪ ।
ಭೀಮsರತಿಯೆಂಬ ಹೊಳಿತಂಪ-ಹಡೆದವ್ವ ।
ನೀ ತಂಪ ನನ್ನ ತವರೀಗಿ ||೨೩೯||

ತಾಯವ್ವ ನಿನ ಮುಂದ ತಾರೀಪೇನ್ಹೇಳಲೀ।
ತಾಯೀ ನನ ಜೀವ ಸೊಗಸಿಲ್ಲ।
ತಾಯೀ ನನ ಜೀವ ಸೊಗಸಿಲ್ಲ-ಬಾಳೀಯ।
ಹಣಿಗ್ಯಾಗ ಹಣ್ಣ ಕಳಿತ್ಹಂಗ ||೨೪೦||

* * *

ಹೆಣ್ಣು ಹಡಿಯಲಿಬ್ಯಾಡ ಹೆರವರಿಗೆ ಕೊಡಬ್ಯಾಡ।
ಹೆಣ್ಣು ಹೋಗಾಗ ಅಳಬ್ಯಾಡ।
ಹೆಣ್ಣು ಹೋಗಾಗ ಅಳಬ್ಯಾಡ-ಹಡೆದವ್ವ।
ಸಿಟ್ಟಾಗಿ ಶಿವಗ ಬೈಬಾಡ ||೨೪೧||

* * *

ಕಡಗ ಇಲ್ಲದ ಕೈಯು ಕರುಣ ಇಲ್ಲದ ಪುರುಷ।
ಹಡದವ್ವ ನಿಲ್ದ ತವರೀಗೆ।
ಹಡದವ್ವ ನಿಲ್ದ ತವರೀಗೆ-ಹೋದ್ವರ।
ಅಡಿವ್ಯಾಗ ವಸ್ತಿ ಇಳಧಾಂಗ ||೨೪೨||

* * *

ತಾಯಿ ಮಕ್ಕಳು ನಾವು ನಾಳೆ ಮಾತಾಡೂನು।
ಪ್ರಾಣಗಳ ದೂರ ಗಿಡಮರಿಯ।
ಪ್ರಾಣಗಳ ದೂರ ಗಿಡಮರಿಯ-ಹಡೆದವ್ವ।
ನಾಳೆ ಬರತೇನಿ ಕೈ ಬಿಡ ||೨೪೩||

* * *

ತಾಯಿ ಮಕ್ಕಳ ಜಗಳ ನ್ಯಾಯs ಮಾಡವರ್ಯಾರ।
ವಾಲೀಗೀ ಮುತ್ತು ಒಜನೇನ।
ವಾಲೀಗೀ ಮುತ್ತು ಒಜನೇನ-ಹಡೆದವ್ವ।
ನಾ ಆಡಿದ ಮಾತು ನಿಜವೇನ। ||೨೪೪||

* * *

ಗರತೀ ಹೊಟ್ಯಾಗ ಹುಟ್ಟಿ ಆರತಿ ಕಾಣಲಿಲ್ಲ।
ಜರತಾರೀ ಸೀರಿ ಉಡಲಿಲ್ಲ।
ಜರತಾರೀ ಸೀರಿ ಉಡಲಿಲ್ಲ-ಹಡೆದವ್ವ।
ಎರವು ಆಗ್ಯಾವ ಮೊಲಿ ಹಾಲ ||೨೪೫||

ಜ್ವಾಳದ ಒಣರೊಟ್ಟಿ ರಾಜಽಗಿರೀಯಪಲ್ಲೆ ।
ರಾಜಕ ತವರು ಬಡವಽರ ।
ರಾಜಽಕ ತವರು ಬಡವಽರ-ಮನಿಯಾಗ ।
ನಾಕದಿನಾ ಇದ್ದ ಬರತೇನ ||೨೪೬||

* * *

ಹಣ್ಣು ಸುಲಿಯಲು ಬೇಕು ವೀಳ್ಯ ಮೆಲಿಯಲು ಬೇಕು ।
ಮಲ್ಲೀಗಿ ಬೇಕು ತುರುಬಿಗಿ ।
ಮಲ್ಲೀಗಿ ಬೇಕು ತುರುಬೀಗಿ–ಹಡೆದವ್ವ ।
ನೀ ಬೇಕಽ ನನ್ನ ತವರೀಗೀ ||೨೪೭||

* * *

ಹೆಣ್ಣುಮಕ್ಕಳ ಕಳುವಿ ಕಣ್ಣೀಗಿ ನೀರ್ತಂದು ।
ಸಣ್ಣ ಸೆಲ್ಲೆದಲೆ ಮುಸುಗ್ಹಾಕಿ ।
ಸಣ್ಣ ಸೆಲ್ಲೆದಲೆ ಮುಸುಗ್ಹಾಕಿ–ಹಡೆದಪ್ಪ ।
ಹೆಣ್ಣು ಸಾಕೆಂದ ಜಲುಮಾಕ ||೨೪೮||

* * *

ಹೆಣ್ಣು ಮಕ್ಕಳ ನ್ಯಾಯ ಉಣ್ಣದಲೆ ಮಾಡ್ಯಾನ ।
ಪುಣ್ಯಾಳ್ಳ ಧೊರಿಯು ಹಡೆದಪ್ಪ ।
ಪುಣ್ಯಾಳ್ಳ ಧೊರಿಯು ಹಡೆದಪ್ಪ–ನಿದರೀಗಿ ।
ಹೊನ್ನಿನ ಮಳಿಯು ಸುರಿಯಾಽಲೇ ||೨೪೯||

* * *

ಅಕ್ಕಽ ಇದ್ದರ ಭಾವ ರೊಕ್ಕಽ ಇದ್ದರ ಸಂತಿ ।
ಮಕ್ಕಽಳಿದ್ದರ ಮನಿಮಾರ ।
ಮಕ್ಕಽಳಿದ್ದರ ಮನಿಮಾರ-ಹಡೆದವ್ವ ।
ನೀ ಇದ್ದರ ನಮಗೆ ಸೌರಾಜ್ಯ ||೨೫೦||

* * *

ಸೋದರ ಮಾವೇನ ಸೂರ್ಯ ಚಂದ್ರಾಮೇನ ।
ಬೆಳದಿಂಗಳೇನ ಬಿಸಲೇನ ।
ಬೆಳದಿಂಗಳೇನ ಬಿಸಲೇನ-ಹಡೆದವ್ವ ।
ತಾಯಿ ನಿನ್ನಣ್ಣ ಹೌದೇನ ||೨೫೧||

ಹಾಲುಂಡ ತವರೀಗೆ ಏನೆಂದು ಹರಸಲೀ।
ಹೊಳಿದಂಡೀಲಿರುವ ಕರಿಕೀಯ।
ಹೊಳಿದಂಡೀಲಿರುವ ಕರಿಕೀಯ–ಕುಡಿಹಂಗ।
ಹಬ್ಬಲಿ ಅವರ ರಸಬಳ್ಳಿ ||೨೫೨||

* * *

ತಾಯಿ ಕಾಣದ ಜೀವ ತಾವೂರಿ ಬಾವೂರಿ।
ಭಾಳ ಬಿಸಿಲಾನ ಅವರೀಯ।
ಭಾಳ ಬಿಸಿಲಾನ ಅವರೀಯ-ಹುವಿನ್ಹಾಂಗ।
ಬಾಡತೇನಿ ತಾಯಿ ಕರೆದೊಯ್ಯ ||೨೫೩||

* * *

ತವರ ಮನಿಯ ದೀಪ ತೆವರೇರಿ ನೋಡೇನ।
ಹತ್ತು ಬಳ್ಳಚ್ಚಿ ಶರಣೆಂದ।
ಹತ್ತು ಬಳ್ಳಚ್ಚಿ ಶರಣೆಂದ–ತಮ್ಮಂದೀರು।
ಜಯವಂತರಾಗಿ ಇರಲೆಂದ ||೨೫೪||

* * *

ತಾಯಿ ಮಕ್ಕಳು ಜೋಡು ತಾಳಿಸಾಮಾನು ಜೋಡು।
ನಾನು ನಮ್ಮವ್ವ ಸರಿಜೋಡು।
ನಾನು ನಮ್ಮವ್ವ ಸರಿಜೋಡು–ಬರುವಾಗ।
ಭಾಗಾದಿ ಬಾಯ ಬಿಡತಾಳ ||೨೫೫||

* * *

ಬಾದಾಮಿ ಸಂತ್ಯಾಗ ಬಂದಾಳ ಹಡೆದವ್ವ।
ಮಂದೀನ ಕಂಡು ನನ ಮರತ।
ಮಂದೀನ ಕಂಡು ನನ ಮರತ–ಮಲ್ಲೀಗಿ।
ದಂಡೀಯ ಕಂಡು ಹುಡಿಕ್ಯಾಳ ||೨೫೬||

* * *

ತಾಯೀಯ ಮನಿಗ್ಹೋಗಿ ಬಾಯಿ ಬೇಡಿದ್ದಂಡೆ।
ಶ್ಯಾಂವೀಗಿ ಉಂಡೆ ಸೈದಾನ।
ಶ್ಯಾಂವೀಗಿ ಉಂಡೆ ಸೈದಾನ–ಹಡೆದವ್ವನ।
ಮಾರೀ ನೋಡಿ ಉಂಡೆ ಮೊಲೆಹಾಲ ||೨೫೭||

ತಾಯೀ ಮಕ್ಕಳ ಧನಿಯು ತಾಳಾ ಭಾರಿಸಿಧಾಂಗ ।
ಜೋಡ ಕಿನ್ನೂರಿ ನುಡಿಧಾಂಗ ।
ಜೋಡ ಕಿನ್ನೂರಿ ನುಡಿಧಾಂಗ-ಗದಗೀನ ।
ಹೊತ್ತೇರಿ ತಾಸೆ ಬಡಿಧಂಗ ॥೨೫೮॥

* *

ಹಡೆದವ್ವ ಇರುತಾsನ ಹಡೀಬೇಕು ಮಕ್ಕಳನ ।
ಮುಡಿಬೇಕು ಹಂಪೀದವನsವ ।
ಮುಡಿಬೇಕು ಹಂಪೀ ದವನsವ-ಕಾಜಿನ ಬಳಿಯ ।
ರಾಯsರು ಇರುತಾನ ಇಡಬೇಕ ॥೨೫೯॥

* * *

ಹಡದs ತಾಯಿಯ ಮುಂದ ಹಾಲು ಕುಡಿದರ ಛಂದ ।
ಮಲತಾಯಿ ಮುಂದ ಮರಿಗುದರಿ ।
ಮಲತಾಯಿ ಮುಂದ ಮರಿಗುದರಿ-ಏರಿದರ ।
ಮನದಾಗ ಚಿಟುಗು ಮುರದಾಳ ॥೨೬೦॥

* * *

ತವರೂರ ದಾರೀಲಿ ತೆಗಿಸಣ್ಣ ಭಾವೀಯ ।
ಅಕ್ಕ ತಂಗೇರು ತಿರುಗಾಡೋ ।
ಅಕ್ಕ ತಂಗೇರು ತಿರುಗಾಡೋ-ದಾರೀಲಿ ।
ತೆಗಿಸಣ್ಣ ಕಲ್ಯಾಣದ ಕೊಳಗಳ ॥೨೬೧॥

* * *

ತವರೂರ ದಾರ್‍ಯಾಗ ಕಲ್ಲಿಲ್ಲ ಮುಳ್ಳಿಲ್ಲ ।
ಸಾಸುವೆಯಷ್ಟು ಮರಳಿಲ್ಲ ।
ಸಾಸುವೆಯಷ್ಟು ಮರಳಿಲ್ಲ-ಮುಗಲಾನ ।
ಬಿಸಲೀನ ಬೇಗೆ ಸುಡಲಿಲ್ಲ ॥೨೬೨॥

* * *

ಬಂಗಾರ ಬಳಿಯವರು ತಿಂಗಳದ ಹಾದಿಯವರು ।
ನನ್ನ ಕೊಟ್ಯಾಕ ಮರತಾರ ।
ನನ್ನ ಕೊಟ್ಯಾಕ ಮರತಾರ-ಮಾವೀನ ।
ಹಣ್ಣು ತಿನುವಾಗ ನೆನಿಸ್ಯಾರು ॥೨೬೩॥

ತವರೂರ ಹಾದ್ಯಾಗ ಗಿಡವೆಲ್ಲ ಮಲ್ಲೀಗಿ ।
ಹೂವರಳಿ ಪರಿಮಳ ಘಮ್ಮೆಂದು ।
ಹೂವರಳಿ ಪರಿಮಳ-ಘಮ್ಮೆಂದು-ನಾ ಕೊಯ್ದು ।
ಗಿಡಕೊಂದು ಹೂವ ಮುಡಿದೇನ ॥೧೬೪॥

* * *

ಮಳಿ ಬಿಟ್ಟರೂ ಮರದ ಹನಿ ಬಿಡದು ತಾಯವ್ವ ।
ನೀ ಬಿಟ್ಟರೂ ನಿನ್ನ ಮನಿ ಬಿಡದು ।
ನೀ ಬಿಟ್ಟರೂ ನಿನ್ನ ಮನಿ ಬಿಡದು-ಹಡೆದವ್ವ ।
ನಿನ್ನಾಸೆ ನನಗ ಬಿಡದಲ್ಲೇ ॥೧೬೫॥

* * *

ಯಾರು ಇದ್ದರೂ ನನ್ನ ತಾಯವ್ವನ್ಹೋಲರ ।
ಸಾವೀರ ಕೊಳ್ಳಿ ಒಲಿಯಾಗ ।
ಸಾವೀರ ಕೊಳ್ಳಿ ಒಲಿಯಾಗ-ಇದ್ದರ ।
ಜ್ಯೋತಿ ಸೆನ್ಯಾರೂ ಹೋಲರ ॥೧೬೬॥

* * *

ಅರಗಿನಂಥಾ ತಾಯಿ ಮರದಂಥಾ ಮಕ್ಕಳು ।
ಕರಗಿದರ ಬೆಣ್ಣಿ ತಿಳಿತುಪ್ಪ ।
ಕರಗಿದರ ಬೆಣ್ಣಿ ತಿಳಿತುಪ್ಪ-ದಂಥಾಕಿ ।
ಕರಗಂಥ ತಾಯಿ ಇರಬೇಕ ॥೧೬೭॥

* * *

ತಂದೀಯ ನೆನೆದರ ತಂಗೂಳ ಬಿಸಿಯಾಯ್ತು ।
ಗಂಗಾದೇವಿ ನನ್ನ ಹಡೆದವ್ನ ।
ಗಂಗಾದೇವಿ ನನ್ನ ಹಡೆದವ್ನ-ನೆನೆದರೆ ।
ಮಾಸೀದ ತಲೆಯು ಮುಡಿಯಾಯ್ತು ॥೧೬೮॥

* * *

ಕಣ್ಣೆಂಜಲ ಕಾಡೀಗಿ ಬಾಯೆಂಜಲ ವೀಳ್ಯವ ।
ಯಾರೆಂಜಲುಂಡಿ ನನ ಮನವ ।
ಯಾರೆಂಜಲುಂಡಿ ನನ ಮನವ-ಹಡೆದವ್ನ ।
ಬಾಯೆಂಜಲುಂಡು ಬೆಳದೇನ ॥೧೬೯॥

ತಂದಿ ನನ ಹಡೆದಪ್ಪ ಉಂಡು ಹೊರ್ಯಾಕ ಹೊಂಟ ।
ಜಂಬ ಹಾಸೀದ ಜಮುಖಾನೀ ।
ಜಂಬ ಹಾಸೀದ ಜಮುಖಾನೀ-ನನ ಮನೀಯ ।
ಗೊಂಬಿ ಬೀಸ್ಯಾವ ಸುಳಿಗಾಳಿ ||೨೭೦||

* * *

ವಾರೀಗಿ ಗೆಣತೇರು ಕೂಡಿ ವರತಿ ನೀರೀಗ್ಹೋಗಿ ।
ಗರತಿ ನನ್ಹಾಯಿ ಪರಸಂಗ ।
ಗರತಿ ನನ್ಹಾಯಿ ಪರಸಂಗ-ತೆಗೆದsರ ।
ವರತೀಯ ನೀರ ಸೆಲಿ ಬಂತ ||೨೭೧||

* * *

ಹಡದವ್ವ ಬರ್ಹಾಳೆಂದು ಹರವೀಲಿ ನೀರಿಟ್ಟೆ ।
ಕರಿಗೆರಿಯ ಸೀರಿ ಹೊರಗಿಟ್ಟೆ ।
ಕರಿಗೆರಿಯ ಸೀರಿ ಹೊರಗಿಟ್ಟೆ-ಹಡೆದವ್ನ ।
ಹರದಾರೀ ಮ್ಯಾಗ ನೆದರಿಟ್ಟೆ ||೨೭೨||

* * *

ಮನೆಯ ಹಿಂದಿನ ಮಾವು ನೆನೆದರ ಘಮ್ಮೆಂದೂ ।
ನೆನೆಥಂಗ ಬಂದ ನನ ಅಣ್ಣ ।
ನೆನೆಥಂಗ ಬಂದ ನನ ಅಣ್ಣ-ಬಾಳೀಯ ।
ಗೊನಿಹಂಗ ತೋಳ ತಿರುವೂತ ||೨೭೩||

* * *

ನಡಿದಾರ ನಡುಭಾರ ಪಟ್ಟೀಯ ನೆರಿಭಾರ ।
ತವರೀನ ಹಂಬಲಿಕಿ ಬಲುಭಾರ ।
ತವರೀನ ಹಂಬಲಿಕಿ ಬಲುಭಾರ-ಯಾಕ್ನನ್ನ ।
ದೊರೆ ಮೋಜಿನಣ್ಣ ಮರತಾನ ||೨೭೪||

*

ಗಂಜೀಯ ಕುಡಿದರೂ ಗಂಡನ ಮನಿಲೇಸ ।
ಅಂದಣದ ಮ್ಯಾಲ ಚೌರsವ ।
ಅಂದಣದ ಮ್ಯಾಲ ಚೌರsವ-ಸಾರಿದರ
ಹಂಗೀನ ತೌರಮನಿಸಾಕ ||೨೭೫||

ನಮ್ಮನ್ನ ನನತಾಯಿ ಹಣ್ಣು ಹಾಗಲಕಾಯಿ ।
ಸುಮ್ಮನೆ ಬೈದೆ ಗರತೀಗಿ ।
ಸುಮ್ಮನೆ ಬೈದೆ ಗರತೀಗಿ--ಹಡೆದವ್ವ ।
ಉಣ್ಣೋಳ ಕಾಲ ಹಿಡಿತೇನ ॥೧೭೬॥

ಮೂಗತಿ ಮುಂಭಾರ ಎಣೆಗಂಟು ಹಿಂಭಾರ ।
ಕೆನ್ನೀಗೆ ಭಾರ ಹರಳೋಲೆ ।
ಕೆನ್ನೀಗೆ ಭಾರ ಹರಳೋಲೆ--ನನರಾಯ ।
ಬೆನ್ನೀಗೆ ಭಾರ ಶಿವದಾರ ॥೧೭೭॥

* * *

ಕರಿಯ ಸೀರಿಯನುಟ್ಟು ಕೆರಿಯ ನೀರೀಗ್ಹೋದೆ ।
ಬೆಲೆಯ ಕೇಳ್ಯಾರ ಬಹು ಮಂದಿ ।
ಬೆಲೆಯ ಕೇಳ್ಯಾರ ಬಹುಮಂದಿ--ಆ ಸೀರೀನ ।
ನನ್ನ ತವರವರು ಉಡಿಸ್ಯಾರ ॥೧೭೮॥

* * *

ಪಾರಿವಾಳದ ಹಕ್ಕಿ ಏನಾಸೆಲಿದ್ದಾವೋ ।
ನೀರಾಸೆ ಮರದ ನೆರಳಾಸೆ ।
ನೀರಾಸೆ ಮರದ ನೆರಳಾಸೆ--ಹೆಣ್ಣೀಗೆ ।
ತಾಯಾಸೆ ತವರ ಮನಿಯಾಸೆ ॥೧೭೯॥

* * *

ಬಂಗಾರ ಬಳಿ ನಾಲ್ಕು ಸಾಕು ನನ ಬಲಗೈಗೆ ।
ನಾಲ್ಕ್ವರಹದ ವಾಲಿ ಹೂ ಬುಗುಡಿ ।
ನಾಲ್ಕ್ವರಹದ ವಾಲಿ ಹೂ ಬುಗುಡಿ--ಗೆಜ್ಜಿಟೀಕಿ ।
ಸಾಕು ತವರವರು ಬಡವರು ॥೧೮೦॥

* * *

ತೊಟ್ಟೀಲ ಹೊತುಕೊಂಡು ತೌರಕ ಬಣ್ಣ ಉಟಗೊಂಡು
ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ।
ಅಪ್ಪ ಕೊಟ್ಟೆಮ್ಮೆ ಹೊಡಕೊಂಡು--ತವರೂರ ।
ತಿಟ್‌ಹತ್ತಿ ತಿರಗಿ ನೋಡ್ಯಾಳ ॥೧೮೧॥

ಬಾರದ್ದು ಬಯಸಿದರ ಯಾರು ಕಳಿಸ್ಯಾರ ತಾಯಿ ।
ದೇವ ದುರ್ಗದ ತುಳಸೀಯು ।
ದೇವ ದುರ್ಗದ ತುಳಸೀಯು--ಬಾಳಕಮಾಡಿ ।
ತಾಯಿ ಹಡದವ್ವ ಕಳಿಸ್ಯಾಳ ॥೨೮೩॥

* * *

ಉಂಗೂರ ಉಡಿದಾರ ಮುರಿದರ ಮಾಡಿಸಬಹುದು ।
ಮಡದಿ ಸತ್ತsರ ತರಬಹುದು ।
ಮಡದಿ ಸತ್ತsರ ತರಬಹುದು--ಹಡೆದಂಥ ।
ತಂದೆ-ತಾಯೆಲ್ಲಿ ಸಿಕ್ಯಾsರ ॥೨೮೩॥

* * *

ಹಟ್ಯಾಗ ಆರೆಮ್ಮಿ ಕೊಟ್ಟಿಗ್ಯಾಗ ಮೂರೆಮ್ಮಿ ।
ಕೊಟ್ಟsರ ಕೊಡಿರೊ ನನಗೊಂದ ।
ಕೊಟ್ಟsರ ಕೊಡಿರೊ ನನಗೊಂದ-ಹಡೆದಪ್ಪ ।
ಹುಟ್ಟಿಲ್ಲೇನು ನಾನು ಮನಿಯಾಗ ॥೨೮೪॥

* * *

ಕೃತಪೂರ ಎಂಬೂದು ಬಂಗಾರ ಪಟ್ಟಣ ।
ಇಟ್ಟಂಗಿ ಕಲ್ಲು ನೆಲಗಟ್ಟ s ।
ಇಟ್ಟಂಗಿ ಕಲ್ಲು ನೆಲಗಟ್ಟs--ಅಗಸ್ಯಾಗ ।
ಬಿಟ್ಟs ಬಂದೇನಿ ನನ ಬಳಗ ॥೨೮೫॥

* * *

ತಾಯಿ ನನ್ ಹಡೆದವ್ವನ ಜೀವೆಲ್ಲ ನನಮ್ಯಾಲ ।
ಥಡಿ ಹಾಕೋ ರಾಯಾ ಕುದಿರೀಗಿ ।
ಥಡಿ ಹಾಕೋ ರಾಯಾ ಕುದರೀಗಿ–ಸಂಗಾಟ ।
ಆಳ ಕಳುವರಸ ಐನೂರ ॥೨೮೬॥

* * *

ಹೆಣ್ಣೀಗೆ ತವರೂರು ರಸಬಾಳಿ ಹಣ್ಣಿನ್ಹಾಂಗ ।
ಬೆಳವಲದ ಹಬ್ಬು ಜೇನಿನ್ಹಾಂಗ ।
ಬೆಳವಲದ ಹಬ್ಬು ಜೇನಿನ್ಹಾಂಗ--ತಾಯೀಯು ।
ಮೊಲಿಹಾಲ ರುಚೀಯು ಸವಿಧಾಂಗ ॥೨೮೭॥

ತಾಯಿಲ್ಲದ ತವರೀಗಿ ಹೋಗದಿರು ನನ ಮನವ ।
ನೀರಿಲ್ದ ಕೆರಿಗೆ ಕರಬಂದು ।
ನೀರಿಲ್ದ ಕೆರಿಗೆ ಕರಬಂದು-ತಿರುಗಾಗ ।
ಆಗ ನೋಡದರ ದುಃಖಗಳ ||೨೮೮||

* * *

ತಾಯಿ ಕಟ್ಟಿದ ಬುತ್ತಿ ತರ ತರದ ಯಾಲಕ್ಕಿ ।
ಜರ ತರದ ಜಾಣಿ ಹಡೆದವ್ವ ।
ಜರ ತರದ ಜಾಣಿ ಹಡೆದವ್ವ-ನಿನಬುತ್ತಿ ।
ಬಿಚ್ಚಿಉಂಡೆ ಭೀಮರತಿಯ ಮ್ಯಾಲೆ ||೨೮೯||

* * *

ಕಾಸೀಗೆ ಹೋಗಲಕ ಏಸೊಂದು ದಿನ ಬೇಕ ।
ತಾಸ್ಹೊತ್ತಿನ್ಹಾದಿ ತವರೂರ ।
ತಾಸ್ಹೊತ್ತಿನ್ಹಾದಿ ತವರೂರ-ಮನಿಯಾಗ ।
ಕಾಸಿ ಕುಂತಾಳ ಹಡೆದವ್ವ ||೨೯೦||

* * *

ಅತ್ತಿಗೆ ತಾಯಲ್ಲ ಹಿತ್ತಾಳಿ ಚಿನ್ನಲ್ಲ ।
ಮತ್ತೆ ಮದಗುಣಿಕೆ ಮರವಲ್ಲ ।
ಮತ್ತೆ ಮದಗುಣಿಕೆ ಮರವಲ್ಲ-ಹೆಣ್ಣೀಗೆ ।
ಹುಟ್ಟೀದ ಮನೆಯು ನಿಜವಲ್ಲ ||೨೯೧||

* * *

ತಾಯನ್ನ ನೆನೆಯೂದು ಯಾಯಾಳಿ ಯಾಹೊತ್ತ ।
ಊರೆಲ್ಲ ಉಂಡು ಮಲಗಾಗ ।
ಊರೆಲ್ಲ ಉಂಡು ಮಲಗಾಗ-ಬೆಳ್ಳಿಚಿಕ್ಕಿ ।
ಹೊಂಡಾಗ ಅವಳ ನೆನದೇನ ||೨೯೨||

* * *

ಜನಕ ಹುಟ್ಟೀದ ಮನಿ ಮನಕ ಏನೇನಿಲ್ಲಾ ।
ಕನಕದ ಗುಂಜಿ ಕಂಡಿಲ್ಲಾ ।
ಕನಕದ ಗುಂಜಿ ಕಂಡಿಲ್ಲಾ-ಹಡದವರು ।
ಅಳದಾಗ ಮರೆತಿರುವೆ ಆ ಮನಿಯ ||೨೯೩||

ಆಡೀಕೊಳ್ಳುವ ಮಾತು ಅಲೀಸಿಕೇಳ್ಯಾಕೆಲ್ಲ ।
ಆ ಮಾತು ಒಯ್ದು ಪರರೀಗಿ ।
ಆ ಮಾತು ಒಯ್ದು ಪರರೀಗಿ-ಹೇಳ್ವಂಥ ।
ಆ ತಾಯಿ ಹಡದ ಮಗಳಲ್ಲ ||೨೯೪||

* * *

ತಂದೀ ನನ ಹಡೆದಪ್ಪ ಕುಂದೀನ ಮಗಳಲ್ಲ ।
ಮುಂದ್ಯಾಗ ನಿಂತು ನಗಲಿಲ್ಲ ।
ಮುಂದ್ಯಾಗ ನಿಂತು ನಗಲಿಲ್ಲ-ನನ್ನೂರ ।
ಬಳಗಕ ಮಾತು ತರಲಿಲ್ಲ ||೨೯೫||

* * *

ಮಗಳು ನಿನ್ನ ಕಳುವಿ ಮಾಳೀಗಿ ಏರೇನ ।
ಮಾವಿನ ಕೊಲ್ಲಿ ಮರೆಯಾಗಿ ।
ಮಾವಿನ ಕೊಲ್ಲಿ ಮರೆಯಾಗಿ-ಕಂದವ್ವ ।
ಮಾಣೀಕ ನಮಗ ಎರವಾಗಿ ||೨೯೬||

* * *

ತಂದಿ ಬಂದಾನೆಂದು ತಂದೀನಿ ಕಾಲಿಗೆ ನೀರು ।
ತಂದೆಲ್ಲ ತವರ ಮನಿ ಒಡೆಯ ।
ತಂದೆಲ್ಲ ತವರ ಮನಿ ಒಡೆಯ-ಅಂದಾನಿಸ್ವಾಮಿ ।
ಬಂದು ನಿಂತಾರ ಸ್ವಪ್ನದಲ್ಲಿ ||೨೯೭||

* * *

ತಾಯಿಲ್ದ ತವರೀಗಿ ಹೋಗ ಬಾರದು ಹೆಣ್ಣು ।
ನೀರಿಲ್ದ ಕೆರಿಗೆ ಕುರಿಬಂದು ।
ನೀರಿಲ್ದ ಕೆರಿಗೆ ಕುರಿಬಂದು-ಹೋಗಾಗ ।
ಆಗ ನೋಡದರ ಬಳಲೀಕಿ ||೨೯೮||

* * *

ಹಡದವ್ವ ಹಾಳಂತ ಅಡರಾಸಿ ನಾ ಹೋದೆ ।
ಹಡದವ್ವನ ಮಗ ನನ ತಮ್ಮನ ।
ಹಡದವ್ವನ ಮಗ ನನ ತಮ್ಮನ-ಮಡದಿ ।
ನುಡಿದ ನುಡಿ ಬಾಣ ಬಡಿಧಾಂಗ ||೨೯೯||

ಕಡಗವಿಲ್ಲದ ಕೈಯು ದಿಡಗವಿಲ್ಲದ ಹೊಳಿಯು ।
ಹಡದವ್ವ ಇಲ್ಲದ ತವರೀಗೆ ।
ಹಡದವ್ವ ಇಲ್ಲದ ತವರೀಗೆ-ಹೋದರ ।
ನಡುದಾರ್‍ಯಾಗ ವಸ್ತಿ ಇಳಿಧಾಂಗ ॥೩೦೦॥

* * *

ಮಳೆಯು ಬಂದರ ಬರಲಿ ಮರದs ಮೇಲಿರುವೆ ।
ಮಳೆ ನಿಂತ್ರು ಮರದs ಹನಿ ಬಿಡದ ।
ಮಳೆ ನಿಂತ್ರು ಮರದs ಹನಿ ಬಿಡದ-ಹಡೆದವ್ವ ।
ನೀ ಬಿಟ್ರು ನಿನ್ನ ಮನ ಬಿಡದ ॥೩೦೧॥

* * *

ಹಡೆದವ್ವ ಹಾಳೆಂದು ಬಡ ಬಡ ಒಳಗ್ಹೋದೆ ।
ಒಳಗ ಹಡೆದವ್ನ ಸೊಸ್ತೇರ ।
ಒಳಗ ಹಡೆದವ್ನ ಸೊಸ್ತೇರ-ಸಪ್ಪಳಕ ।
ತುದಿಗಟ್ಟಿಲಿಂದಾ ತಿರಿಗೇನ ॥೩೦೨॥

* * *

ತಂದಿ ನನ ಹಡೆದಪ್ಪ ಒಂದು ಬಳುವಳಿ ಕಳಿಸು ।
ಅಂಗಳ ತುಂಬ ಎಳೆಗರ ।
ಅಂಗಳ ತುಂಬ ಎಳೆಗರ-ತವರೂರ ।
ಜಂಗೂಳಿ ಬಂದ್ರ ಕರಿಯಾಕ ॥೩೦೩॥

* * *

ಬಂಡಿ ಬಂಡೀಯವರು ಬಂಡೀ ಸಾಗರದವರು ।
ಹಿಂಡೆತ್ತಿನವರು ತವರವರು ।
ಹಿಂಡೆತ್ತಿನವರು ತವರವರು--ಬರುವಾಗ
ಒಂದೆತ್ತಿನಣ್ಣ ಬದಿಗಾಗೊ ॥೩೦೪॥

* * *

ನೀರ್ಹೋಳೀ ದಾರ್‍ಯಾಗ ತಾಯವ್ನ ಕಂಡೀರೇ ।
ಯಾರಂಥಾಕಿ ನನ ಹಡೆದವ್ವ ।
ಯಾರಂಥಾಕಿ ನನ ಹಡೆದವ್ವ-ಮೂಗೂತಿ ।
ಹರಳಿನಂಥಾಕಿ ತಾಯವ್ವ ॥೩೦೫॥

ಅಕ್ಕಿ ಕಿಚಡಿ ಮಾಡಿ ತುಪ್ಪ ಬೆಚ್ಚಗ ಮಾಡಿ ।
ಸುತ್ತೀಳು ನಿರಿಗಿ ಮರಿಮಾಡಿ ।
ಸುತ್ತೀಳು ನಿರಿಗಿ ಮರಿಮಾಡಿ--ಉಣಿಸುವ ।
ಹೆತ್ತವ್ವನಿಲ್ಲ ಮನಿಯಾಗ ॥೩೦೬॥

* * *

ತಾಯಿಗಲಿ ಬಂದೇನಿ ತಾಳಲಾರೆನು ಬಿಸಿಲ ।
ಬೇಗ ಹಾಸಣ್ಣ ಹರಗೋಲ ।
ಬೇಗ ಹಾಸಣ್ಣ ಹರಗೋಲ-ಗಂಗವ್ವ ।
ನಿನ್ನಂಥ ತಾಯಿ ಅಗಲೇನ ॥೩೦೭॥

* * *

ಉಂಡೇನ ಉಟ್ಟೇನ ತಂದೀಯ ಪುಣ್ಯಾsವ ।
ಉಂಡೀನಿ ತಾಯಿ ಮೊಲಿಹಾಲ ।
ಉಂಡೀನಿ ತಾಯಿ ಮೊಲಿಹಾಲ-ಅದರ್ಹಾಂಗ ।
ಗಂಡ ಮಗನೇನ ಗಳಿಯಾಕ ॥೩೦೮॥

* * *

ಒಳ್ಳೆs ಸುತ್ತಲಕ್ಕಿ ಕಲ್ಲs ಸುತ್ತಲಿ ಜೋಳ ।
ನಾಲಗೆ ಸುತ್ತಲು ಸುಲಿಹಲ್ಲು ।
ನಾಲಗೆ ಸುತ್ತಲು ಸುಲಿಹಲ್ಲು-ತಾಯವ್ವ ।
ನಾರಿ ನಿನಸುತ್ತ ಸರು ಬಳಗ ॥೩೦೯॥

* * *

ಬಡವರು ಬಗ್ಗರು ಹೆಡಗಿ ಬುಟ್ಟೀಯುವರು ।
ಹೋಗsರಿ ನನ್ನ ತವರೀಗೆ ।
ಹೋಗsರಿ ನನ್ನ ತವರೀಗೆ-ನನ್ನಪ್ಪ
ಧರುಮದ ಹಗೇವ ತಗದಾನ ॥೩೧೦॥

* * *

ಬೈದಂಥ ಬೈಗsಳು ಬೆನ್ಹತ್ತಿ ಬಾರsವ ।
ಕೋದಂಥ ಕುಸುಬಿ ಚಿಗಿಯsವ ।
ಕೋದಂಥ ಕುಸುಬಿ ಚಿಗಿಯsವ-ಹಡದವ್ವ ।
ಬೈಯ್ದವರ ವಂಶ ಹುರಿಯsಲಿ ॥೩೧೧॥

ಲಿಂಬೀ ಹಣ್ಣಿನ್ಹಾಂಗ ತುಂಬೇತಿ ನನಬಳಗ ।
ಹಂಗೀಸಿ ರಾಯ ಬೈ ಬ್ಯಾಡ ।
ಹಂಗೀಸಿ ರಾಯ ಬೈಬ್ಯಾಡ-ತವರೂರ ।
ಹಿಂಡಿನೆನ್ನಾಕಿ ಅಗಲೇನ ॥೩೧೨॥

* * *

ಕಣ್ಣು ಕಾಣುವ ತನಕ ಬೆನ್ನು ಬಾಗುವ ತನಕ ।
ತಾಯಿ ಯಿರಲಿ ನನಗ ತವರಿರಲಿ ।
ತಾಯಿ ಯಿರಲಿ ನನಗ ತವರಿರಲಿ-ನನ್ನಪ್ಪ ।
ಅಣ್ಣಯ್ಯರಿರಲಿ ಕರಿಸಾಕ ॥೩೧೩॥

* *

ಊರ ಮುಂದಿನ ಗಾಳಿ ಏನಂತ ಬೀಸ್ಯಾವ ।
ಆಲೀಸಿ ಕೇಳ ಹಡೆದವ್ವ ।
ಆಲೀಸಿ ಕೇಳ ಹಡೆದವ್ವ-ನಿನಮಗ ।
ಹಾಡ್ಯಾಡಿ ಹಂತಿ ಹೊಡದಾನ ॥೩೧೪॥

* * *

ಅಣ್ಣನ ಆರೆತ್ತು ತಮ್ಮನ ಮೂರೆತ್ತು ।
ನಮ್ಮಪ್ಪನೆತ್ತು ಹದಿನಾರು ।
ನಮ್ಮಪ್ಪನೆತ್ತು ಹದಿನಾರು-ಬರುವಾಗ ।
ನನ್ನೂರ ಭೂಮಿ ನಡಿಗ್ಯಾವ ॥೩೧೫॥

* * *

ತಂಗಾಳಿ ನೆನೆದರ ತಂಗಳು ಬಿಸಿಯಾಯ್ತು ।
ತಿಂಗಳವ ತಲೆಯು ಮಡಿಯಾಯ್ತು ।
ತಿಂಗಳವ ತಲೆಯ ಮಡಿಯಾಯ್ತು-ತಾಯಿ ಗಂಗವ್ವ ।
ನಿನ್ನ ನಾ ನೆನೆದಾಗ ॥೩೧೬॥

* * *

ದಾಸಾಳ ಹೂವೀಲೆ ನೇಸ್ಯಾಳ ಕುಂಚೀಗಿ ।
ದೇಶಕ್ಕ ಹಡದವ್ವ ಕಳುವ್ಯಾಳ ।
ದೇಶಕ್ಕ ಹಡದವ್ವ ಕಳುವ್ಯಾಳ-ನನ್ನೂರ ।
ದೇಸಾಯಿ ಕಂಡು ಬೆರಗಾದ ॥೩೧೭॥

ಹುಗ್ಗಿ ಹೂರಣ ಗಡುಬು ಮುಗ್ಗಿ ತಾಳಲಗಾಯಿ |
ಒಗ್ಗರಣಿ ಸೋರಿ ಹದಿನಾರು |
ಒಗ್ಗರಣಿ ಸೋರಿ ಹದಿನಾರು-ಹಡೆದಪ್ಪ |
ಒಡ್ಡೀನ ಹೊಲದ ಚರಗಾಽನ ||೩೧೮||

* * *

ಲಿಂಬೀಯು ಗಿಡ ಹುಟ್ಟಿ ಲಿಂಗಽಕ ನೆರಳಾಗಿ |
ನೆಂಬೀಗಿ ಭಕುತ ನನತಮ್ಮ |
ನೆಂಬೀಗಿ ಭಕುತ ನನತಮ್ಮ-ಮುನಿಯಾಗ |
ಜಂಗಮರುಣ್ಣೊದು ಕಡೆಯಿಲ್ಲ ||೩೧೯||

ಇನ್ನೆಲ್ಲಿ ನೋಡಲಿಂಥ ಬಳೆಗಾರ ನಿಟ್ಟೀನ |
ನಮ್ಮ ನಾಡಾಗ ಬಳೆಯಿಲ್ಲ |
ನಮ್ಮ ನಾಡಾಗ ಬಳೆಯಿಲ್ಲ-ಬಳೆಗಾರ |
ಹೋಗಿ ಬಾರಪ್ಪ ನನ್ನ ತವರೀಗಿ ||೩೨೦||

* * *

ಅಚ್ಚ ಕೆಂಪು ಬಳೆ ಕರಿಯಽ ಪಟ್ಟಿ ಬಳೆ |
ನನ್ನ ಹಡೆದವ್ವಗ ಬಲು ಆಸೆ |
ನನ್ನ ಹಡೆದವ್ವಗ ಬಲು ಆಸೆ-ಬಳೆಗಾರ |
ಹೋಗಿ ಬಾರಪ್ಪ ತವರೀಗಿ ||೩೨೧||

* * *

ಹಣ್ಣು ಹಾಲೀಗಿಂತ ಬೆಣ್ಣಿ ತುಪ್ಪಕ್ಕಿಂತ |
ಚನ್ನಾಗಿ ಕಳಿತ ರಸಬಾಳಿ |
ಚನ್ನಾಗಿ ಕಳಿತ ರಸಬಾಳಿ-ಹಣ್ಣಿಗಿಂತ |
ರುಚಿಯವ್ವ ತಾಯಿ ಎದೆಹಾಲು ||೩೨೨||

* * *

ನೀರಮ್ಯಾಲೆ ನೀರು ನೀರಾಚೆ ತಾವಽರೆ |
ತಾವರೆಯಾಚೆ ತವರೂರು |
ತಾವರೆಯಾಚೆ ತವರೂರು-ಹೋದಽರೆ |
ತಿರುಗಿ ಬರಲಾಕ ಮನಸಿಲ್ಲ ||೩೨೩||

ತಾಯಿ ಇದ್ದರೆ ಭೋಗ ತಂದೆ ಇದ್ದರೆ ಭೋಗ ।
ನೀರಿದ್ರೆ ಬಾಳೆ ಗೊನೆ ಭೋಗ ।
ನೀರಿದ್ರೆ ಬಾಳೆಗೊನೆ ಭೋಗ-ತಾಯವ್ವ ।
ನೀ ಇದ್ರ ನಮಗ ಐಭೋಗ ||೩೨೪||

* * *

ಒಬ್ಬರಿರುವ ಮನೀಗೆ ಹಬ್ಬಽದಿರು ಮಲ್ಲೀಗೆ ।
ಒಬ್ಬಽಳೇ ಕೂತು ಮುಡಿಲಾರೆ ।
ಒಬ್ಬಽಳೇ ಕೂತು ಮುಡಿಲಾರೆ-ಮಲ್ಲೀಗೆ ।
ಹಬ್ಹೋಗು ನನ್ನ ತವರೀಗೆ। ||೩೨೫||

* * *

ತಾಯಿ ನನ ಹಡೆದವ್ವ ಜೀವೆಲ್ಲ ನನವ್ಯಾಲ ।
ಥಡಿ ಹಾಕೋ ರಾಯ ಕುದುರೇಗೆ ।
ಥಡಿ ಹಾಕೋ ರಾಯ ಕುದುರೇಗೆ-ಸಂಗಾಟ ।
ಆಳು ಕಳಿಸರಸ ಐನೂರು ||೩೨೬||

* * *

ಎಂಟೆಂಟು ದಿವಸಕ್ಕ ಸಂತಿ ಅಪ್ಪನ ಮನಿ ।
ಚಿಂತಿಸಬೇಡ ಕಿರಿತಂಗಿ ।
ಚಿಂತಿಸಬೇಡ ಕಿರಿತಂಗಿ–ಪಾರ್ವತಿ ।
ಸಂತೋಷ ಕೇಳೆ ತವರೂರು ||೩೨೭||

* * *

ಅಕ್ಕ-ತಂಗೆಯರು ಕಟ್ಟಿ ನೀರಿಗ್ಹೋಗಿ ।
ಅಲ್ಲಿ ನೋಡಕ್ಕ ತವರೂರು ।
ಅಲ್ಲಿ ನೋಡಕ್ಕ ತವರೂರು-ಬೀದೀಯ ।
ಹದಿನಾರು ತೇರು ಹರಿದಾವು ||೩೨೮||

* * *

ಹರಿದರೆ ಹರಿಯಽಲಿ ಮುರಿದರೆ ಮುರಿಯಽಲಿ ।
ನಾವ್ ಒಬ್ರ ಮನೆಯ ಸೊಸೆಯಾಗಿ ।
ನಾವ್ ಒಬ್ರ ಮನೆಯ ಸೊಸೆಯಾಗಿ–ತಂಗೆವ್ವ ।
ತವರೂರ ಸುದ್ದಿ ನಮಗ್ಯಾಕ ||೩೨೯||

ಹೆಣ್ಣs ಇವರಿಗಾದ್ಯಾ ಹೊನ್ನ ಇವರಿಗಾದ್ಯಾ ।
ಎಣ್ಣಿ ಹೋಳಿಗಿ ತುಪ್ಪ ಜನಕಾದ್ಯಾ ।
ಎಣ್ಣಿ ಹೋಳಿಗಿ ತುಪ್ಪ ಜನಕಾದ್ಯಾ-ಗಂಡಿನ ತಂದಿ ।
ಸಣ್ಣ ನಗಿ ನಗುತ ನಡೆದಾನು ||೪೩೦||

* * *

ಆಲ್ಯಾಡತಾವ ಗಾಣ ತಿರುಗೂತಾವ ।
ಪಾರುವದ ಪಕ್ಷಿ ಪಗಡೀಯು ।
ಪಾರುವದ ಪಕ್ಷಿ ಪಗಡೀಯು-ಆಡ್ತಾವ ।
ಅದೇ ನೋಡಣ್ಣ ನನ್ನ ತವರೂರು ||೩೩೧||

* * *

ಅಚ್ಚಕ್ಕಿ ಇದ್ದಾಗ ನುಚ್ಚಕ್ಕಿ ಹಂಗೇನು ।
ಇಚ್ಚ್ಯಾಳ ಗಾತಿ ತಾಯವ್ವ ।
ಇಚ್ಚ್ಯಾಳ ಗಾತಿ ತಾಯವ್ವ-ಇದ್ದಾಗ ।
ಲುಚ್ಚ್ಯಾರ ಸಂಗ ನಮಗ್ಯಾಕ ||೩೩೨||

* * *

ತಾಯವ್ವ ತನ್ ಮಗಳ ಏನಂತ ನೆನೆದಾಳ ।
ಹೊಸ ಬಣ್ಣ ಉಟ್ಟು ಹಸೆ ಮ್ಯಾಲ ।
ಹೊಸ ಬಣ್ಣ ಉಟ್ಟು ಹಸೆಮ್ಯಾಲ-ನಿಂತುಗೊಂಡು ।
ತಾಯವ್ವ ಮಗಳ ಕರೆದ್ಯಾಳ ||೩೩೩||

* * *

ತಾಯವ್ವ ಎಂಬವಳು ದೇವಲೋಕದ ಮನಸ್ಯಾಳು ।
ಕಾಲು ಸೋಕಿದರೆ ಕರ್ಮsವು ।
ಕಾಲು ಸೋಕಿದರೆ ಕರ್ಮsವು-ತಾಯವ್ವ ।
ಕಾಸೀಗ್ಹೋದsರು ಕಳಿಯದ ||೩೩೪||

ತಾಯಿದ್ರೆ ತವರೂರು ನೀರಿದ್ರೆ ಹೆಗ್ಗೆರೆ ।
ಆನೆಯಿದ್ರರಸು ಧೊರಿತನ ।
ಆನೆಯಿದ್ರರಸು ಧೊರಿತನ-ತಾಯವ್ವ ।
ನೀನಿದ್ರ ಲೇಸು ತವರ್ಮನಿ ||೩೩೫||

ಇದ್ದೂರ ಬೀಗತನ ಬಿದ್ದಗ್ಯಾಡೀ ಸಮಾನ।
ಇದ್ದೂರಾಗ ಮಗಳ ಕೊಡಬ್ಯಾಡ-ನನ ಹಡೆದಪ್ಪ।
ಇದ್ದಲ್ಲಿಗೆ ಮಾತ ಬರತಾವ।
ಇದ್ದಲ್ಲಿಗೆ ಮಾತ ಬರತಾವ-ನನ ಹಡೆದಪ್ಪ।
ಮುಂದ ನಿಗ್ಗರಾದಾವೂ ಮಗಳೀಗೆ ||೩೩೬||

* * *

ಕರಿಯ ಗೊಂಗಡಿ ಬ್ಯಾಡ ಕೈಯಾಗುಂಗುರ ಬ್ಯಾಡ।
ಬೆಳದಿಂಗಳದಾಗ ಬರಬ್ಯಾಡ।
ಬೆಳದಿಂಗಳದಾಗ ಬರಬ್ಯಾಡ-ನನ ಅಣ್ಣ।
ಹೆಣ್ಣೀನ ತರಲಿ ತರಬ್ಯಾಡ ||೩೩೭||

* * *

ಹಸಿ ನೋಡಿ ಹರಗಣ್ಣ 'ತತಿನೋಡಿ ಬಿತ್ತಣ್ಣ।
ಗರಿನೋಡಿ ಕಬ್ಬ ಮುರಿಯಣ್ಣ।
ಗರಿನೋಡಿ ಕಬ್ಬ ಮುರಿಯಣ್ಣ-ಹೆಣ್ಣೀನ।
ನೆಲಿ ನೋಡಿ ಸೆರಗ ಹಿಡಿಯಣ್ಣ ||೩೩೮||

* * *

ಎಳ್ಳು ಬಿತ್ತಲಿಲ್ಲ ಎಳ್ಳು ಬೆಳೆಯಲಿಲ್ಲ।
ಎಳ್ಳೂವಿನ ಸೀರಿ ಉಡಲಿಲ್ಲ।
ಎಳ್ಳೂವಿನ ಸೀರಿ ಉಡಲಿಲ್ಲ-ನನ ಹಡೆದಪ್ಪ।
ಒಳ್ಳೇರ ಮನಿಗೆ ಕೊಡಲಿಲ್ಲ ||೩೩೯||



## ಹೆಣ್ಣಿನ ಜನ್ಮ—ನೀತಿ

ಹೆಣ್ಣೀನ ಕಾಯುವ ಮಣ್ಣು ಮಾಡಲಿಬೇಕ।
ಸುಣ್ಣ ಧಳ್ಳಾಗಿ ಸುಡಬೇಕ।
ಸುಣ್ಣ ಧಳ್ಳಾಗಿ ಸುಡಬೇಕ-ಈಜಲುವು।
ಮಣ್ಣು ಮಾಡಿ ಮತ್ರ್ಯ ಗೆದೀಬೇಕ। ||೩೪೦||

ಮದ್ಯಾಣ ಮಳಿಬಂದು ಉದಿರ್ಯಾವ ಮಗಿಮೂವು ।
ಗೆದ್ದೆನೆನಬ್ಯಾಡ ಪತಿವರ್ತಿ ।
ಗೆದ್ದೆನೆನಬ್ಯಾಡ ಪತಿವರ್ತಿ–ಸೀತವ್ವ ।
ಸಿಕ್ಕ್ಯಾಳು ರಾವಣನ ಬಲಿಯಾಗ ||೩೪೧||

* * *

ಹಾಡೀಗಿ ಹಾಡಿಲ್ಲ ಏಡೀಗಿ ತಲೆಯಿಲ್ಲ ।
ಮೋಡಬಂದಲ್ಲಿ ಬಿಸಿಲಿಲ್ಲ ।
ಮೋಡ ಬಂದಲ್ಲಿ ಬಿಸಲಿಲ್ಲ–ಹೆಣ್ಣೀಗಿ।
ಓಡಿ ಹೋದಲ್ಲಿ ಸುಖವಿಲ್ಲ ||೩೪೨||

* * *

ಹೆಣ್ಣು ಹಡೆದವ್ವನ ಹೆಮ್ಮೇನು ದೊಡ್ಡದ ।
ಹಣ್ಣು ಬಂದಾವ ತಿನಬಾರ ।
ಹಣ್ಣು ಬಂದಾವ ತಿನಬಾರ–ಹೆಣ್ಣೀನ ।
ಹರಲಿ ಬಂದಾವ ಹೊರಬಾರ ||೩೪೩||

* * *

ಚಿಂತಾಕು ಇಟಗೊಂಡು ಚಿಪ್ಪಾಡಿ ಬಳಿವಾಕಿ ।
ಚಿಂತಿಲ್ಲೇನ ನಿನಗಿಷ್ಟು ।
ಚಿಂತಿಲ್ಲೇನ ನಿನಗಿಷ್ಟು–ನಿನಗಂಡ ।
ಅಲ್ಲೊಬ್ಬ ಕೂಡ ನಗತಿದ್ದಾ ||೩೪೪||

* * *

ನಕ್ಕರೆ ನಗಲೆವ್ವಾ ನಗಿಮುಖದ ಕ್ಯಾದೀಗಿ ।
ನಾ ಮುಂಚೆ ಮುಡಿದ ಪರಿಮಳ ।
ನಾ ಮುಂಚೆ ಮುಡಿದ ಪರಿಮಳ–ದಾ ಹೂವ ।
ಅವಳೊಂದು ಘಳಿಗಿ ಮುಡಿಯಾಲಿ ||೩೪೫||

* * *

ತಂದಾರ ತರಲೆಂದೆ ತಂಗ್ಯಾಗಿ ಇರಲೆಂದೆ ।
ನಾಬಿಟ್ಟ ಜವಳಿ ಉಡಲೆಂದೆ ।
ನಾ ಬಿಟ್ಟ ಜವಳಿ ಉಡಲೆಂದೆ–ನನಗಾಕಿ ।
ಜೋಡಾಗಿ ಕೂಡಿ ಇರಲೆಂದೆ ||೩೪೬||

ತನ್ನ ಬಾಯಿಲೆ ತಾನು ಗರತೆಂದರೆ ಗರತೆಲ್ಲ ।
ನಿಚ್ಚ ನೀರುಣ ಬದನೀಯು ।
ನಿಚ್ಚ ನೀರುಣ ಬದನೀಯು-ಕಾಯೀಗಿ ।
ಹಚ್ಚಗಿದ್ದರ ಬದಿ ಹುಳುಕ ॥೩೪೭॥

* * *

ಹುಣಚೀಯು ಎಲೆಗೋಳ ಎಣಿಸಿ ನೋಡಿದರೇನ ।
ಮನಸೀನ ಹೆಣ್ಣು ಕೈಮೀರಿ ।
ಮನಸೀನ ಹೆಣ್ಣು ಕೈಮೀರಿ-ಹೋದsರ ।
ನೆನಸೀದರ್ಹ್ಯಾಂಗ ದೊರೆತಾಳ ॥೩೪೮॥

* * *

ಬೈದಂಥ ಬೈಗಳು ಬೆನ್ಹತ್ತಿ ಬಾರsವ ।
ಬೈದವ್ವ ಕೇಳ ನನಮಾತ ।
ಬೈದವ್ವ ಕೇಳ ನನಮಾತ-ಬೈಗೂಳ ।
ಮಲ್ಲೀಗಿ ಹೂಮಾಡಿ ಮುಡಿಹೋಗ ॥೩೪೯॥

* * *

ಹಚ್ಚೀ ಕೊಂಡವ್ವಗ ಚೊಚ್ಚೀಲ ಮಗಳಾದ ।
ಬಿಟ್ಹಾಡಿ ಕೊಳುವ ವೈರೀಯು ।
ಬಿಟ್ಹಾಡಿ ಕೊಳುವ ವೈರೀಯು-ಮನಿಮುಂದ ।
ಬಿಚ್ಚು ಗತ್ಹ್ಯಾಗಿ ಹೊಳದೇನ ॥೩೫೦॥

* * *

ಊರ ಮುಂದಿನ ಭಾವಿ ಯಾರು ಕಟ್ಟಸ್ಯಾರ ತಾಯಿ ।
ಕಾಲು ಜಾರಿದರ ಮರಣsವ ।
ಕಾಲು ಜಾರಿದರ ಮರಣsವ-ಹೆಣ್ಣೀನ ।
ಮನವ ಜಾರಿದರ ವನವಾಸ ॥೩೫೧॥

* * *

ತಂಗೀ ತುಂಬುನು ಬಾರ ತೆಂಗೀನ ತಿಳಿನೀರ ।
ಸಂಗಣ್ಣನ ಭಾವಿ ಸವಿನೀರ ।
ಸಂಗಣ್ಣನ ಭಾವಿ ಸವಿನೀರ-ತುಂಬಿದರೆ ।
ತಂಗೀ ನಮು ತವರ ಮರತೇವ ॥೩೫೨॥

ಮಳೆಗಾಲಕ ಮಲ್ಲೀಗಿ ಒಣಗಿ ಹೋದರೇನ ।
ರಿಣವಿಲ್ಲದವನ ಮದುವ್ಯಾಗಿ ।
ರಿಣವಿಲ್ಲದವನ ಮದುವ್ಯಾಗಿ–ಆ ಬಾಲಿ ।
ಒಣ ಮರಕ ತಪಸು ತಗಧಾಂಗ ||೩೫೩||

* * *

ಗುರುವಿನ ಮಗಳಾದೆ ತರಿಯದ ಕೆಂಡಾದೆ ।
ಉರಿಯ ತಪ್ಪಿದರ ಹೊಗಿಯಾದೆ ।
ಉರಿಯ ತಪ್ಪಿದರ ಹೊಗಿಯಾದೆ-ಗುರುವಿನ ।
ಕರುಣ ತಪ್ಪಿದರ ಮರಣಾದೆ ||೩೫೪||

* * *

ಗುರುವಿನ ಮಗಳಾದೆ ಗರವೀಕಿ ನಮಗಿಲ್ಲ ।
ಪರರೀಗಿ ಬಾಯಿ ಬಿಡಲಿಲ್ಲ ।
ಪರರೀಗಿ ಬಾಯಿ ಬಿಡಲಿಲ್ಲ–ಕಲ್ಯಾಣದ ।
ಶರಣ ಬಸವನ ದಯದಿಂದ ||೩೫೫||

* * *

ಸಂದೀಗಿ ಸಾವೀರ ಮಂದೀ ಇದ್ದರೇನು ।
ಗಂಬೀರ ನನ್ನ ವಗತನ ।
ಗಂಬೀರ ನನ್ನ ವಗತನ–ದೊಳಗಿದ್ದರ ।
ಬಂಗಾರಾದೇವ ಬಳಗಕ್ಕ ||೩೫೬||

* * *

ಬಂಗಾರ ಬಳಿಯಿಟ್ಟು ಬೈಬ್ಯಾಡ ಬಡವರಿಗೆ ।
ಬಂಗಾರ ನಿನಗ ಸ್ಥಿರವಲ್ಲ ।
ಬಂಗಾರ ನಿನಗ ಸ್ಥಿರವಲ್ಲ–ಮದ್ಯಾಣದ ।
ಬಿಸಿಲು ಹೊಳ್ಳೂದು ತಡವಿಲ್ಲ ||೩೫೭||

* * *

ಬಡವಿ ಆಡಿದ ಮಾತು ನುಡಿ ನುಡಿಗೆ ಬ್ಯಾಸರ ।
ಒಡವಿ ಇಟ್ಟವ್ವ ಒನ ಒನದು ।
ಒಡವಿ ಇಟ್ಟವ್ವ ಒನ ಒನದು–ಹೇಳಿದರ ।
ನುಡಿಗಿ ಬಾಯಿ ಬಿಡತಾರ ||೩೫೮||

ಒಳ್ಳೇದ ಒಳಗಿಟ್ಟು ಗೊಳ್ಳುದಾನವ ಮಾಡಿ।
ಕುಳ್ಳೀಯ ಮನೆಗೆ ತಲೆಗೊಟ್ಟು।
ಕುಳ್ಳೀಯ ಮನೆಗೆ ತಲೆಗೊಟ್ಟು-ಹೋಗಾಗ।
ಉಳ್ಳಿಲ್ಲ ದಾನಕೊಡಲಿಲ್ಲ ||೩೫೯||

* * *

ಮುದ್ದ ಗುಣಕಿ ಗೀಡಾ ಉದ್ದs ಬೆಳೆದರೇನ।
ಮುದುಕ ಗಂಡನ ಮದುವ್ಯಾಗಿ।
ಮುದುಕ ಗಂಡನ ಮದುವ್ಯಾಗಿ-ಆ ಬಾಲಿ।
ಇದ್ದ ಬಂಗಾರ ಇಡವಳ್ಳ ||೩೬೦||

* * *

ಹಾಸೀಗಿ ಮಾಡಿರಲಿ ಕೂಸಲ್ಲಿ ಮಲಗಿರಲಿ।
ಸಂಪೀಗ್ಹೂವಿರಲಿ ಬನದಾಗ।
ಸಂಪೀಗ್ಹೂವಿರಲಿ ಬನದಾಗ--ಹಡೆದವ್ವ।
ಮಾತಿರಲಿ ನಿನ್ನ ಮನದಾಗ ||೩೬೧||

* * *

ವರಗೇಡಿ ವಗತನಕ ಕೊಡಬ್ಯಾಡ ಹಡೆದವ್ವ।
ವರನೋಡ ವರನ ಗುಣನೋಡ।
ವರನೋಡ ವರನ ಗುಣನೋಡ--ಮನಿಯಾನ।
ಸಾಸ್ಟಿ ಕಾಳಷ್ಟು ರಿಣ ನೋಡ ||೩೬೨||

* * *

ಹೆಸರ ಬ್ಯಾಳೀ ಒಯ್ದು ಕೆಸರ ಕಲಸೀಧಂಗ।
ಹಸುಮಗಳ ನೊಯ್ದು ಮುದುಕಾಗ।
ಹಸುಮಗಳ ನೊಯ್ದು ಮುದುಕಾಗ-ಕೊಟ್ಟsರ।
ದುಸ್ಮಾನದವರು ತವರವರು ||೩೬೩||

* * *

ಸಾವಿರ ಕೊಟ್ಟರೂ ಸವತೀಯ ಮನಿಬ್ಯಾಡ।
ಸಾವಿರದ ಮ್ಯಾಲ ಐನೂರು।
ಸಾವಿರದ ಮ್ಯಾಲ ಐನೂರು--ಕೊಟ್ಟsರೂ।
ಮಲಮಕ್ಕಳಿರುವ ಮನಿಬ್ಯಾಡ ||೩೬೪||

ಕಿರಕಸಾಲಿ ಗಿಡವು ನೆಲಕ ಹಬ್ಬಿವರೇನು ।
ಕರಿಕರಿ ಗಂಡsನ ಮದಿವ್ಯಾಗಿ ।
ಕರಿಕರಿ ಗಂಡsನ ಮದಿವ್ಯಾಗಿ--ಆ ಬಾಲಿ ।
ಎರಕೊಂಡ ಮುಡಿಯು ಬಿಚ್ಚ್ಯಾಳ ||೩೬೫||

* * *

ಚಿಂತಿ ಮಾಡುವರೇನ ಅಂತರಿಲ್ಲದ ಗಂಗಾ ।
ಚಿಂತ್ಯಾಗ ಕಾಯು ಇಳಿತsರ ।
ಚಿಂತ್ಯಾಗ ಕಾಯು ಇಳಿತsರ–ಮರ್ತ್ಯದಾಗ ।
ಸಂತೋಷದಿಂದ್ಯಾರು ಇರುವsರ ||೩೬೬||

* * *

ಚಲುವಿ ಚಲುವಿ ಅಂತ ಅತಿ ಬಾಯಿ ಬಿಡಬ್ಯಾಡ ।
ಚಲುವಿದ್ದರೇನು ಗುಣವಿಲ್ಲ ।
ಚಲುವಿದ್ದರೇನು ಗುಣವಿಲ್ಲ--ಕೊಳಿನೀರ ।
ತಿಳಿಯಿದ್ದರೇನು ರುಚಿಯಿಲ್ಲ ||೩೬೭||

* * *

ಕಪ್ಪು ಹೆಂಡತಿ ಅಂತ ಕರಕರಿ ಮಾಡಬ್ಯಾಡ ।
ನೀಲದ ಹಣ್ಣು ಬಲು ಕಪ್ಪು ।
ನೀಲದ ಹಣ್ಣು ಬಲು ಕಪ್ಪು–ಇದ್ದರು ।
ತಿಂದು ನೋಡಿದರ ರುಚಿಭಾಳ ||೩೬೮||

* * *

ಕೆಂಪು ಹೆಂಡತಿಯಂದು ಸಂತೋಷ ಪಡಬ್ಯಾಡ ।
ಅತ್ತೀಯ ಹಣ್ಣು ಅತಿ ಕೆಂಪು ।
ಅತ್ತೀಯ ಹಣ್ಣು ಅತಿ ಕೆಂಪು–ಇದ್ದsರು ।
ಒಡೆದು ನೋಡಿದರ ಹುಳು ಭಾಳ ||೩೬೯||

* * *

ಜಾತ ಮಲ್ಲಿಗಿ ಹೂವ ಜಗ್ಗಿ ಕೊಯ್ಯುವರೇನ ।
ಜಗ್ಗಿದರ ಮಗ್ಗಿ ಉದಿರ್ಯಾವ ।
ಜಗ್ಗಿದರ ಮಗ್ಗಿ ಉದಿರ್ಯಾವ–ಪರಹೆಣ್ಣ ।
ದಿಟ್ಟೀಸಿ ನೋಡಿ ಫಲವೇನ ||೩೭೦||

ಗಂಗಿ ಹರಿವುದ ಕಂಡು ಲಿಂಗಯ್ಯ ಬೆರಗಾದ ।  
ಭಂಗಾರ ಬಸವ ನಸುನಕ್ಕ ।  
ಭಂಗಾರ ಬಸವ ನಸುನಕ್ಕ–ಕೇಳ್ಯಾನ ।  
ಹೆಂಗಸರಿಗ್ಯಾಕ ಧರುಪಽವು ॥೩೭೧॥

* * *

ಸೂಳೀಗಿ ಹೋಗವನ ಸುಲಿದು ಮಟ್ಟೀಕಟ್ಟಿ ।  
ಊರ ಹೊರಗವನ ಹೆಡಮುರುಗಿ ।  
ಊರ ಹೊರಗವನ ಹೆಡಮುರಿಗಿ–ಕಟ್ಟಿದರ ।  
ಸೂಳೆಂಬ ಸಬುದ ಬಿಡವಲ್ಲ ॥೩೭೨॥

* * *

ಇಬ್ಬರ್ಹೆಂಡರ ನಾದಾ ಏಡೀಯು ಮುಳ್ಳಾದಾ ।  
ಕೋಡಗ ನಾದಾ ಕೊರವಾದಾ ।  
ಕೋಡಗ ನಾದಾ ಕೊರವಾದಾ–ಬಾಲ್ಯಾರು ।  
ಮಾಡಿಟ್ಟ ಸಿಂಬಿ ಅರಿಬ್ಯಾದಾ ॥೩೭೩॥

* * *

ಚಿತ್ತ ಮುರುಕನ ಬಳ್ಳಿ ಎತ್ತ ಹಬ್ಬಿದರೇನ ।  
ಚಿತ್ತ ಬ್ಯಾರೆವಳ ಬಗೆ ಬ್ಯಾರೆ ।  
ಚಿತ್ತ ಬ್ಯಾರೆವಳ ಬಗೆಬ್ಯಾರೆ–ಕಬ್ಬೀನ ।  
ಹಿಪ್ಪಿ ಬ್ಯಾರ್ಯದರ ರಸ ಬ್ಯಾರೆ ॥೩೭೪॥

* * *

ಉಡಕೀಯು ಹೆಂಡತಿ ಉಡಿಯಾನ ಲಿಂಗೆಂದಾ ।  
ಕಿರಿಬಳ್ಳ ಹಿಡಿದ ಮಡದೀಯು ।  
ಕಿರಿಬಳ್ಳ ಹಿಡಿದ ಮಡದೀಯು–ಸಂಗಾಟ ।  
ಸಿಡಿ ಪೀಡಿಯಾಕೋ ಸಿರಿರಾಯಾ ॥೩೭೫॥

* * *

ಗಂಡು ಹಡದೀನೆಂದು ಗರವೀಕಿ ನಿನಗ್ಯಾಕ ।  
ಗಂಡೆಂಬ ಪಿಂಡ ಬೆಳೆದಽರ ।  
ಗಂಡೆಂಬ ಪಿಂಡ ಬೆಳೆದಽರ–ಅದು ಮುಂದ ।  
ಹೆಂಡರಿಚ್ಚಾಗಿ ನಡೆವೂದ ॥೩೭೬॥

ಮಕ್ಕಳು ಮನಿತುಂಬ ಕಷ್ಟಕ ಒಬ್ಬಳು ।
ಭತ್ತ ಕೊಡು ಶಿವನೆ ಅನುಗಾಲ ।
ಭಕ್ತ ಕೊಡು ಶಿವನೆ ಅನುಗಾಲ-ಮಕ್ಕಳಿಗೆ ।
ನುಚ್ಚಂಬಲಿ ಮಾಡಿ ಸಲುವೇನ ॥೩೭೭.॥

* * *

ಕಾಗೀಗೆ ಕಣ್ಣಿಟ್ಟ ಕರಿಯು ಹುಬ್ಬಿನ ಜಾಣ ।
ಮಾವೀನ ಹಣ್ಣ ಮನಿಯಾಗ ।
ಮಾವೀನ ಹಣ್ಣ ಮನಿಯಾಗ-ಇಟಗೊಂಡು ।
ನೀರಲಕ್ಯಾಕ ನೆದರಿಟ್ಟಾ ॥೩೭೮॥

* * *

ಅಂಗಯ್ಯ ಒಳಗೀನ ಲಿಂಗ ಮೂರುತಿ ಸ್ವಾಮಿ ।
ಮಂಗsಳಾರೂತಿ ನಾ ಬೆಳಗಿ ।
ಮಂಗsಳಾರೂತಿ ನಾಬೆಳಗಿ-ಬೇಡುವೆನು ।
ಮಾರಾಯರ ಮುಂದ ಮರಣವ ॥೩೭೯॥

* * *

ಅತ್ತ ಮಕ್ಕಳ ಕೈಗಿ ತುತ್ತ್ರೊಟ್ಟಿ ಕೊಡಲಿಲ್ಲ ।
ಮಕ್ಕಳ ಬೇಡಿ ಪರವುತಕ ।
ಮಕ್ಕಳ ಬೇಡಿ ಪರವುತಕ-ಹೋದರ ।
ಮುಕ್ಕಣ್ಣ ಶಿವನು ನಗನೇನ ॥೩೮೦॥

* * *

ಬಡತsನ ನನಗಿರಲಿ ಭಾಳ ಮಕ್ಕಳಿರಲಿ ।
ಮ್ಯಾಗ ಗುರುವಿನ ದಯುವಿರಲಿ ।
ಮ್ಯಾಗ ಗುರುವಿನ ದಯು ವಿರಲಿ- ನನ ಗುರುವೆ ।
ಬಡವನದ ಚಿಂತಿ ನಿನಗಿರಲಿ ॥೩೮೧॥

* * *

ಮರ್ತ್ಯಕ ಹುಟ್ಟಿ ಬಂದು ಶರ್ತ ಮಾಡಿದ ಶಿವಗ ।
ವ್ಯರ್ಥ ಮಾಡಬ್ಯಾಡ ನನ ಜಲ್ಮ ।
ವ್ಯರ್ಥಮಾಡ ಬ್ಯಾಡ ನನ ಜಲ್ಮ-ಮಲ್ಲಯ್ಯ ।
ಶರ್ತಮಾಡೀದ ನಿನ ಸೇವೆ ॥೩೮೨॥

ನೀರಾಗ ನಿಂತಿರುವ ನೀಲಿ ಪಾವುಡದಣ್ಣ ।
ನೀರು ಕೆಟ್ಟ್ಯಾವು ಬದಿಗಾಗೋ ।
ನೀರು ಕೆಟ್ಟ್ಯಾವು ಬದಿಗಾಗೋ-ಗಂಡುಳ್ಳ ।
ಬಾಲಿ ಕೆಟ್ಟ್ಯಾಳು ನಿನಗಾಗಿ ॥೧೮೩॥

* * *

ಬಾಗಿ ಬಾರೋ ಶಿವನೆ ಬಾಗೀಲ ಬಡಿದಾವು ।
ಮಗ್ಗೀಲದೆಲವು ಮುರಿದಾವು ।
ಮಗ್ಗೀಲದೆಲವು ಮುರಿದಾವು-ಜಡಿಯಾನ ।
ಗಂಗಾಗ ಪೆಟ್ಟು ತಗಲ್ಯಾವು ॥೧೮೪॥

* * *

ಮುಗಿಲ ಮ್ಯಾಲಿನ ಚಿಕ್ಕಿ ಹಗಲು ಮೂಡಿರೇನ ।
ಅಗಲಿ ಇರುವವರ ಗೋಡಿವೇನ ।
ಅಗಲಿ ಇರುವವರ ಗೊಡಿವೇನ-ಮಾಣೀಕ ।
ಹಾವೀನ ಬದಿಲಿದ್ದು ಫಲವೇನ ॥೧೮೫॥

* * *

ಪರಿಮಳದರಸರು ಪರನಾರೀಗ್ಹೋದರ ।
ಮನಿ ಮಡದಿ ಬಾಯಿ ಬಿಡಬ್ಯಾಡ ।
ಮನಿ ಮಡದಿ ಬಾಯಿ ಬಿಡಬ್ಯಾಡ-ತಾವ್ ತಮ್ಮ ।
ಮನ ಹೇಸಿ ಮನಿಗೆ ಬರತಾರ ॥೧೮೬॥

* * *

ಗಂಧ ಹಚ್ಚಾಕ ಬಲ್ಲಿ ಎಮುಕ ಮಾಡಾಕ ಬಲ್ಲಿ ।
ಗಂಡನ್ಯಾಕೊಲ್ಲಿ ಗಯ್ಯಾಳಿ ।
ಗಂಡನ್ಯಾಕೊಲ್ಲಿ ಗಯ್ಯಾಳಿ-ನಿನಕೆಲಸ ।
ತಾಸೊತ್ತಿನ್ಯಾಗ ತೀರ್ಯಾವ ॥೧೮೭॥

* * *

ಹೆರವರ್ಹೆಣ್ಣೀಗಾಗಿ ಹೊರಗ ಮಲಗುವ ಜಾಣ ।
ಗಿಡದ ಮ್ಯಾಗೆರಡು ಗಿಣಿ ಕೂತು ।
ಗಿಡದ ಮ್ಯಾಗೆರಡು ಗಿಣಿ ಕೂತು-ನುಡಿದಾವ ।
ಎರವನ್ನೊ ರಾಯ ನಿನ ಜೀವ ॥೧೮೮॥

ಅತ್ತೀಯ ಮನಿಯಾಗ ಮುತ್ತಾಗಿ ಇರಬೇಕ ।
ಹೊತ್ತಽ ನೀಡಿದರ ಉಣಬೇಕ ।
ಹೊತ್ತಽ ನೀಡಿದರ ಉಣಬೇಕ-ತವರವರ ।
ಉತ್ತಮರ ಹೆಸರ ತರಬೇಕ ||೩೮೯||

* * *

ಇದ್ದಽರ ಇರಬೇಕ ಬುದ್ಧಿವಂತರ ನೆರೆಯ ।
ಕುದ್ದರಗೇಡಿ ಕುಲಗೇಡಿ ।
ಕುದ್ದರಗೇಡಿ ಕುಲಗೇಡಿ--ನೆರೆಯಿದ್ದು ।
ಇದ್ದಷ್ಟು ಬುದ್ಧಿ ಕಳಕೊಂಡ ||೩೯೦||

* * *

ಸಂಗಽ ಮಾಡೇನವ್ವ ಲಿಂಗಽವಂತರ ಕೂಡ ।
ಬಂಗಾರಕಿಂತ ಬಲು ಹೆಚ್ಚು ।
ಬಂಗಾರಕಿಂತ ಬಲು ಹೆಚ್ಚು-ಇದ್ದವರ ।
ಸಂಗಽ ಮಾಡೀನಿ ಅನಗಾಲ ||೩೯೧||

* * *

ಗಂಡಽ ಸತ್ತವ್ವಗ ರಂಡಿ ಮುಂಡೆನ ಬೇಡ ।
ಕಂದಽನ ಹಿಡಿದು ತಪಹಾಳ ।
ಕಂದಽನ ಹಿಡಿದು ತಪಹಾಳ-ಅವಳೀಗಿ ।
ಗಂಗಾದೇವೆಂದು ಕರಿಬೇಕ ||೩೯೨||

* * *

ತನ್ನಂಗ ನೋಡಿದರ ಭಿನ್ನಿಲ್ಲ ಭೇದಿಲ್ಲ ।
ತನ್ನಂಗ ತನ್ನ ಮಗಳ್ಹಂಗ ।
ತನ್ನಂಗ ತನ್ನ ಮಗಳ್ಹಂಗ-ನೋಡಿದರ ।
ಕಣ್ಣ ಮುಂದೈತಿ ಕೈಲಾಸ ||೩೯೩||

* * *

ಸತ್ತು ಹುಟ್ಟೊದೊಲ್ಲಿ ಸಾವ ಗಂಡನ್ನೊಲ್ಲಿ ।
ಸಾತ್ವಿಕರ ಮಗಳ ಗೌರವ್ವ ।
ಸಾತ್ವಿಕರ ಮಗಳ ಗೌರವ್ವ-ನಿನ್ನಂಥ ।
ಮುತ್ತೈದಿತನವ ಕೊಡು ನಮಗ ||೩೯೪||

ಕಾಚು ಕಾಡಿಗೆ ಹೀನ ನೀಚ ನಾಲಿಗೆ ಹೀನ ।
ಆಚಾರ ಹೀನ ಗರತೀಯು ।
ಆಚಾರ ಹೀನ ಗರತೀಯು–ಮನಿಮುಂದ ।
ಮೀಸಿ ಬಂದಣ್ಣನ ನಗೆ ಹೀನ ।  ॥೩೯೫॥

* * *

ಮಾತಿಗೆ ಮಲಕಿಲ್ಲ ನೀತಿಗೆ ತೊಡಕಿಲ್ಲ ।
ಸಾಸ್ವಿಕಾಳಿಗೆ ಹುಳುಕಿಲ್ಲ ।
ಸಾಸ್ವಿಕಾಳಿಗೆ ಹುಳುಕಿಲ್ಲ–ಅತ್ತಿಮನಿ ।
ಸೋಸಿ ನಡೆದರು ಅರಿಕಿಲ್ಲ  ॥೩೯೬॥

* * *

ಅತ್ತಿ ಮಾವರಿಗಂಜಿ ಸುತ್ತೇಳು ನೆರೆಗಂಜಿ ।
ಮತ್ತ ನಲ್ಲನ ಧನಿಗಂಜಿ ।
ಮತ್ತ ನಲ್ಲನ ಧನಿಗಂಜಿ--ನಡೆದರ ।
ಎಂಥ ಉತ್ತಮರ ಮಗಳಂದ  ॥೩೯೭॥

* * *

ಅತ್ತೀಯ ಮನಿಯಾಗ ಹತ್ತೆಂಟು ಬೈದರ ।
ಉತ್ತರಬ್ಯಾಡ ನನ ಮಗಳ ।
ಉತ್ತರಬ್ಯಾಡ ನನ ಮಗಳ--ನಿಮ್ಮತ್ತಿ ।
ಎಂಥ ಉತ್ತಮರ ಮಗಳಲ್ಲಿ  ॥೩೯೮॥

*

ಸರದಾರ ನನ್ನಣ್ಣ ಕರೆದು ತಾ ಹೇಳ್ಯಾನ ।
ನೆರಿಹೊರಿಯ ಮನಿಯ ಹೊಗುಬ್ಯಾಡ ।
ನೆರಿಹೊರಿಯ ಮನಿಯ ಹೊಗುಬ್ಯಾಡ--ನನ ತಂಗಿ ।
ಬರಬಾರದ ಮಾತು ಬರತಾವ  ॥೩೯೯॥

* * *

ಹಿರಿಯರಿಗೆ ಹಿರಿಯನ್ನು ಕಿರಿಯರಿಗೆ ಕಿರಿಯನ್ನು ।
ನೆರೆ ಗಡ್ಡದ ಮುದುಕರ ।
ನೆರೆ ಗಡ್ಡದ ಮುದುಕರ–ಕಂಡರ ।
ತಲೆ ಬಾಗಿ ನಡಿಯೋ ನನ ಮನವ  ॥೪೦೦॥

ಚಿಂತಿ ಮಾಡಲಿ ಬ್ಯಾಡ ಛೀ ಹುಚ್ಚಿ ಹಡೆದವ್ವ ।
ಚಿಂತ್ಯಾಗ ಕಾಯ ಇಳಿತsರ ।
ಚಿಂತ್ಯಾಗ ಕಾಯ ಇಳಿತsರ–ಪಾಂಡವರ ।
ಅಂಥವರಿಗುಂಟು ವನವಾಸ ||೪೦೧||

* * *

ಲೋಕದಾಗೀ ಜೀವ ಜ್ವಾಕ್ಯಾಗೊಂದಿರಬೇಕ ।
ಕಾಕು ಬುದ್ಧಿಗಳು ಸ್ಥಿರವಲ್ಲ ।
ಕಾಕು ಬುದ್ಧಿಗಳು ಸ್ಥಿರವಲ್ಲ–ಈ ಜೀವ ।
ನೂಕೇನ ಹರುವ ಜಲದಾಗ ||೪೦೨||

* * *

ಹಸುವೀಗಿ ಹಾಲ್ಕೊಟ್ಟು ಶಿಶುವಿಗಿ ಬೆಣ್ಣಿಕೊಟ್ಟು ।
ಬಿಸಲೀಗಿ ನಿಂತವರ ನೆರಳೀಗಿ ।
ಬಿಸಲೀಗಿ ನಿಂತವರ ನೆರಳೀಗಿ–ಕರೆದರ ।
ಅಸವಲ್ಲದ ಪುಣ್ಯ ಮಗನೀಗಿ ||೪೦೩||

* * *

ಕಾಣದ ಮಾತಿಗೆ ಖಂಡsಗಂದರೇನ ।
ಬಂಡs ಮಾಡವರ ಗೊಡಿವೇನ ।
ಬಂಡs ಮಾಡವರ ಗೊಡಿವೇನ–ತುಂಬೀದ ।
ಬಂಡಿ ನಡೆಥಂಗ ನಡೆದೇನ ||೪೦೪||

* * *

ಮಂದಿ ಮಕ್ಕಳೊಳಗ ಛಂದಾಗ್ಯೊಂದಿರಬೇಕ ।
ನಂದೀಯ ಶಿವನ ದಯದಿಂದ ।
ನಂದೀಯ ಶಿವನ ದಯದಿಂದ--ಹೋಗಾಗ ।
ಮಂದಿ ಬಾಯಾಗ ಇರಬೇಕ ||೪೦೫||

* * *

ಅಲ್ಲ ಅಂಗಡ್ಯಾಗ ಬೆಲ್ಲ ಬಾಜಾರದಾಗ ।
ಎಲ್ಲರ ಮಾತು ಮನದಾಗ ।
ಎಲ್ಲರ ಮಾತು ಮನದಾಗ--ಇಟಗೊಂಡು ।
ಬೆಲ್ಲದ್ಲೇರಾಗಿ ಬರುವೇನ ||೪೦೬||

ಅಂಜೂರ ಹಣ್ಣೆಂದು ತಂದು ತೂರಲಿ ಬ್ಯಾಡ ।
ಹೆಂಡರಿಗೆ ಸಲಿಗಿ ಕೊಡಬ್ಯಾಡ ।
ಹೆಂಡರಿಗೆ ಸಲಿಗಿ ಕೊಡಬ್ಯಾಡ-ನನತಮ್ಮ ।
ಮುಂದ ನಿನಮಾತ ನಡಿಯಾವ ॥೪೦೭॥

* * *

ಬಾಲಕರಿಲ್ಲದ ಬಾಲೀದ್ಯಾತರ ಜಲ್ಮ ।
ಬಾಡೀಗಿ ಎತ್ತು ದುಡಿಧಂಗ ।
ಬಾಡೀಗಿ ಎತ್ತು ದುಡಿಧಂಗ-ಬಾಳೆಲೆಯು ।
ಹಾಸ್ಯುಂಡು ಬೀಸಿ ಒಗೆಧಂಗ ॥೪೦೮॥

* * *

ಬೇವಿನ ಆ ಗಿಡಕ ಬೆಲ್ಲದ ಕಟ್ಟೆ ಕಟ್ಟಿ ।
ಜೇನ ತುಪ್ಪದಲಿ ಹೊಯ್ನೀರ ।
ಜೇನ ತುಪ್ಪದಲಿ ಹೊಯ್ನೀರ-ಹಾಕಿದರ ।
ಬೇವು ತನ್ನಿಸವ ಬಿಡಲಿಲ್ಲ ॥೪೦೯॥

* * *

ಕಂದನ ಕೊಡು ಶಿವನೆ ಬಂಧನ ಬಡಲಾರೆ ।
ಹಂಗೀನ ಬಾನ ಉಣಲಾರೆ ।
ಹಂಗೀನ ಬಾನ ಉಣಲಾರೆ-ಮರ್ತ್ಯದಾಗ ।
ಬಂಜೆಂಬ ಶಬುದ ಹೊರಲಾರೆ ॥೪೧೦॥

* * *

ಜೀವಕ ಬಂದರ ತಾಯ್ಯಾರ ತಂದ್ಯಾರ ।
ಮೈದೂನರ್ಯಾರ ಮಗನ್ಯಾರ ।
ಮೈದೂನರ್ಯಾರ ಮಗನ್ಯಾರ-ಸಾವಾಗ ।
ಕೈಹಿಡಿದ ರಾಯ ಕಡೆಗಾದಾ ॥೪೧೧॥

* * *

ಬಂಜಿ ಬಾಗಿಲ ಮುಂದ ಬಂಗಾರದೊಳಕಲ್ಲ ।
ಬಂದು ಕುಟ್ಟ್ಯಾಕ ಸೊಸಿಯಿಲ್ಲ ।
ಬಂದು ಕುಟ್ಟ್ಯಾಕ ಸೊಸಿಯಿಲ್ಲ-ಮಾನಾವಿ ।
ಬನ್ನಿ ಮುಡಿಯಾಕ ಮಗನಿಲ್ಲ ॥೪೧೨॥

ಕೊಟ್ಟು ಕುದಿಯಲು ಬೇಡ ಇಟ್ಟು ಹಂಗಿಸಬೇಡ ।
ಇಷ್ಟಾಂಡರೆಂದು ಅನಬ್ಯಾಡ ।
ಇಷ್ಟುಂಡರೆಂದು ಅನಬ್ಯಾಡ–ಈ ಮೂರು ।
ಮುಟ್ಟ್ಯಾವ ಶಿವನ ಸದರೀಗಿ ||೪೧೩||

* * *

ಹೆಣ್ಣು ಆಗುದಕಿಂತ ಮಣ್ಣು ಆಗುದು ಲೇಸು ।
ಮಣ್ಣೀನ ಮ್ಯಾಲ ಮರವಾಗಿ ।
ಮಣ್ಣೀನ ಮ್ಯಾಲ ಮರವಾಗಿ–ಇದ್ದsರ ।
ಬಂದವರಿಗೆಲ್ಲ ನೆರಳವ್ವ ||೪೧೪||

* * *

ಒಡ ಹುಟ್ಟೀದವರಿಗೆ ಒಡಜಾಲಿ, ಮುಳ್ಳಾದಾ ।
ಹಡದವ್ವಗೀದ ಹುಲಿಯಂದಾ ।
ಹಡದವ್ವಗೀದ ಹುಲಿಯಂದಾ–ನನತಮ್ಮ ।
ಮಡದೀಗೆ ಮಾಣಿಕ ಧ್ಬರಳಾದಾ ||೪೧೫||

ವಿಠ್ಠಲನ ಗುಡಿಯಾಗ ಎಷ್ಟೊತ್ತು ನಿಂದರಲಿ ।
ಬಟ್ಟ ಕುಂಕೂಮ ಬೆವತಾವ ।
ಬಟ್ಟ ಕುಂಕೂಮ ಬೆವತಾವ–ವಿಠ್ಠಲ ।
ಟೊಪ್ಪೀಗಿ ಮಗನs ದಯಮಾಡೋ ||೪೧೬||

* * *

ಅತ್ತೀಗಿ ಹಡೆಯsಲಿ ಹತ್ತೆಮ್ಮಿ ಕರೆಯsಲಿ ।
ಹಿತ್ತಲ ಬಾಳಿ ಚಿಗಿಯsಲಿ ।
ಹಿತ್ತಲ ಬಾಳಿ ಚಿಗಿಯsಲಿ-ಅತ್ಯೆಂದು ।
ಅತ್ತಿಗೆಯ ಮಗಳು ಕರೆಯಾಲಿ ||೪೧೭||

* * *

ಅಲ್ಲದವರ ತಡವಿ ಝುಲ್ಲೆಂದ ನನ ಮನವ ।
ಕಲ್ಲಾಗ ಕಡ್ಡಿ ಒಡಧಂಗ ।
ಕಲ್ಲಾಗ ಕಡ್ಡಿ ಒಡಧಂಗ–ನೆಗ್ಗೀಲ ।
ಮುಳ್ಳಾಗ ದಾರಿ ತೆಗಧಾಂಗ ||೪೧೮||

ಛೀ ಏಳ ಛೀಮಾರಿ ನಾಚೀಕಿಲ್ಲದ ನಾರಿ ।
ಗಂಡನ್ನ ಬೈವ ಗೈಯಾಳಿ ।
ಗಂಡನ್ನ ಬೈವ ಗೈಯಾಳಿ-ಗಂಡsಗ ।
ಅಂವ ಇಂವನೆಂದು ಕರೆದಾಳ ॥೪೧೯॥

* * *

ಹಸುಗೂಸು ಹುಟ್ಟsಲಿ ಹೊಸಪ್ಯಾಟಿ ಕಟ್ಟsಲಿ ।
ರಸಬಾಳಿ ಕಬ್ಬು ಬೆಳಿಯಾಲಿ ।
ರಸಬಾಳಿ ಕಬ್ಬು ಬೆಳಿಯಾಲಿ--ನಮ್ಮೂರ ।
ಬಸವನ ತೇರು ಎಳಿಯಾಲಿ ॥೪೨೦॥

* * *

ಎಂಥಾದು ಮಾಡಿದರು ಸಿಂತರಿಸಿ ಬಿಡುವೂರ ।
ಎಂಥಾದ ನನ್ನ ಕೈಗೂಣ ।
ಎಂಥಾದ ನನ್ನ ಕೈಗೂಣ--ಶಿವಲಿಂಗ ।
ಬೆಂಕಿಯಂಥವರು ಅರುವಿರಲಿ ॥೪೨೧॥

* * *

ಉಣಕಲ್ಲ ಬೆಳಿಯsಲಿ ಉಣಕಲ್ಲ ಬಿತ್ತsಲಿ ।
ಉಣಕಲ್ಲ ಗುಡ್ಡ ಚಿಗಿಯsಲಿ ।
ಉಣಕಲ್ಲ ಗುಡ್ಡ ಚಿಗಿಯsಲಿ-ನನ್ನಂಥ ।
ಹೆಣ್ಣೀನ ನ್ಯಾಯ ನುರಿಯsಲಿ ॥೪೨೨॥

* * *

ಆಸೊತ್ರ ನನ ಮನೆಯು ಬೇಸತ್ರ ನನ ಮನೆಯು ।
ಕೂಸು ಕಾಡಿದರು ನನ ಮನೆಯು ।
ಕೂಸು ಕಾಡಿದರು ನನ ಮನೆಯು-ತವರೂರು ।
ಏಸು ದಿನ ಇದ್ರು ನೆರ ಮನೆಯು ॥೪೨೩॥

* * *

ಭಾಗಾದಿ ಬಲಕಿರಲಿ ವೈರಿತಾ ಎಡಕಿರಲಿ ।
ಚಾಡಿ ನಿನ ಮನಿಯು ಇದರಿರಲಿ ।
ಚಾಡಿ ನಿನ ಮನಿಯು ಇದರಿರಲಿ-ಬಲಭೀಮ ।
ದೇವ ನನ ಮ್ಯಾಲ ದಯವಿರಲಿ ॥೪೨೪॥

ಹೆಸರೀಗಿ ರಬಕಽವಿ ಮೊಸರೀಗಿ ಸೀರಿಲ್ಲ ।
ಕುಸಲಽದ ಸಿಂಬಿ ಬರಿಗೊಡ ।
ಕುಸಲಽದ ಸಿಂಬಿ ಬರಿಗೊಡ-ದ ಬಾಲ್ಯಾರು ।
ಉಸ್ಸೆಂತ ಭಾವಿ ಇಳಿದಾರ ||೪೨೫||

* * *

ಚಂದಽಕ ನಿಂಬರಗಿ ಗಂಧ್ಯಽಕ ನೀರಿಲ್ಲ ।
ಟೆಂಗೀನ ಪರಟಿ ಬರಿಗೊಡ ।
ಟೆಂಗೀನ ಪರಟಿ ಬರಿಗೊಡ--ದ ಬಾಲ್ಯಾರ ।
ರಂಬ್ಯಾರ ಜಗಳ ವರತ್ಯಾಗ ||೪೨೬||

* * *

ಸಂಜಿ ಹೊಟ್ಟಿಗಿ ಮಾಡಿ ಗಂಗಿ ನೀರಿಗಿ ಹೋದ ।
ಗಂಗವ್ವಾ ತಾಯಿ ಕೊಡನೆತ್ತ ||೪೨೭||

* * *

ಯಾರಂತ ಎತ್ತಽಲಿ ಯಾರಂತ ಹೊರಿಸಽಲಿ ।
ಯಾರಂತ ಕೊಡವ ನೆಗವಽಲಿ ||೪೨೮||

* * *

ದೊಡ್ಡವರ ಸೊಸಿ ನಾನು ಧರ್ಮರಾಯರ ಮಗಳು ।
ಸೂರ್ಯಚಂದ್ರರ ಹಿರಿತಂಗಿ ।
ಸೂರ್ಯಚಂದ್ರರ ಹಿರಿತಂಗಿ-ಬಂದೇನಿ ।
ತಾಯಿ ಗಂಗವ್ವಾ ಕೊಡನೆತ್ತ ||೪೨೯||

* * *

ಕುರಿಯ ಕಾಯಂವ್ಗ ಕಿರಿ ಬಿದರಿನ ಕೊಳಲ್ಯಾಕ ।
ನೆರೆ ಬಂದ ಮ್ಯಾಲ ಹುಡುಗ್ಯಾಕೆ ।
ನೆರೆ ಬಂದ ಮ್ಯಾಲ ಹುಡುಗ್ಯಾಕೆ-ಜೋಳಽದ ।
ತೆನಿ ಬಿದ್ದ ಮ್ಯಾಲೆ ಕವಣ್ಯಾಕ ||೪೩೦||

* * *

ಮುಕ್ಕ ನೀ ಕೇಳೋ ಮೂದೇವಿ ನೀ ಕೇಳೋ ।
ಬಿಟ್ಟ್ಯಣ್ಣ ಸಂಗ ನಿನಗ್ಯಾಕೊ ।
ಬಿಟ್ಟ್ಯಣ್ಣ ಸಂಗ ನಿನಗ್ಯಾಕೊ-ಎಲೆ ಮರುವ ।
ಬಿಟ್ಟೋರ ಸುದ್ದಿ ನಿನಗ್ಯಾಕೋ ||೪೩೧||

ವಾರಿ ರುಮಾಲು ಸುತ್ತಿ ಓಣ್ಯಾಗ ನಿಂತಾನ ।
ದಗದಿಲ್ಲೇನೋ ಹೊಲದಾಗ ।
ದಗದಿಲ್ಲೇನೋ ಹೊಲದಾಗ–ಚಂದ್ರಾಮಾ ।
ನಾರ್‍ಯಾರಿಲ್ಲೇನೋ ಮಸಿಯಾಗ ॥೪೩೨॥

* * *

ಹಾವುಸೆಯ ಅರೆಯನ್ನು ಹಾವಿನಾ ಮರಿಯನ್ನು ।
ಹಾಡುತ್ತ ಬರುವ ಕೊರವೀಯು ।
ಹಾಡುತ್ತ ಬರುವ ಕೊರವೀಯು-ಕಂಡರೆ ।
ಹಾದೀಯು ಬಿಟ್ಟು ಮರೆಯಾಗು ॥೪೩೩॥

* * *

ಮಕ ಮಕ ಮಲ್ಲೀಗಿ ಅದರಾಗ ಕ್ಯಾದೀಗಿ ।
ಬಿಚ್ಚಿ ನೋಡಿದರ ಬಿಳಿ ಎಲಿ ।
ಬಿಚ್ಚಿ ನೋಡಿದರ ಬಿಳಿ ಎಲಿ–ಅಂಥವಳ್ನ ।
ಬಿಟ್ಟು ಮಲಗೂದು ಥರವೇನೋ ॥೪೩೪॥

* * *

ಬಿಟ್ಟರ ಬಿಡವಲ್ಲಿ ಬಿಗುವಿನಾ ಮಾತ್ಯಾಕೊ ।
ಬಿಟ್ಟಾಕಿ ಮ್ಯಾಲೆ ಮನಸ್ಯಾಕೊ ।
ಬಿಟ್ಟಾಕಿ ಮ್ಯಾಲೆ ಮನಸ್ಯಾಕೊ–ಚಂದ್ರಾಮಾ ।
ಕಟ್ಟಿ ಕಲ್ಲಾಗಿ ಇರುಹೋಗೊ ॥೪೩೫॥

* * *

ಬಾಳೆ ಕೊಯ್ದರೆ ತ್ವಾಟ ಹಾಳಾದರರಿದೇನೊ ।
ಆಳಲ್ದ ರಾಯ ಮಡದೀಗೆ ।
ಆಳಲ್ದ ರಾಯ ಮಡದೀಗೆ–ಬಿಟ್ಟರ ।
ಬಾಳೆ ಹಣ್ಣೇನೊ ಕೆಡಲಾಕ ॥೪೩೬॥

* * *

ಚಿಕ್ಕ ತಿಲಕಬಟ್ಟು ಇಕ್ಕದಿರು ಎಲೆ ಹೆಣ್ಣೆ ।
ಚಿಕ್ಕ ಪ್ರಾಯದಲಿ ನಿನಗಂಡ ।
ಚಿಕ್ಕ ಪ್ರಾಯದಲಿ ನಿನಗಂಡ–ಹೋದಮ್ಯಾಲ ।
ಚಿಕ್ಕ ಬಟ್ಟಿಟ್ಟು ಫಲವೇನು ॥೪೩೭॥

ಕಾಗೀಗೆ ಕಣ್ಣಿಟ್ಟ ಕರಿಯ ಹುಬ್ಬಿನ ಜಾಣ ।
ಮಾವೀನ ಹಣ್ಣು ಮನಿಯಾಗ ।
ಮಾವೀನ ಹಣ್ಣು ಮನಿಯಾಗ–ಇಟಗೊಂಡು ।
ನೀರಲಕ್ಯಾಕ ನೆದರಿಟ್ಟಿ ||೪೩೮||

* * *

ಮಲ್ಲೀಗಿ ಇದ್ದಾಗ ಮುಳ್ಯಾಕ ಮುಡಿಯುವೆ ।
ಕಲ್ಲ್ಯಾಣದಾಗ ಬಸವಯ್ಯ ।
ಕಲ್ಲ್ಯಾಣದಾಗ ಬಸವಯ್ಯ–ಇರುವಾಗ ।
ಕಲ್ಗ್ಯಾಕ ಕೈಯ ಮುಗಿಯುವೆ ||೪೩೯||

* * *

ಬೀದೀಯ ಮನೆಯವಳೆ ಬೀಸಣಿಗೆ ನೆರಿಗ್ಯೋಳೆ ।
ಜಾಲದ್ಹೂವಿನ ಜಡೆಯವಳೆ ।
ಜಾಲದ್ಹೂವಿನ ಜಡೆಯವಳೆ–ಅಕ್ಕವ್ವ ।
ರಾಯಗ ಕಣ್ಣಿಟ್ಟ ಫಲವೇನು ||೪೪೦||

* * *

ಗಾಣಿಗರ ಹುಡುಗಿಯ ಗಮ್ಮತ್ತು ನೋಡಯ್ಯ ।
ಗಾಳಿ ಪಂಜ್ರಽದ ಕಾಗೆವಳ ।
ಗಾಳಿ ಪಂಜ್ರಽದ ಕಾಗೆವಳ–ತೋಳಿನ್ಮ್ಯಾಲಿ ।
ರಾಯ ಕಣ್ಣಿಟ್ಟು ಫಲವೇನು ||೪೪೧||

* * *

ಕೆಂಪೆಂದು ಕಣ್ಣಿಟ್ಟು ಕೆಂಪೆಂದು ಮನಸಾದೆ ।
ಸಂಪೀಗೆ ಹೂವೆಂದು ಬಲಿಬಿದ್ದಿ ।
ಸಂಪೀಗೆ ಹೂವೆಂದು ಬಲಿಬಿದ್ದಿ–ತಮ್ಮಯ್ಯ ।
ಸಂಪನ್ನ ಗುಣವ ತಿಳಿಯಽದೆ ||೪೪೨||

* * *

ಕೆಂಪಿ ತಂದೀನೆಂತ ಹೆಚ್ಚಽಳ ಪಡಬೇಡ ।
ಕೆಂಜಗದ ಹೂವು ನಿಜಕೆಂಪು ।
ಕೆಂಜಗದ ಹೂವು ನಿಜಕೆಂಪು–ಆದಽರೆ ।
ಅಂಚಿನಲ್ಲೀದೆ ಕಿರಿಕಿಹಿ ||೪೪೩||

ಮದಿಸಿದ್ದ ಆನೇಯು ಮಲಗಿದ್ದ ಹಾವನ್ನು ।
ಮದಿರೆಯು ಕುಡಿದು ಬರುವವನ ।
ಮದಿರೆಯು ಕುಡಿದು ಬರುವವನ–ಕಂಡsರೆ ।
ಹರದಾರಿ ಬಿಟ್ಟು ಹರದೋsಡು ॥೪೪೪॥

* * *

ಬಸುರಿ ಕೊಲ್ಲವನ ಸಿಸುಮರವ ತರಿಯುವನ ।
ವಿಶ್ವಾಸಕೆರಡು ಬಗಿಯುವನ ।
ವಿಶ್ವಾಸಕೆರಡು ಬಗಿಯುವನ–ತಲೆಯನ್ನು ।
ಚಂಡನಾಡಲಿ ಅಡಿವ್ಯಾಗ ॥೪೪೫॥

* * *

ಕಾಳಿ ತಂದಿಹೆನೆಂತ ಕಡುದುಃಖ ಪಡಬ್ಯಾಡ ।
ಹಲಸೀನ ಹಣ್ಣು ಮೈಮುಳ್ಳು ।
ಹಲಸೀನ ಹಣ್ಣು ಮೈಮುಳ್ಳು–ಆದsರೆ ।
ಸವಿದು ನೋsಡದರ ಕಡು ರುಚಿಯು ॥೪೪೬॥

* * *

ಜೂಜಾಡಿ ಪಾಂಡವರು ರಾಜ್ಯsವ ಸೋsತರು ।
ಜೂಜಾಡಿ ನಳನು ಬಳಲೀದ ।
ಜೂಜಾಡಿ ನಳನು ಬಳಲೀದ–ಕಂದಯ್ಯ
ಜೂಜೀಗೆ ಮನವ ಬಿಡದೀರು ॥೪೪೭॥

* * *

ಕಪ್ಪೆಂದು ಜನರನ್ನು ಎತ್ತ್ಯಾಡದಿರು ಕಂಡ್ಯ ।
ಕಪ್ಪಾದ ಹಸುವು ಕರೆದರೆ ।
ಕಪ್ಪಾದ ಹಸುವು ಕರೆದರೆ–ಆ ಹಾಲು ।
ಒಪ್ಪೋದು ಹರನ ಪೂಜೆಗೆ ॥೪೪೮॥

* * *

ಗಂಡುಳ್ಳ ಗರತೀಯು ಸಂಗsವ್ಯಾತಕಣ್ಣಯ್ಯ ।
ಅವಳಂಗ ಬ್ಯಾರೆ ಗುಣಬ್ಯಾರೆ ।
ಅವಳಂಗ ಬ್ಯಾರೆ ಗುಣಬ್ಯಾರೆ–ಅಡಕೀsಯು ।
ಹೊಂಬಾಳೆ ಬ್ಯಾರೆ ಸುಳಿ ಬ್ಯಾರೆ ॥೪೪೯॥

ಕಾಯಿ ನೇರಿಲ ಹಣ್ಣು ನಾಲಿಗೆಗೆ ಕಡುರುಚಿ ।
ಕೊಂಬೆ ಜಾರಿದರ ದುಸ್ಮನ ।
ಕೊಂಬೆ ಜಾರಿದರ ದುಸ್ಮನ-ವ್ಯಾಗಳ್ಳೀರಿ ।
ರಂಭೆ ಗಾಡಿದವ್ನ ತಲೆ ಎರವು ||೪೫೦||

* * *

ಕಾರೀ ಕಾಯ್ಹಂಗ ಮೋರೆ ಬತ್ತಲು ಮೇಲೆ ।
ಕೋರಿಯ ನೋಡಿ ಅಳುತಾಳ ।
ಕೋರಿಯ ನೋಡಿ ಅಳುತಾನ-ಆ ಹುಡುಗ ।
ಮೋರೆ ಮೇಲೆಟ್ಟಿ ಎಳೆತನ್ನಿ ||೪೫೧||

* * *

ಹೆಣ್ಣೆಂದು ರಾವಣ ಮಣ್ಣು ಕೂಡಿದನಯ್ಯ ।
ಅನ್ನಿಗರ ಹೆಣ್ಣ ಬಯಸುದೆ ।
ಅನ್ನಿಗರ ಹೆಣ್ಣ ಬಯಸುದೆ-ಕಂದಯ್ಯ ।
ನಿನ್ನ ಹೆಣ್ಣೊಡನೆ ಸುಖಿಯಾಗು ||೪೫೨||

* * *

ಜಾಗರದ ನವಿಲ್ಹಂಗ ಬಾಗುತ್ತ ಬಳಕೂವ ।
ಬಾಲೇಯ ಕಂಡು ಭ್ರಮಿಸುದೆ ।
ಬಾಲೆಯ ಕಂಡು ಭ್ರಮಿಸುದೆ-ಕಂದಯ್ಯ ।
ಬಾಲರ ಪಡೆದು ಸುಖಿಯಾಗು ||೪೫೩||

* * *

ಅಡಿವ್ಯಾಗ ಅತ್ತುರ ಗಿಡವೆಲ್ಲ ಗೋಳೆಂದು ।
ಆಡಿವಿಲೀಶ್ವರನ ವರಬೇಡಿ ।
ಅಡಿವಿಲೀಶ್ವರನ ವರಬೇಡಿ-ಕೇಳಿದರೆ ।
ಪಡೆದಷ್ಟು ಮಗಳ ತಿರಿದುಣ್ಣು ||೪೫೪||

ಹೆಣ್ಣು ಹುಟ್ಟಿತು ಎಂದು ಅಣ್ಣ ಚಿಂತಿಸಬೇಡ ।
ಹೆಣ್ಣೆಂದು ಪರರ ಒಡವೇಯು ।
ಹೆಣ್ಣೆಂದು ಪರರ ಒಡವೇಯು-ತವರ್ಮನೆಯು ।
ಅಣ್ಣ ಬಾಳೆಂದು ಹರಿಸ್ಯಾಳು ||೪೫೫||

ಲೋಕಕಿಲ್ಲದ ಮಗಳ ಯಾಕ್ಹೆತ್ತಿ ತಾಯವ್ವ ।
ಲೋಕsದ ಬಾಳು ನಮಗಿಲ್ಲ ।
ಲೋಕsದ ಬಾಳು ನಮಗಿಲ್ಲ–ಹಡೆದವ್ವ ।
ಅಟ್ಟಿ ಬಿಡಿರವ್ವ ಅಡಿವೀಗೆ ॥೪೫೬॥

* * *

ಅತ್ತರೇ ಬಿಡವಲ್ಲ ಮುತ್ತೀನ ಕಣ್ಣೀರು ।
ಚಿಕ್ಕಂದಿನಲ್ಲಿ ಹಣಿಯೊಳಗ ।
ಚಿಕ್ಕಂದಿನಲ್ಲಿ ಹಣಿಯೊಳಗ-ಬರೆದಾ ಬರೆಹ ।
ದುಃಖಮಾಡಿದರೆ ಬಿಡದಲ್ಲ ॥೪೫೭॥

* * *

ಸತ್ಯದೊಳು ತಾಯವ್ವ ತಕ್ಕವನಲ್ಲ ನನ ನಲ್ಲ ।
ಮುಕ್ಕಾದ ಗಂಡ ಮುದುಕsನ ।
ಮುಕ್ಕಾದ ಗಂಡ ಮುದಕನ ಮಾರಿನೋಡಿ ।
ನಾನ್ಹ್ಯಾಂಗ ಕಾಲ ಕಳೆಯsಲಿ ॥೪೫೮॥

* * *

ಚಿಂತಾಕು ಇಡಲಿಲ್ಲ ಚಿಂತೆ ಬಿಟ್ಟಿರಲಿಲ್ಲ ।
ಎಂಥಲ್ಲಿ ಕೊಟ್ಟಿ ಹಡೆದವ್ವ ।
ಎಂಥಲ್ಲಿ ಕೊಟ್ಟಿ ಹಡೆದವ್ವ–ನಡುಮನೆಯ ।
ಜಂತಿ ಜರಿಧಾಂಗ ಜರಿದೇನು ॥೪೫೯॥

* * *

ನನ್ನ ಹೆತ್ತವ್ವsಗ ಒಮ್ಮೆಯೂ ಸುಖವಿಲ್ಲ ।
ಬಣ್ಣsವ ಉಡಿಸಿ ಹಿಂದಿರುಗಿ ।
ಬಣ್ಣsವ ಉಡಿಸಿ ಹಿಂದಿರುಗಿ--ಹೋದಾಗ ।
ಕಣ್ಣ ನೀರೆದ್ದು ಹೊಳೆಯಾಗಿ ॥೪೬೦॥

* * *

ಯಾರಿಗೆ ಯಾರಿಲ್ಲ ಈ ಮನಕ ಧೈರ್ಯಿಲ್ಲ ।
ಆರ್‍ಯಾಣದಾಗ ಪರದೇಶಿ ।
ಆರ್‍ಯಾಣದಾಗ ಪರದೇಶಿ--ಸತ್ತsರ ।
ಯಾರೀಗೆ ದುಃಖ ಹಡೆದವ್ವ ॥೪೬೧॥

ಹೆಣ್ಣು ಮಕ್ಕಳ ಕಳುಹಿ ಕಣ್ಣಾಗ ನೀರ್ತಂದು ।
ಸಣ್ಣ ಸೆಲ್ಲೆದಲೆ ಮುಸುಗ್ಹಾಕಿ ।
ಸಣ್ಣ ಸಲ್ಲೆದಲೆ ಮುಸುಗ್ಹಾಕಿ--ಹಡೆದಪ್ಪ ।
ಹೆಣ್ಣು ಸಾಕೆಂದ ಜಲುಮಾಕ ||೪೬೧||

* * *

ಅತ್ತೆ ಮಾವರಿಗಂಜಿ ಸುತ್ತೇಳು ನೆರೆಗಂಜಿ ।
ಮತ್ತೆ ಆಳೂವ ಧೊರೆಗಂಜಿ ।
ಮತ್ತೆ ಆಳೂವ ಧೊರೆಗಂಜಿ--ತಂಗೆವ್ವ ।
ಅತ್ತೆ ಮನ್ಯಾಗ ಬಾಳ್ಯಾಳ ||೪೬೨||

* * *

ಬಾಳುವೆ ಮಾಡಿದರ ಬಾತಂಗಿ ಅಂದಾರು ।
ಬಾಳೂವೆಗೆಟ್ಟು ಮತಿಗೆಟ್ಟು ।
ಬಾಳೂವೆಗೆಟ್ಟು ಮತಿಗೆಟ್ಟು-ತಿರುಗಿದರೆ ।
ಹೆತ್ತವರ ಕುಲಕೆ ಹಗೆಯಾದೆ ||೪೬೩||

ಸಿರಿ ಬಂದ ಕಾಲಕ್ಕೆ ತಲೆ ಬಾಗಿ ನಡಿಯವ್ವ
ಮನೆಗೆ ಬಂದವರ ಕೂಡ್ರ ಹೇಳು
ಮನೆಗೆ ಬಂದವರ ಕೂಡ್ರ ಹೇಳು--ಮಕ್ಕಳ ।
ಜೊತಿಗೆ ಬಂದವರ್ಗೆ ಉಣಬಡಿಸು ||೪೬೪||

* * *

ಹುಟ್ಟುವಾಗ ತರಲಿಲ್ಲ ಹೋಗುವಾಗ ಒಯ್ಲಾರೆ ।
ಸುಟ್ಟು ಸುಟ್ಟು ಸುಣ್ಣದ್ಹರಳಾಯ್ತು ।
ಸುಟ್ಟು ಸುಟ್ಟು ಸುಣ್ಣದ್ಹರಳಾಯ್ತು-ಈ ದೇಹ ।
ಕಷ್ಟವನು ಬಿಡಿಸೊ ಸೃಷ್ಟಿಯೊಡೆಯ ||೪೬೫||

* * *

ಗಂಜೀಯ ಕುಡಿದರು ಗಂಡನ ಮನಿಲೇಸ ।
ಅಂದಣದ ಮ್ಯಾಲೆ ಚೌರವ ।
ಅಂದಣದ ಮ್ಯಾಲೆ ಚೌರವ-ಬೀಸಿದರು ।
ಹಂಗೀನ ತವರ ಮನಿ ಸಾಕ ||೪೬೬||

ದೇವರ ಮನಿಯಾಗ ದೇವಿಂದ್ರ ಮಲಗ್ಯಾನ
ನಾ ಏನೆಂದ್ಹೋಗಿ ಎಬಸಲಿ ।
ನಾ ಏನೆಂದ್ಹೋಗಿ ಎಬಸಲಿ-ಮಗಳರಸ ।
ಮಹಾದೇವರೇಳೊ ||೪೬೮||

ಕೂಸ ಕಾಡೀತ ನನ್ನ ದೇಸಪತಿಯ ಚಿನ್ನ ।
ಬ್ಯಾಸೊತ್ತು ತೌರ ಬೈದೇನ ।
ಬ್ಯಾಸೊತ್ತು ತೌರ ಬೈದೇನ-ನನ ಹಡದವ್ವ ।
ಬೀಸಿದ ಹಿಟ್ಟು ಕಳುವ್ಯಾಳ ||೪೬೯||

* * *

ವಾಲೀಯ ಇಟ್ಟಾಕಿ ವಾರೀಗಿ ನನ ಗೆಳೆತವ್ವ ।
ವಾಲೀಗಿ ನಿನ್ನ ಒನಪೀಗಿ ।
ವಾಲೀಗಿ ನಿನ್ನ ಒನಪೀಗಿ-ನಿಮ ಶೆಟ್ರು
ಓದೂದು ಬಿಟ್ಟು ಬರತಾರ ||೪೭೦||

* * *

ತೋಳುದ್ದ ತಲೆದಿಂಬು ಮಾರುದ್ದ ಹಾಸೀಗಿ ।
ಮಾಣೀಕದಂಥ ಮಗ ಮುಂದ ।
ಮಾಣೀಕದಂಥ ಮಗ ಮುಂದ-ಮಲಗಿರಲು ।
ಮಾರಾಯರ ಗೊಡವಿ ನನಗೇನು ||೪೭೧||

* * *

ಯಾಲಕ್ಕೀ ಕಾಯ್ಪಡದ ಯಾವ ಅಡಗಿ ಮಾಡಲಿ ।
ಶೆಟ್ಟರ್ಹೋಗ್ಯಾರ ಊರೀಗಿ ।
ಶೆಟ್ಟರ್ಹೋಗ್ಯಾರ ಊರೀಗಿ-ಯಾವಡಿಗಿ ।
ಮಾಡಿ ಫಲವೇನ ||೪೭೨||

* * *

ಹಾವೀನ ಹೆಡಿ ಚಂದ ಮಾವೀನ ಮಿಡಿ ಚಂದ ।
ಹಾರಾಡಿ ಬರುವ ಗಿಳಿ ಚಂದ ।
ಹಾರಾಡಿ ಬರುವ ಗಿಳಿ ಚಂದ-ನನಕಂದ ।
ನೀ ಚಂದ ನನ್ನ ಮನಿಗೆಲ್ಲ ||೪೭೩||

ಸಣ್ಣ ಶಾವಿಗಿ ಒಲ್ಲ, ಚಿನ್ನಿ ಸಕರಿ ಒಲ್ಲ, ।
ಹೆಣ್ಣೆಂಬ ಸೊಲ್ಲ ಬಿಡವಲ್ಲ ।
ಹೆಣ್ಣೆಂಬ ಸೊಲ್ಲ ಬಿಡವಲ್ಲ-ನನತಮ್ಮ ।
ಹೆಣ್ಣ ಕೊಡತೇನಿ ಉಣ ಏಳ । ||೪೭೪||

* * *

ಅತ್ತೀಮನಿ ಸೊಸಿ ಹೊತ್ತೇರಿ ಬಂದಾಳ ।
ನೆಳ್ಳ ನೋಡಿ ಎತ್ತ ಇಳದಾಳ ।
ನೆಳ್ಳ ನೋಡಿ ಎತ್ತ ಇಳದಾಳ-ನನ ಮಗಳ ।
ಎತ್ತಿರುವ ಮಗನ ಹೆಸರೇನ ||೪೭೫||

* * *

ಮಗನ್ಹೆಸರ ಮಲ್ಲೀಗಿ ನನ್ಹೆಸರ ಖ್ಯಾದಿಗಿ ।
ಸಾವೀರ ರೂಪಾಯ್ದ ಸರದಾಳಿ ।
ಸಾವೀರ ರೂಪಾಯ್ದ ಸರದಾಳಿ-ನಡುವಿರುವ ।
ಮಹಾರಾಯರ್ಹೆಸರ ಗುಳದಾಳಿ ||೪೭೬||

* * *

ಪಿಲ್ಲೆ ಇಟ್ಟ ನಾರಿ ಮೆಲ್ಲಕ ಬರತಾಳ ।
ನಿಲ್ಲೀಸು ತಮ್ಮ ನಿನ ಕುದರಿ ।
ನಿಲ್ಲೀಸು ತಮ್ಮ ನಿನ ಕುದರಿ-ನನ ಮಗಳು ।
ಎಲ್ಲರಿಗೆ ಹೇಳಿ ಬರತಾಳ ||೪೭೭||

* * *

ಬಾಳಿಸ್ತರ ಮನಿಯಾಗ ಬಾಳೀಯ ಗಿಡಹುಟ್ಟಿ ।
ದಾರ್‍ಯಾಗ ನನಗ ತಗಲೀತ ।
ದಾರ್‍ಯಾಗ ನನಗ ತಗಲೀತ-ನಮ್ಮಣ್ಣ ।
ಕರಿಜಾಲಿ ಮಾಡಿ ಕಡಿದೊಗಿಯ ||೪೭೮||

* * *

ಕ್ಯಾವಿಚೊಣ್ಣದ ಮ್ಯಾಲ ಕಸೂತಿ ನಡಕಟ್ಟ ।
ಮಸೂತಿ ಮುಂದ ಹುಡಿದ್ಯಾಡೂವ ।
ಮಸೂತಿ ಮುಂದ ಹುಡಿದ್ಯಾಡೂವ-ಹುಡಗನಕಂಡು ।
ಹೊರಣಕ ಬೆಲ್ಲ ಮರತಾಳ ||೪೭೯||

ಬೇವಿನ ಮರಕ ಬೆಲ್ಲದ ಮಡಿಕಟ್ಟಿ ।
ಜೇನು ತುಪ್ಪದ ಹೊಯಿನೀರ ।
ಜೇನು ತುಪ್ಪದ ಹೊಯಿನೀರ–ಹಾಕಿದರ ।
ಬೇವು ತನ್ನಿಸವ ಬಿಡಲಿಲ್ಲ ||೪೮೦||

* * *

ಗಂದs ರಾತ್ರಿಯದಿನ ಚಂದೇನ ದೀವೀಗಿ ।
ಸಂದ ಸಂದೆಲ್ಲ ಸರದೀಪ ।
ಸಂದ ಸಂದೆಲ್ಲ ಸರದೀಪ–ಗಾಂಧಾರಿ ।
ಗಂದ ಏರೂತ ಬೆಳಗಾಗಿ ||೪೮೧||

* * *

ಜಾಡಿ ಕಂಬಳಿ ಹೊತ್ತು ಜಾಗ ಕೇಳುತ ಹೊಂಟ ।
ಜಾಣ ಕಲ್ಲೂರ ಒಡಿಯsರ ।
ಜಾಣ ಕಲ್ಲೂರ ಒಡಿಯsರ–ಹೇಳೀಕಿ ।
ಮ್ಯಾಣದ ಗೂಟ ಬಡಧಂಗ ||೪೮೨||

* * *

ಸಂಗಮದ ಹೊಳಿಯಾಗ ಶಿವಪೂಜಿ ಆಗಾಗ ।
ಬಂಗಾರದ ಡೊಳ್ಳ ನುಡಿದಾವ ।
ಬಂಗಾರದ ಡೊಳ್ಳ ನುಡದಾವ–ನನ್ನೂರ ।
ಬಲಭೀಮ ಗಂಗಸ್ಥಳಮಾಡಿ ಬರತಾನ ||೪೮೩||

* * *

ಜಾತ್ರೀಗೆ ಹೋಗುವಕ ರಾತ್ರೀಲೆ ಎದ್ದಾಳ ।
ಎರವೀನ ಶೀರಿ ಬರಿಗೊಳ್ಳ ।
ಎರವೀನ ಶೀರಿ ಬರಿಗೊಳ್ಳ–ಸಂಗಮದ ।
ಎರಿಯಾಗ ಗೋಣ ತಿರಿವ್ಯಾಳ ||೪೮೪||

* * *

ಸೀತಾನ್ನ ವೈದಾನ ವನದಾಗ ಇಟ್ಟಾನ ।
ದೈತ್ಯತನ ದಂಡ ನೆರಸ್ಯಾನ ।
ದೈತ್ಯತನ ದಂಡ ನೆರಸ್ಯಾನ–ರಾವsಣ ।
ಸೀತಾನ ಪಾರೇಕ ಇಡಿಸ್ಯಾನ ||೪೮೫||

ರಾವಣ ರಾಕ್ಷಸ ಅವಂದೆಂಥ ತಪಸ್ಸು ।
ಮೋಸ ಮಾಡ್ಯಾನ ಸೀತಾಗ ।
ಮೋಸ ಮಾಡ್ಯಾನ ಸೀತಾಗ-ರಾವಣ
ಭಿಕ್ಷೆ ಬೇಡಿ ಎಳದೊಯ್ದಾನ ॥೪೮೬॥

* * *

ಕೋಡಗ ಬಂದೀತು ವನದಾಗ ಸೇರೀತು ।
ವನ ಮುರಿದು ಹಾಳ ಮಾಡೀತು ।
ವನ ಮುರಿದು ಹಾಳ ಮಾಡೀತು-ಈ ಸುದ್ದಿ ।
ಇಂದ್ರಜಿತನೀಗೆ ತಿಳಿಸ್ಯಾರ ॥೪೮೭॥

* * *

ತಂದೀಯ ಮಾತ್ ಕೇಳಿ ಬಂದನಿಂದ್ರಜೀತ ।
ಬಂದು ಮೋಡದ ತೆರಿ ಹೊಕ್ಕ ।
ಬಂದು ಮೋಡದ ತೆರಿ ಹೊಕ್ಕ-ಲಡಾಯ್ಮಾಡಿ ।
ಕೋಡಗದ ದಂಡ ಸಂಹಾರ ॥೪೮೮॥

* * *

ದಂಡ ಬಿದ್ದುದ ನೋಡಿ ದಂಗಾದ ಶ್ರೀರಾಮ ।
ಹ್ಯಾಂಗ ಮಾಡಲಿ ಮಾರುತಿ ।
ಹ್ಯಾಂಗ ಮಾಡಲಿ ಮಾರುತಿ-ನೆನೆದರ ।
ಸಂಜೀವ ಪರ್ವತ ತಂದಾನ ॥೪೮೯॥

* * *

ಸಂಜೀವನ ತಂದಾನ ಪ್ರಾಣವ ಪಡದಾನ ।
ಜಾಣನ ಬಳಿಗೆ ನಡದಾನ ।
ಜಾಣನ ಬಳಿಗೆ ನಡದಾನ-ಶ್ರೀರಾಮ ।
ಪ್ರಾಣ ವಾರ್ತೆಯ ತಿಳಿದಾನ ॥೪೯೦॥

* * *

ಊಟಿಲ್ಲ ಕೂಟಿಲ್ಲ, ನಿದ್ದಿಲ್ಲ ನೀರಿಲ್ಲ ।
ಅಂತವನ ಕೈಯಾಗ ಮರಣಾದ ॥೪೯೧॥

ಗಂಡಽ ಗತ್ತಿರಿ ಹರನೆ ರುಂಡಮಾಲಿಯ ಶಿವನೆ ।
ಕಂಡ ದೇವರಿಗೆ ಅಧಿಕಾರ ।
ಕಂಡ ದೇವರಿಗೆ ಅಧಿಕಾರ-ಹಾನೆಂದು ।
ಗಂಗಮ್ಮ ಹೇಳಿ ನಗುವಽಳ ॥೪೯೨॥

* * *

ಬಿಚ್ಚ ಗತ್ತಿರಿ ಹರಗೆ ಮುತ್ತಿನ ಮಾಲೀಯ ಶಿವನೆ ।
ದಿಕ್ಕಽ ದೇವರಿಗೆ ಅಧಿಕಾರ ।
ದಿಕ್ಕಽ ದೇವರಿಗೆ ಅಧಿಕಾರ-ಹಾನೆಂದು ।
ಗೌರಮ್ಮ ಹೇಳಿ ನಗುವಽಳ ॥೪೯೩॥

* * *

ಹತ್ತಽ ಸಾವಿರ ಗುಡ್ಡ ಹತ್ತೀ ಹೋದವರ್‍ಯಾರ ।
ನಾಗಳದ ಗುಂಡ ಜಲಹರದಿ ।
ನಾಗಳದ ಗುಂಡ ಜಲಹರದಿ-ಬಸವಣ್ಣ ।
ಹೆಪ್ಪ ಗೊಯ್ದಾನ ಮರ್ತ್ಯೇಕ ॥೪೯೪॥

* * *

ಕೊಡೀದ ಕುಡಿಹುಬ್ಬ ತೀಡೀದ ಬೈತಽಲಿ ।
ಕಾಡಿಗೆಗಣ್ಣ ರಸಗೆಂಪು ।
ಕಾಡಿಗೆಗಣ್ಣ ರಸಗೆಂಪು-ನನಗೆಳತಿ ।
ಹೊಳಿಯ ದಾರ್‍ಯಾಗ ಕೂಡ್ಯಾಳ ॥೪೯೫॥



## ಹೆಣ್ಣು ತವರುಮನೆ ಬಿಡುವಾಗ

ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ ।
ಜಾಲೀಯ ಮರವು ನೆರಳಲ್ಲ ।
ಜಾಲೀಯ ಮರವು ನೆರಳಲ್ಲ-ನನ ಮಗಳೆ ।
ತಾಯೀಯ ಮನೆಯು ಸ್ಥಿರವಲ್ಲ ॥೪೯೬॥

ಅತ್ತಿ ಮಾವ ಗಂಜಿ ಸುತ್ತೇಳು ನೆರೆಗಂಜಿ ।
ಮತ್ತೆ ಆಳುವ ಧೊರೆಗಂಜಿ ।
ಮತ್ತೆ ಆಳುವ ಧೊರೆಗಂಜಿ-ನನ ಮಗಳೆ ।
ಅತ್ತೀ ಮನಿಯೊಳಗ ಬಾಳವ್ವ ॥೪೯೭॥

* * *

ನೆರೆ ಮನೆಯ ಸಿರಿದೇವಿ ನೀನಾಗಿ ನನಮಗಳೇ ।
ಮನಿಯಾಗ ಭೇದ ಬಗಿಬ್ಯಾಡ ।
ಮನಿಯಾಗ ಭೇದ ಬಗಿಬ್ಯಾಡ-ಕಂದವ್ವ ।
ತುಂಬೀದ ಮನಿಯನ್ನು ಒಡಿಬ್ಯಾಡ ॥೪೯೮॥

* * *

ಬಾಳುವೆ ಮಾಡಿದರ ಬಾ ತಂಗಿ ಅಂದಾರು ।
ಬಾಳುವೆಗೆಟ್ಟು ಮತಿಗೆಟ್ಟು ।
ಬಾಳುವೆಗೆಟ್ಟು ಮತಿಗೆಟ್ಟು-ಬಾಳಿದರ ।
ಹೆತ್ತವರ ಕುಲಕ ಹಗೆಯಾದೆ ॥೪೯೯॥

* * *

ಬೇಲೀ ಮ್ಯಾಗಿನ ಹೂವು ಬೆಳ್ಳಗಿದ್ದರ ಏನು ।
ಮಲ್ಲೀಗ್ಹೂವಿನಂಥ ಮನೆಗಂಡನ್ನ ।
ಮಲ್ಲೀಗ್ಹೂವಿನಂಥ ಮನೆಗಂಡನ್ನ-ಬಿಟ್ಟು ।
ಅನ್ಯ ಪುರುಷರ್ಗೆ ಒಲೀಬ್ಯಾಡ ॥೫೦೦॥

* * *

ಅತ್ತೆ ಮಾವರ ಪಾದ ತಂದೆ ತಾಯಿಯ ಪಾದ ।
ಮತ್ತೆ ಗಂಡನ ಶ್ರೀಪಾದ ।
ಮತ್ತೆ ಗಂಡನ ಶ್ರೀಪಾದ-ನೆನೆದರ ।
ಬೆನ್ನ ಹಿಂದೈತಿ ಕೈಲಾಸ ॥೫೦೧॥

* * *

ಕನ್ನಡಿ ಕೈತಪ್ಪಿ ಹನ್ನೆರಡು ಚೂರಾಗಿ ।
ಹೆಣ್ಣಿನ ಮನವು ಎರಡಾಗಿ ।
ಹೆಣ್ಣಿನ ಮನವು ಎರಡಾಗಿ-ದಾಳಿಂಬ್ರ ।
ಹಣ್ಣಾದರೇನು ಫಲವಿಲ್ಲ । ॥೫೦೨॥

ಮಾತಗಂಟಿ ಮಗಳಲ್ಲ ಶಾಟ್ಗತ್ತಿ ಸೊಸೆಯಲ್ಲ ।
ತುಪ್ಪರಿಯ ಚಕ್ಕಿ ಒಲೆಗಲ್ಲ ।
ತುಪ್ಪರಿಯ ಚಕ್ಕಿ ಒಲೆಗಲ್ಲ-ತವರೀಗೆ ।
ಮಾತು ತಂದವಳು ಮಗಳಲ್ಲ ॥೫೦೩॥

* * *

ಎಳಗರು ಎತ್ತಲ್ಲ ದಳವಾಯಿ ದೊರೆಯಲ್ಲ ।
ಮನೆಗೆ ಬಂದಳಿಯ ಮಗನಲ್ಲ ।
ಮನೆಗೆ ಬಂದಳಿಯ ಮಗನಲ್ಲ-ತವರೀಗೆ ।
ಮಾತು ತಂದವಳು ಮಗಳಲ್ಲ ॥೫೦೪॥

* * *

ಅತ್ತಽರೆ ಕರೆದಽರೆ ಹತ್ತಿರುವೇನೆ ।
ಹುಚ್ಚೀನೆ ಅವ್ವ ಮರುಳೀನೆ ।
ಹುಚ್ಚೀನೆ ಅವ್ವ ಮರುಳೀನೆ-ಗ್ಯಾಡೀಯ ।
ಚಿತ್ತಾರ ನೋಡಿ ಮರೆಯವ್ವ ॥೫೦೫॥

* * *

ಸಂತೀಯ ಮನಿಯವಳು ಶಮರಂತಿ ತಾಯವ್ವ ।
ಸಂತಿಟ್ಟು ಮಗಳ ಕಳುವ್ಯಾಳ ।
ಸಂತಿಟ್ಟು ಮಗಳ ಕಳುವ್ಯಾಳ-ನಿಂತಾಳ ।
ಸಾಲು ಸಂಪೀಗಿ ನೆರಳಾಗ ॥೫೦೬॥

* * *

ಬಾಗಿಲು ಮಲ್ಲೀಗೆ ಬಾಡಿ ಹೋದ್ವೆಲ್ಲೆ ।
ನೋಡಿ ಕೊಯ್ವಂಥ ಮಗಳಿಲ್ಲ ।
ನೋಡಿ ಕೊಯ್ವಂಥ ಮಗಳಿಲ್ಲ-ಆಬಾಲಿ ।
ಹತ್ತೊಂದಿಕೀ ಬಿಟ್ಟು ಅಗಲ್ಯಾಳ ॥೫೦೭॥

* * *

ಹೂವಽ ಮಾರುವ ಜಾಣ ಹೂವ್ಯಾಕ ಇಲ್ಲಿ ತಂದಿ ।
ಹೂ ಮುಡಿಯೋ ಮಗಳು ಮನ್ಯಾಗಿಲ್ಲ ।
ಹೂ ಮುಡಿಯೋ ಮಗಳು ಮನ್ಯಾಗಿಲ್ಲ-ಅವಳು ।
ಗಂಡಽನ ಮನಿಗೆ ನಡೆದಾಳ ॥೫೦೮॥

ತಾಯಿ ತನ್ ಮಗಳೀಗಿ ಯಾವಾಗ ನೆನಿವಳು ।
ಉಂಬಾಗ ಮಡಿಯ ಉಡುವಾಗ ।
ಉಂಬಾಗ ಮಡಿಯ ಉಡುವಾಗ-ಹಿತ್ತಿಲದನ್ನ ।
ಹೂವ ಕಂಡಲ್ಲಿ ನೆನೆದಾಳ ||೫೦೯||

* * *

ನನ್ನ ಮಗಳಲ್ಲವ್ವ ನಿಮ್ಮ ಮಗಳೀಕೆಂದು ।
ಚಂದಾಗಿ ಮಗಳ ಸಲುಹವ್ವ ।
ಚಂದಾಗಿ ಮಗಳ ಸಲುಹವ್ವ-ಎನ್ನೂತ ।
ಅತ್ತೆನ್ನ ಕೈಯಾಗ ಕೊಟ್ಟಾಳ ||೫೧೦||

* * *

ಕತ್ತೀನ ಮುತ್ತು ಕಿತ್ತು ದಾನಾವ ಮಾಡಿ ।
ಹೆತ್ತೈಲ್ಲ ತಾಯಿ ನೆರೆಹೊರೆಗೆ ।
ಹೆತ್ತೈಲ್ಲ ತಾಯಿ ನೆರೆಹೊರೆಗೆ-ಹೆಣ್ಮಗಳ ।
ಕೊಟ್ಟ ಮ್ಯಾಲ್ಯಾಕ ಸುಖ ದುಃಖ || ||೫೧೧||

ದಾ ಮನೆಯಿಂದ ಮೆಟ್ಟಿಲನಿಳಿವಾಗ ।
ಹೊಟ್ಟೀಗೆ ಸಿಡಿಲು ಬಡಿಧಾಂಗ ।
ಹೊಟ್ಟೀಗೆ ಸಿಡಿಲು ಬಡಿಧಾಂಗ-ಹೆತ್ತವ್ವ ।
ಕಣ್ಣ ನೀರೆದು ಹೊಳೆಯಾದೊ ||೫೧೨||

* * *

ಗಂಡು ಮಕ್ಕಳು ಒಂಭತ್ತು ಕೊಡುಸ್ವಾಮಿ ।
ಬಂಡೀಯ ಮುಂದ ಕಳಸಕ್ಕ ।
ಬಂಡೀಯ ಮುಂದ ಕಳಸಕ್ಕ-ಒಪ್ಪುವಂಥ ।
ಒಬ್ ಹೆಣ್ಣು ಮಗಳ ಕೊಡು ದೇವ ||೫೧೩||

* * *

ಅಕ್ಕಂದಿರೆಲ್ಲ ಮುತ್ತಿನ ದಡಪಿಯ ತನಕ ।
ಮಿಕ್ಕಿದವರೆಲ್ಲ ಹೊಳಿತನಕ ।
ಮಿಕ್ಕಿದವರೆಲ್ಲ ಹೊಳಿತನಕ-ಬಾಲಿಕೆಯ ।
ಅಣ್ಣಂದಿರೆಲ್ಲ ಮನೆತನಕ ||೫೧೪||

ಬಾಳೀಯ ಕಾಯ್ಹಾಂಗ ಬಾಗಿ ಬಂದಾಳ ಬಾಲಿ ।
ಭಾಗ ಕೊಡು ರಾಯ ಎಡದಲ್ಲಿ ।
ಭಾಗ ಕೊಡು ರಾಯ ಎಡದಲ್ಲಿ-ಸಾವಿರದ ।
ಮಾಣಿಕ್ಹೇರವರ ಮಗಳೀಗೆ ॥೫೧೫॥

* * *

ನಿಂಬಿ ಕಾಯ್ಹಾಂಗ ತುಂಬಿ ಬಂದಾಳ ಬಾಲಿ ।
ಇಂಬು ಕೊಡುರಾಯ ಎಡದಲ್ಲಿ ।
ಇಂಬು ಕೊಡುರಾಯ ಎಡದಲ್ಲಿ-ಸಾವಿರದ ।
ವಜ್ರ ಹೇರವರ ಮಗಳೀಗೆ ॥೫೧೬॥

* * *

ರಾಜ ರಾಜರು ಕೂಡಿ ರಾಜ್ಯೆಲ್ಲ ಹುಡುಕಿದರ ।
ಮತ್ತೆಲ್ಲಿ ತಂದ್ಯೋ ಚಲುವೀಯ ।
ಮತ್ತೆಲ್ಲಿ ತಂದ್ಯೋ ಚಲುವೀಯ-ಗದುಗೀನ ।
ಆಗರದಾಗಿತ್ತೊಂದು ಅರಗಿಣಿ ॥೫೧೭॥

* * *

ಒಂಭತ್ತು ತಿಂಗಳು ನಿನ್ನ ತುಂಬಿಕೊಂಡು ತಿರಿಗೇನ ।
ಹಂಬಲಿಸಿ ನಿನ್ನ ಹಡದೇನಿ ।
ಹಂಬಲಿಸಿ ನಿನ್ನ ಹಡದೇನಿ-ಚಿತ್ತಾರದ ।
ಗೊಂಬಿ ನಿನಗೊಪ್ಪೀಸಿ ಕೊಡಲ್ಹ್ಯಾಂಗ ॥೫೧೮॥

* * *

ಹತ್ತು ತಿಂಗಳು ನಿನ್ನ ಹೊತ್ಕೊಂಡು ತಿರುಗೇನಿ ।
ಮುತ್ತು ಸುರುವಿದರ ಬರಿ ಉಡಿಯ ।
ಮುತ್ತು ಸುರುವಿದರ ಬರಿ ಉಡಿಯ-ನನಮಗಳ ।
ಅತ್ತೇರಿಗೊಪ್ಪೀಸಿ ಕೊಡಲ್ಹ್ಯಾಂಗ ॥೫೧೯॥

* * *

ಹರಿಯಾಗೆದ್ ನನ್ಮಗಳು ಹಾಲೂ ಬಾನುಣ್ಣುವಳು ।
ತೂಗ ಮಂಚದಾಗ ಮಲಗವಳು ।
ತೂಗ ಮಂಚದಾಗ ಮಲಗವಳು-ನನಮಗಳು
ನಗು ನಗುತ ಮನೆ ಬೆಳಗುವಳು ॥೫೨೦॥

ಮುಂಜಾನೆದ್ ನನ್ನ್ಮಗಳು ತುಪ್ಪಾ ಬಾನುಣ್ಣುವಳು ।
ಪಟ್ಟೀ ಮಂಚದಲಿ ಮಲಗವಳು ।
ಪಟ್ಟೀ ಮಂಚದಲಿ ಮಲಗವಳು–ನನಮಗಳು ।
ಕಟ್ಟ್ಯಾತ ಕತೆಯ ಹೇಳುವಳು ॥೫೨೧॥

ತೊಟ್ಟೀಲ ತೂಗಂದ್ರೆ ಸಿಟ್ಟೀಲೆ ಕೂಡ್ರವಳು ।
ಬಟ್ಲ ಬೆಳಗಾಕ ಅರಿಯುಽಳ ।
ಬಟ್ಲ ಬೆಳಗಾಕ ಅರಿಯುಽಳ–ಮಗಳನ್ನ ।
ಕೊಟ್ಟೀನಿ ಮಾವನ ಕೈಯೊಳಗ ॥೫೨೨॥

* * *

ಮೊಸರೂ ಅನ್ನ ಕಲಿಸಿ ತುಸವೇ ಉಣ್ಣಂತ್ಹೇಳಿ ।
ರಾಸೀಯ ಉಣಿಸಿ ಸಲುಹೀದೆ ।
ರಾಸೀಯ ಉಣಿಸಿ ಸಲುಹೀದೆ–ನನಮಗಳ ।
ಕೂಸ ನನ ಮನಿಗೆ ಎರವಾದೆ ॥೫೨೩॥

* * *

ಕುಂಬಳಕಾಯಿ ಒಯ್ದು ಕುಡುಗೋಲ್ಗೆ ಕೊಟ್ಟಂಗ ।
ಇಂದು ನಮ್ಮಗಳ ಕೊಡತೇವಿ ।
ಇಂದು ನಮ್ಮಗಳ ಕೊಡತೇವಿ--ಪಾರ್ವತಿ ।
ಕಂದಽನ ಸರಿಮಾಡಿ ಸಲಹವ್ವಾ ॥೫೨೪॥

* * *

ನಿಂಬಿಯನೇ ಹಣ್ಣ ನೆಂಬಿ ಗಿಣಿ ಒಯ್ದಂಗ ।
ಇಂದು ನಮ್ಮಗಳ ಕೊಡತೇವಿ ।
ಇಂದು ನಮ್ಮಗಳ ಕೊಡತೇವಿ--ಪಾರ್ವತಿ ।
ಕಂದಽನ ಸರಿಮಾಡಿ ಸಲುಹವ್ವಾ ॥೫೨೫॥

* * *

ಎಕ್ಕೀಯ ಗಿಡದಾಗ ಹಕ್ಕಿ ಬೋರಾಡಿಧಾಂಗ ।
ಅಕ್ಕ ನೀಲವ್ವನ ಬಳಗಽವು ।
ಅಕ್ಕ ನೀಲವ್ವನ ಬಳಗಽವು--ಕಣ್ಣೀರು ।
ಒಕ್ಕಂದದ್ಹೊಳಿಯಾಗಿ ಹರಿದಾವು ॥೫೨೬॥

ಎಣ್ಣೀಯ ಕೊಡಕ ಸಣ್ಣರಿವಿ ಕವಿಧಾಂಗ ।
ಕನ್ನೆ ಕಂದವ್ವನ ಬಳಗಽದ ।
ಕನ್ನೆ ಕಂದವ್ವನ ಬಳಗಽದ--ಕಣ್ಣೀರು ।
ಸಣ್ಣ ಮುತ್ತಾಗಿ ಸುರಿದಾವು ॥೫೨೭॥

ತುಪ್ಪದ ಕೊಡಕ ಕಟ್ಟಿರುವಿ ಕವಿಧಾಂಗ ।
ಮಿತ್ರಿ ಕಂದವ್ವನ ಬಳಗಽದ ।
ಮಿತ್ರಿ ಕಂದವ್ವನ ಬಳಗ್ಗಽದ--ಕಣ್ಣೀರು ।
ಉತ್ರಿ ಮಳಿಯಾಗಿ ಸುರಿದಾವು ॥೫೨೮॥

* * *

ಕಣಿಗಽಲ ಗಿಡದಾಗ ಗಿಣಿ ಹಿಂಡು ಕುಂತ್ಹಾಂಗ ।
ಸಣ್ಣ ನೀಲವ್ವನ ಬಳಗಽದ ।
ಸಣ್ಣ ನೀಲವ್ವನ ಬಳಗಽದ ಕಣ್ಣೀರು ।
ಹೊನ್ನೀನ ಮಳೆಯಾಗಿ ಹರಿದಾವು ॥೫೨೯॥

* * *

ಕಪ್ಪುರ ಗುಡ್ಡಕೆ ಬೆಂಕಿ ತುಪ್ಪದಲೆ ಕೊಟ್ಹಾಂಗ ।
ಅಪ್ಪನ ಹೊಟ್ಟಿ ತಳಮಳಿಸಿ ।
ಅಪ್ಪನ ಹೊಟ್ಟಿ ತಳಮಳಿಸಿ-ಮಗಳೆ ನಿನ್ನ ।
ಒಪ್ಪೀಸಿ ನಾವು ಕೊಡತೇವ ॥೫೩೦॥

* * *

ಸುಡುವ ಬೆಂಕಿಗೆ ಎಣ್ಣಿ ಕೊಡವ ಸುರುವಿಧಾಂಗ ।
ಹಡೆದವ್ವನ್ಹೊಟ್ಟಿ ತಳಮಳಿಸಿ ।
ಹಡೆದವ್ವನ್ಹೊಟ್ಟಿ ತಳಮಳಿಸಿ-ಮಗಳೆ ನಿನ್ನ ।
ಕೊಡ್ತೇವಿ ಒಪ್ಪೀಸಿ ಇವರೀಗೆ ॥೫೩೧॥

* * *

ಸುಣ್ಣಽದ ಚಟ್ಟ್ಯಾಗ ಥಣ್ಣೀರ ಹುಯ್ದಂಗ ।
ಅಣ್ಣನ ಹೊಟ್ಟಿ ಹುಯ್ದಾಡಿ ।
ಅಣ್ಣನ ಹೊಟ್ಟಿ ಹುಯ್ದಾಡಿ-ನನತಂಗಿ ।
ನನ್ನ ಮನಿಗಿಂದು ಎರವಾದೆ ॥೫೩೨॥

ಒಮ್ಮೆನ ಮದ್ದಿಗೆ ಬೆಂಕಿ ಒಮ್ಮೆಲೆ ಕೊಟ್ಟಾಂಗ।
ತಮ್ಮನ ಹೊಟ್ಟೆ ತಳಮಳಿಸಿ।
ತಮ್ಮನ ಹೊಟ್ಟೆ ತಳಮಳಿಸಿ-ಅಕ್ಕ ನನಗೆ।
ರವ್ವೇಸಿ ಹಣ್ಣು ಕೊಡತಿದ್ದಾ ||೫೩೩||

* * *

ಅತ್ತೀಯು ಕರಿರೆವ್ವ ಅತಿಗೇಯು ಕರಿರೆವ್ವ।
ನಾದುನೀನ ಕರಿರೆವ್ವ।
ನಾದುನೀನ ಕರಿರೆವ್ವ--ಹೊರಿಯಾಕ।
ಪ್ರೀತೀಯು ಮಗಳ ಕರಿರೆವ್ವ ||೫೩೪||

* * *

ಹೆಣ್ಣು ನಿಮಗಾಗಿ ಬಣ್ಣವು ನಮಗಾಗಿ।
ಎಣ್ಣೆ ಹೋಳಿಗಿ ತುಪ್ಪ ಸಭೆಗಾಗಿ।
ಎಣ್ಣೆ ಹೋಳಿಗಿ ತುಪ್ಪ ಸಭೆಗಾಗಿ--ಸಾಕ್ಷಹೇಳಿ
ಇಂದು ನಮ್ಮಗಳ ಕೊಡತೇವಿ ||೫೩೫||

ಹಂದರ್ಹಂದರ ಸಾಕ್ಷಿ ಹಂದರ ತಳವಳ ಸಾಕ್ಷಿ।
ಹಂದರದಾಗಿರುವ ದೈವ ಸಾಕ್ಷಿ।
ಹಂದರದಾಗಿರುವ ದೈವ ಸಾಕ್ಷಿ--ಕೇಳೀರಿ।
ಇಂದು ನಮ್ಮಗಳ ಕೊಡತೇವಿ ||೫೩೬||

* * *

ಎಣ್ಣೆ ನೀಡಲಿ ಬೇಡ ನೆತ್ತಿ ಖಸಿಯಲಿ ಬೇಡ।
ಅನ್ನಿಗರ ಮಗಳೆಂದೆನಬೇಡ।
ಅನ್ನಿಗರ ಮಗಳೆಂದೆನಬೇಡ--ತಂಗೆವ್ವ।
ಬಾಲನ ಸರಿಯು ಬಾಗಿಯವ್ವ ||೫೩೭||






## ಸೊಸೆ—ಮಗಳು – ಮಗ

ಇಂದು ನನ ಕಂದವ್ನ ಗಂಡಃ ಕರಿಯಲಿ ಬಂದ ।
ಗೊಂಡೇದ ಸೆರಗ ಒಲಿಯುತ ।
ಗೊಂಡೇದ ಸೆರಗ ಒಲಿಯುತ–ಕಂದವ್ಮ ।
ಪಂಡಿತನ ಕೂಡಿ ಹೊರ ಹೊಂಡ ||೫೩೮||

* * *

ನಡೆದರೆ ನಡು ಸಣ್ಣ ಪದುಮ ಜಾತೀ ಹೆಣ್ಣ ।
ಮಾವೀನ ಹೋಳು ನಿನಕಣ್ಣು ।
ಮಾವೀನ ಹೋಳು ನಿನಕಣ್ಣು–ಕಂದವ್ಮ ।
ಮಾವ ಬಂದಾನ ಒಳಗ್ಹೋಗ ||೫೩೯||

*

ಅತ್ತಿ ಮನಿಯು ಊಟ ಮಟ ಮಟ ಮಧ್ಯಾನ ।
ಚಿಕ್ಕ ಕಂದವ್ಮ ಹಸದಾಳ ।
ಚಿಕ್ಕ ಕಂದವ್ಮ ಹಸದಾಳ–ನನಬಾಳಾ ।
ಸಕ್ಕರಿಯ ಒಯ್ಯೋ ಸೆರಗೀಲಿ ||೫೪೦||

* * *

ಅರಿಸಣ್ಣಚ್ಚಿದ ಮಾರಿ ಸರಪಳ್ಳಚ್ಚಿದ ವಾಲಿ ।
ಅಗಸ್ಯಾಗ ನನಗ ಇದುರಾದೆ ।
ಅಗಸ್ಯಾಗ ನನಗ ಇದುರಾದೆ-ಕಂದವ್ಮ ।
ಅರಸಬಂದಾನ ಒಳಗ್ಹೋಗ ||೫೪೧||

ಮೋಜೀನ ಮಳಿ ಬಂದು ಓಣೆಲ್ಲ ಕೆಸರಾಗಿ ।
ಜಾರಿ ಬಿದ್ದೆಲ್ಲ ನನ ಮಗಳ ।
ಜಾರಿ ಬಿದ್ದೆಲ್ಲ ನನ ಮಗಳ–ಕಂದವ್ನ ।
ಕ್ಯಾದೀಗಿ ತುರುಬ ಕೆಸರಾಗಿ ||೫೪೨||

ಹಲ್ಲೀಗಿ ಹಲಪೂಡಿ ಗಲ್ಲಕ ಅರಿಸಿಣ ।
ಗೊಲ್ಲರೋಣ್ಯಾಗ ಬರುವsಳು ।
ಗೊಲ್ಲರೋಣ್ಯಾಗ ಬರುವsಳು-ಕಂದವ್ವ ।
ನಲ್ಲ್ಯಾರ ಒಳಗ ಕರ ಚಲುವಿ ॥೫೪೩॥

* * *

ಗಂಡನ ಮಾತೇನ ಗಾದೀಗಿ ಮಂಚೇನ ।
ನಂಬ್ಯಾಳ ನಾರಿ ಒಗೆತನಕ ।
ನಂಬ್ಯಾಳ ನಾರಿ ಒಗೆತನಕ--ನನ ಮಗಳು ।
ರಂಬೀನ ತರುವು ದರಿಯುsಳು ॥೫೪೪॥

* * *

ಸರಕಾರ ಎಂಬೂದು ದರಕಾರ ನನಗಿಲ್ಲ ।
ಸರಕಾರದಾಗ ಸರಿಪಾಲು ।
ಸರಕಾರದಾಗ ಸರಿಪಾಲು-ತರುವಂಥ ।
ಸರದಾರ ಮಗನು ಮನಿಯಾಗ ॥೫೪೫॥

* * *

ಹಾಲು ಬಾನ ಉಣಿಸಿ ನಾರಿ ಸೆರಗಿಲಿ ಒರಿಸಿ ।
ಯಾರೀಗಿ ಆದಿ ನನಬಾಳಾ ।
ಯಾರೀಗಿ ಆದಿ ನನಬಾಳಾ-ಬಂದಂಥ ।
ನಾರಿಗಾದೆಲ್ಲೊ ಹಡೆದಪ್ಪ ॥೫೪೬॥

* * *

ಕಟ್ಟಾಣಿ ಕಟ್ಟ್ಯಾಳ ಕಟ್ಟೆವ್ಯಾಲ ನಿಂತಾಳ ।
ಬಟ್ಟಲಗಣ್ಣು ತಿರುವ್ಯಾಳ ।
ಬಟ್ಟಲಗಣ್ಣು ತಿರುವ್ಯಾಳ-ಕಂದವ್ವ ।
ದಿಷ್ಟಿ ಸೋಂಕ್ಯಾವು ಒಳಗ್ಹೋಗ ॥೫೪೭॥

* * *

ಮಲ್ಲಗಿಯಂಥ ಮಗಳೀಗಿ ಎಲ್ಲಿತ್ತೊ ಒಗೆತsನ ।
ಹುಲ್ಲಾಗ ಬೆಂಕಿ ಒಗೆಥಂಗ ।
ಹುಲ್ಲಾಗ ಬೆಂಕಿ ಒಗೆಥಂಗ-ಗುಡ್ಡದ ।
ಕಲೀಗಿ ಧಾರಿ ಎರಥೆಂಗ ॥೫೪೮॥

ಕೆಲಸ ಮಾಡಿದರ ಸರಸವಾಡೀದ್ಹಂಗ ।
ಅಲಸಂದಿಕಾಳ ಸುಲಿಧಂಗ ।
ಅಲಸಂದಿಕಾಳ ಸುಲಿಧಂಗ-ಕಂದವ್ವ ।
ಕೆಲಸ ನೋಡ್ಯತ್ತಿ ಕಳುವಳ ॥೫೪೯॥

* * *

ವಜ್ಜರ್ಹಚ್ಚಿದವಾಲಿ ಗೆಜ್ಜಿ ಹಚ್ಚಿದ ಪಿಲ್ಲಿ ।
ಹೆಜ್ಜೆಜ್ಜಿಗಿ ನಿನ್ನ ನಗುಸುವ ।
ಹೆಜ್ಜೆಜ್ಜಿಗಿ ನಿನ್ನ ನಗುಸುವ-ನಲ್ಲನಿ ।
ಬಿಟ್ಟು ಬಂದ್ಯಾಕ ನನಬಾಲಿ ॥೫೫೦॥

* * *

ಒಲ್ಲಽದ ಒಗತಽನ ಎಲ್ಲತ್ತೋ ಮಗಳೀಗಿ ।
ಬೆಲ್ಲಽಕ ಬೇವು ಕಲಥಂಗ ।
ಬೆಲ್ಲಽಕ ಬೇವು ಕಲಥಂಗ-ಅಡಿವ್ಯಾನ ।
ಕಲ್ಲೀಗಿ ಧಾರಿ ಎರಧಂಗ ॥೫೫೧॥

* * *

ಮಗಳಽ ನಿನ್ನ ಕಳುವಿ ಮಾಳೀಗಿ ಏರೀನ ।
ಮಾವೀನ ಕೊಲ್ಲಿ ಮರಿಯಾಗಿ ।
ಮಾವೀನ ಕೊಲ್ಲಿ ಮರಿಯಾಗಿ-ಕಂದವ್ವ ।
ಮಾಣೀಕ ನಮಗ ಎರವಾಗಿ ॥೫೫೨॥

* * *

ಹೋಗಂದರ್ಹೋಗಳು ಹೊಸ್ತಽಲ ದಾಟಽಳು ।
ಮಾರಿ ನೋಡಿ ನೋಡಿ ಅಳತಾಳ ।
ಮಾರಿ ನೋಡಿ ಅಳತಾಳ-ಕಂದವ್ವ ।
ಹ್ಯಾಂಗತ್ತೀ ಮನಿಗೆ ಕಳುವಾಲಿ । ॥೫೫೩॥

* * *

ಸಾಕು ಸಾಕಂದರ ಯಾಕ ನೀರಿಗಿ ಹೋದಿ ।
ನಾಕು ತೊಂಡಲದ ಮಳಿ ಬಡಿದು ।
ನಾಕು ತೊಂಡಲದ ಮಳಿ ಬಡಿದು-ಮಾವೀನ ।
ಕಗ್ಗಾಯಿ ಬಡಿದು ಕೊಡವೊಡೆದು ॥೫೫೪॥

ಹುಡದೀಯ ಹಿಡದಲ್ಲಿ ಹೊಗಬಿದ್ದು ನೋಡೇನ ।
ಯಾರು ಬಾಳsಗ ಸರಿಯಿಲ್ಲ ।
ಯಾರು ಬಾಳsಗ ಸರಿಯಿಲ್ಲ–ಹೋಳೀಯ ।
ಕಾಮನ್ಹೋಲೀಕಿ ಕಂದsಗ ||೫೫೫||

* * *

ಕಾಮ ಕಸ್ತೂರಿ ಹೂವ ಭೂಮಿ ತಿರಗಿದರಿಲ್ಲ ।
ಕೋಮಲಿ ಚಲುವಿ ನನಮಗಳ ।
ಕೋಮಲಿ ಚಲುವಿ ನನಮಗಳ–ನಿನನೋಡಿ
ಭೂಮಿ ತೂಕದ ವರ ಬಂದಾ ||೫೫೬||

* * *

ಕಾಮsನ ತೋಟಕ್ಕ ಭೀಮsನ ಕಾವsಲು
ಜೇನ ತುಪ್ಪದಲಿ ಮಡಿಯೆಳೆದು ।
ಜೇನ ತುಪ್ಪದಲಿ ಮಡಿಯೆಳೆದು - ನನಬಾಲ ।
ಕಾಮ ಬೆಳೆದಾನ ಕರಿಕಬ್ಬ ||೫೫೭||

* * *

ವಾರೀಗಿ ಪುರುಷರ ತೋಳ ಮ್ಯಾಲಿನ ನಿದ್ದಿ ।
ಏಳ ನನ ಮಗಳ ಬೆಳಗಾಗಿ ।
ಏಳ ನನ ಮಗಳ ಬೆಳಗಾಗಿ–ದೊಡ್ಡ್ಯಾನ ।
ಕೀಲ ಕರಗೋಳು ಮೊಲೆಯುಂಡು ||೫೫೮||

* * *

ಕರವತ್ ಕಾಟಿ ಪತ್ ಲಾ ಉಗುರ್ಹಚ್ಚಿ ನಿರಿಗ್ಹೊಯ್ದು ।
ಕರ್ನಾಟಿ ಗೊಂಬಿ ಕೈ ಬೀಸ ।
ಕರ್ನಾಟಿ ಗೊಂಬಿ ಕೈ ಬೀಸ–ಕಂದವ್ವ ।
ಹರದಾರಿ ಹಾದಿ ಕಳುವೇನ ||೫೫೯||

* * *

ಚೆಲುವ ಚೆಂಡಿಕಿ ಬಿಟ್ಟು ಗರುಡ ಗಂಧವ ಹಚ್ಚಿ ।
ಎಳೆಯ ಬಿಸಲಾಗ ಹುಡದೀಯ ।
ಎಳೆಯ ಬಿಸಲಾಗ ಹುಡದೀಯ--ಹಾಕೂವ ।
ಕಂದ ನಿನ ಗಂಧ ಬೆವತಾವ ||೫೬೦||

ಮಗಳು ಮಾತಿನ ಗಿಳಿಯು ಸೊಸಿಯು ಸೂತರ ಗೊಂಬಿ ।
ಮನಿ ಮಾಡು ತಮ್ಮ ಮತಿವಂತ ।
ಮನಿ ಮಾಡು ತಮ್ಮ ಮತಿವಂತ--ನ ಕೂಡ ।
ಮನ ಸೂರಿ ಮಾಡಿ ನನ ಮಗಳೆ ||೫೬೧||

* * *

ಕೂಸು ನನ ಕಂದವ್ವ ಮಾಸಿದ ದಟ್ಟಿ ಕಳಿಯೆ ।
ದಾಸ್ಯಾಳಧೊವ ಮುಡಿಬಾರ ।
ದಾಸ್ಯಾಳಧೊವ ಮುಡಿಬಾರ-ನಿಮ್ಮಾವ ।
ಕಾಸಿ ನಿನ ಬೇಡ ಬರತಾರ ||೫೬೨||

* * *

ಚಮರ ಮುಡಿದ ಹೂವು ಚಾವಡಿ ಏರಲಿ ।
ಕುದುರಿ ರಾವುತ ನನ ಬಾಳಾ ।
ಕುದುರಿ ರಾವುತ ನನಬಾಳಾ-ಮುಡಿದ್ಹೂವು ।
ಉದರಲಿ ನನ್ನ ಉಡಿಯಾಗ ||೫೬೩||

* * *

ಭಾಗಾದಿ ಮನಿಮುಂದ ಹ್ಯಾಂಗ್ಹಾಯ್ದೀ ನನಬಾಲಾ ।
ಚೌರಿ ಛತ್ತರಿಕಿ ನೆರಳೀಲಿ ।
ಚೌಕಿ ಛತ್ತರಿಕಿ ನೆರಳೀಲಿ-ಬರುವಾಗ ।
ಭಾಗಾದಿ ಮಾರಿ ತಿಳಿಯಾಕ ||೫೬೪||

* * *

ಆರುತಿ ಅಡ್ಡಣಗಿ ಗೀರುತಿ ಬಟ್ಟಲ ।
ಮಾರಾಯ ಅಣ್ಣನ ಶಿವಪೂಜಿ ।
ಮಾರಾಯ ಅಣ್ಣನ ಶಿವಪೂಜಿ-ಮಾಡಟಿಗೆ ।
ಮೂಡಲ ಕೆಂಪು ತಿಳಿ ಹರಿದು ||೫೬೫||

* * *

ಯಾವಾಗ ನೋಡಿದರ ಆವರಿ ಹೂವಿನ ಬಣ್ಣ ।
ಉಟ್ಟಿರುವ ಸೀರಿ ಜರತಾರ ।
ಉಟ್ಟಿರುವ ಸೀರಿ ಜರತಾರ-ಕಂದವ್ನ
ಆಳುವ ಅರಸ ಸುಭೆದಾರ ||೫೬೬||

ಸಡಗರ ಯಾರಿಂದ ಬಡಿವಾರ ಯಾರಿಂದ ।
ಖಡಿ ಹೊಡದು ಆಡು ಮಗನಿಂದ ।
ಖಡಿ ಹೊಡದು ಆಡು ಮಗನಿಂದ-ಕಟ್ಟಿಕಲ್ಲ ।
ಜಡಿದೇರಿ ಬರುವ ಸೊಸಿಯಿಂದ ||೫೬೭||

* * *

ಮಗಳು ಎಂಥಾ ಚಲುವಿ ನಕ್ಕರೆ ತುಟಿಕೆಂಪು ।
ಅಳಿಯ ಎಂಥವರು ನನಗ್ಹೇಳ ।
ಅಳಿಯ ಎಂಥವರು ನನಗ್ಹೇಳ-ಹಂಪೀಯ ।
ವಿರುಪಾಕ್ಷಗಿಂತ ಚಲುವರು ||೫೬೮||

* * *

ಕಾಮನಂಥ ಕಣ್ಣು ಭೀಮನಂಥ ಹುಬ್ಬು ।
ರಾವಣಗಿಂತ ನಡುಸಣ್ಣ ।
ರಾವಣಗಿಂತ ನಡುಸಣ್ಣ-ನನಬಾಲಾ ।
ಹುಲಿಯ ಸಿನಗ್ಯಾರು ಕೆಣಕ್ಯಾರ ||೫೬೯||

* * *

ಕಾಮ ನನ ಕಂದಯ್ಯ ಕರಿಕಬ್ಬ ಹಚ್ಚ್ಯಾನ ।
ಮಲ್ಲಾಡದೇಶ ಗಿಣಿಬಂದು ।
ಮಲ್ಲಾಡದೇಶ ಗಿಣಿಬಂದು-.ಮೆಯ್ದಾವ !
ಕಬ್ಬ ನಿನ ಸುಂಕ ರವದೀಯ ||೫೭೦||

* * *

ಮಗ ನಿನ್ನ ಹಡಿಲಾಕ ಮುಗಲ ಮುಟ್ಟಿತು ಜೀವ ।
ಮದನಾರಿ ನನ್ನ ಸೊಸಿ ಬಂದು ।
ಮದನಾರಿ ನನ್ನ ಸೊಸಿ ಬಂದು--ನಡಿವಾಗ ।
ಮಗ ನಿನ್ನ ಮನವು ಎರಡಾಗಿ ||೫೭೧||

* * *

ಸೊಸಿಯು ಬರತಾಳಂತ ಖುಶಿಭಾಳ ಮನದಾಗ ।
ಸೊಸಿ ಬಂದು ಮಗನ ಕಸಗೊಂಡು ।
ಸೊಸಿ ಬಂದು ಮಗನ ಕಸುಗೊಂಡು-ಬಾಳ್ಯಾಗ ।
ಮುಗಲೀಗಿ ಬಾಯಿ ತೆರದಾಳ ||೫೭೨||

ಗಂಗಿಯಷ್ಟು ಮಾಯ ಗೌರಿಗಿಲ್ಲೇಳು ಸಿವನೆ ।
ನಡುನೀರ ತಂಪು ದಡಕಿಲ್ಲ ।
ನಡುನೀರ ತಂಪು ದಡಕಿಲ್ಲ–ಮರ್ತ್ಯದಾಗ ।
ಮಗಳಷ್ಟು ಮಾಯ ಸೊಸಿಗಿಲ್ಲ

* * *

ಹೆಣ್ಣೀನ ಹರೆಯು ಹಣ್ಣೀನ ಗೊಂಚಲು ।
ಕಣ್ಣೀಲಿ ನೋಡಿ ಮನಬಾರ ।
ಕಣ್ಣೀಲಿ ನೋಡಿ ಮನಬಾರ--ಬಡವಂತ ।
ಕನ್ನಿರಿಲ್ಲೀನ ಮನಿಯಾಗ ||೫೭೪||

* * *

ದೊಡ್ಡವರ ಮಗಳೀಗಿ ಅಡ್ಡ ಲಿಂಗಾಕಾರ ।
ಖಡ್ಡಿ ವಿಭೂತಿ ಕರಿಹಲ್ಲ ।
ಖಡ್ಡಿ ವಿಭೂತಿ ಕರಿಹಲ್ಲ--ಕಂದವ್ನ ।
ಒಡವಿ ಇಡಸಟಿಗೆ ಬೆಳಗಾಗಿ ||೫೭೫||

* * *

ಸಿಟ್ಟೀನ ಹರದೀಗಿ ಶ್ರೀ ಕೃಷ್ಣ ದೊರೆತಾನ
ಸುತ್ತೇಳು ಬಳಗ ಮರಿಸ್ಯಾನ ।
ಸುತ್ತೇಳು ಬಳಗ ಮರಿಸ್ಯಾನ–ಕಂದವ್ನ ।
ಹರಿಚಂದರಾಯ ದೊರೆತಾನ ||೫೭೬||

* * *

ವರನುಳ್ಳ ಒಗೆತನ ಒಳಗ ಸೇದೂ ಭಾವಿ ।
ಹಲಿಗಿ ತೊಟ್ಟಿಲದ ಹಸಗೂಸ ।
ಹಲಿಗಿ ತೊಟ್ಟಿಲದ ಹಸಗೂಸ--ನನ ಮಗಳು ।
ಗರತಿ ಮಾಡ್ಯಾಳ ಮನಿ ಕೆಲಸ ||೫೭೭||

* * *

ಸೋದರ ಮಾವನ ಸೊಸಿಯಾಗ ನನ ಮಗಳ ।
ಬಿಸಲಾಗ ನೀರ ತರಗೊಡನ ।
ಬಿಸಲಾಗ ನೀರ ತರಗೊಡನ–ನಿಮ್ಮಾವಾ ।
ನೀರ್ಹೊಳಿಗೆ ನಿಂಬಿಬನ ನಿಲುವಿ ||೫೭೮||

ಮಾವs ಮಾಡಿದ ಶೆಲ್ಲೆ ಮಾರೀ ಮ್ಯಾಗ್ಹಾಕ್ಕೊಂಡು ।
ಮಾಲದಾಗ್ಯಾಕ ಮಲಗಿದೋ ।
ಮಾಲದಾಗ್ಯಾಕ ಮಲಗೀದೋ--ನನ ಬಾಲಾ ।
ಮಾದೇವ ನಳಿಯು ಉಣ್ಣೇಳೋ ||೫೭೯||

* * *

ಚಲುವ ಚನ್ನಿಗ ಬಾರೊ ಹವಳ ಮಾಣಿಕ ಬಾರೋ ।
ಹರದಿ ಬಲ್ಲಿರುವ ಹರಲೀಗ ।
ಹರದಿ ಬಲ್ಲಿರುವ ಹರಲೀಗ--ಬಾರದೆ ।
ನಮ್ಮ ಮನಕಿಂದು ಸೊಗಸಿಲ್ಲ ||೫೮೦||

* * *

ಮಗಳ ಮಾವ ಬಂದಾ ಸೊಸಿಯು ಅಪ್ಪ ಬಂದಾ ।
ಯಾರ್ನಿಟ್ಟು ಯಾರ್ನ ಕಳುಹsಲಿ ।
ಯಾರ್ನಿಟ್ಟು ಯಾರ್ನ ಕಳುಹsಲಿ--ನನ್ನಣ್ಣಾ ।
ಮಗಳಿಟ್ಟು ಸೊಸಿಯು ಕರೆದೊಯ್ಯೊ ||೫೮೧||

* * *

ಮುಂಜಾನೆ ಎದ್ದsರ ಮುಂದೆ ಹಂದರ ಚಂದ ।
ಮುನ್ನೋಡಿ ಹರಿವ ನದಿ ಚಂದ ।
ಮುನ್ನೋಡಿ ಹರಿವ ನದಿ ಚಂದ--ಕಂದsನ ।
ಸಂಧ್ಯಾನ ಮಾಡ್ವ ಕೈ ಚಂದ ||೫೮೨||

* * *

ಮಾತೀನ ಮಡದೀಗಿ ಸೂತರದ ಗೊಂಬೀಗಿ ।
ಯಾತರಲೆ ಹೊಡದಿ ನನ ತಮ್ಮ ||೫೮೩||

* * *

ತಾರೆ ಹಣ್ಣಿಲ್ಹೊಡದೆ ಕಮಲಧೂವಿಲ್ಹೊಡದೆ ।
ತ್ವಾಟದಾಗಿರುವ ಗಜಲಿಂಬಿ ।
ತ್ವಾಟದಾಗಿರುವ ಗಜಲಿಂಬಿ--ಲ್ಹೊಡೆದsರ ।
ಮೋಜೀಲೆಳತಾಳ ಹಡೆದವ್ವ ||೫೮೪||

* * *

ಎದ್ದು ಎಷ್ಟೊತ್ತಾಯ್ತು ನನಗೂಡ ಮಾತಿಲ್ಲ ।
ಏನಂದ್ಯೋ ಬಾಳ ಮಡದೀಗಿ । ||೫೮೫||

ಅಂದಿಲ್ಲ ಆಡಿಲ್ಲ ಅಂಗೈ ಮಾರ್ದಿಣ್ಣೀಗಿ ।
ಅಂಗೈಯ ಹಚ್ಚಿ ಹೊಡದಿಲ್ಲ ।
ಅಂಗೈಯ ಹಚ್ಚಿ ಹೊಡದಿಲ್ಲ--ಆಕಿ ತನ್ನ ।
ತವರಮನಿ ನೆನಸಿ ಅಳತಾಳ ||೫೮೬||

ಅಣ್ಣಾಽನ ಮಗಳಂತ ಹಮ್ಮೀಲೆ ನಾತಂದೆ ।
ಉಣ್ಣಾಽಳು ಮುಸುಕು ತಗಿಯಾಽಳು ।
ಉಣ್ಣಾಽಳು ಮುಸುಕು ತಗಿಯಾಽಳು--ಅಣ್ಣಯ್ಯ ।
ಮುನ್ನೂಣಿ ಹೇಳ ಮಗಳೀಗಿ ||೫೮೭||

ಮುನ್ನೂಣಿ ಹೇಳಾಕ ಹೊನ್ನೆಷ್ಟು ಅಳದೆವ್ವ ।
ಪುಣ್ಯೇಕ ಧಾರಿ ಎರದೀನಿ ।
ಪುಣ್ಯೇಕ ಧಾರಿ ಎರದೀನಿ–ತಂಗೆವ್ವ ।
ಸೊನ್ನೀಲೆ ಮಗ್ಗ ಇರಹೇಳ ||೫೮೮||

* * *

ಮುದ್ದು ಕಂದಯ್ಯಾಽಗ ಮುವ್ವರು ಸ್ವಾದರ ಮಾವ ।
ಖಜೂರದ್ದಣ್ಣ ಬಲಿಗೈಲಿ ।
ಖಜೂರದ್ದಣ್ಣ ಬಲಿಗೈಲಿ–ಹಿಡಕೊಂಡು ।
ಮುದ್ದು ಬಾರೆಂದು ಕರೆದಾರೊ ||೫೮೯||

* * *

ಸಣ್ಣಾಽ ಓಣ್ಯಾಗ ಘಮ್ಮೆಂಬುದೇನಯ್ಯ ।
ಸಣ್ಣ ತಲೇಗೆ ಸರಮುತ್ತು ।
ಸಣ್ಣ ತಲೇಗೆ ಸರಮುತ್ತು-ಮಾವಯ್ಯ ।
ನೀವೆನ್ನ ತಾಯಿ ಒಡಹುಟ್ಟು ||೫೯೦||

* * *

ಮಾವಯ್ಯನ ಮನಿಯಾಗ ಮಾಣಿಕದ ಉಯ್ಯಾಲಿ ।
ಮಾವಯ್ಯನಾಡಿ ಮಗನಾಡಿ ।
ಮಾವಯ್ಯನಾಡಿ ಮಗನಾಡಿ-ದುಯ್ಯಾಲಿ ।
ನಾನಾಡಿ ಕೀಲು ಸಡಿಲ್ಯಾವು ||೫೯೧||

ಸೋದರ ಮಾವನ ಪಾದದ ಸರ್ಕೀಳಿ ।
ಹಾಲು ಇಟ್ಟೇನಿ ಒಲಿಮ್ಯಾಲೆ ।
ಹಾಲು ಇಟ್ಟೇನಿ ಒಲಮ್ಯಾಲೆ--ಮಾವಯ್ಯ ।
ಆಳೆಷ್ಟು ನಿಮ್ಮ ಕುದುರೆಷ್ಟು ॥೫೯೨॥

* * *

ಆಳೊಂದು ಐನೂರು ಕುದುರ್‍ಯೊಂದು ಮುನ್ನೂರು ।
ಕಾಲಾಳು ಲಕ್ಷ ಗಡುವಿಲ್ಲ ।
ಕಾಲಾಳು ಲಕ್ಷ ಗಡುವಿಲ್ಲ--ನನಸೊಸಿಯೆ ।
ವೀಳ್ಯವ ಕೊಟ್ಟು ಕಳಿಸೇನು ॥೫೯೩॥

* * *

ಮಾವಯ್ಯ ಬಂದಾನ ಒಲಿಮುಂದ ಸೌದಿಲ್ಲ ।
ಮಾಣಿಕವ ಸೀಳಿ ಒಲೆಗಿಕ್ಕಿ ।
ಮಾಣಿಕವ ಸೀಳಿ ಒಲೆಗಿಕ್ಕಿ–ಅಡುಗೆಮಾಡಿ ।
ಮಾವಯ್ಯ ಧೊರೆಗೆ ಬಡಿಸೇನು ॥೫೯೪॥

* * *

ಧಾರೇಯ ಹೊತ್ತೀಗೆ ಯಾರ್‍ಯಾರು ಬರಬೇಕು ।
ಧಾರ್‍ವಾಡದಿಂದ ಹಿರಿಯಣ್ಣ ।
ಧಾರ್‍ವಾಡದಿಂದ ಹಿರಿಯಣ್ಣ–ಸೋದರಮಾವ ।
ಧಾರೆ ಹೊತ್ತೀಗೆ ಬರಲಿಲ್ಲ ॥೫೯೫॥

* * *

ಅತ್ತಿಗೆಯ ಅರಸೇನ ತಾಯಿ ಕುಮಾರೇನ ।
ಮಕ್ಕಳಿಗೆ ಮಾವ ನನ್ನಣ್ಣ ।
ಮಕ್ಕಳಿಗೆ ಮಾವ ನನ್ನಣ್ಣ–ಬಂದರೆ ।
ನಿಚ್ಚ ದೀವಳಿಗಿ ಮನಿಯಾಗ ॥೫೯೬॥

* * *

ಅತ್ತ ಹೋದರೆ ಹವಳ ಇತ್ತ ಬಂದರೆ ಮುತ್ತು
ಪಟ್ಣ ಹೋದರೆ ಚವಲೀಯು ।
ಪಟ್ಣ ಹೋದರೆ ಚವಲೀಯು–ಚಿನ್ನದಗುಬ್ಬಿ ।
ಇನ್ನೇನು ತರಲಿ ಸೊಸೆಮುದ್ದೆ ॥೫೯೭॥

ಆರುದ್ದ ಮುಂಡೇಯು ಮೂರುದ್ದ ಸೆಳೆಗಂಟು ।
ಈ ಮುಂಡೆ ಮಾಸಿ ಇರಲಾರೆ ।
ಈ ಮುಂಡೆ ಮಾಸಿ ಇರಲಾರೆ–ಹಡೆದಪ್ಪ ।
ಬಾನಗಿತ್ತಿ ಬೇಕು ಮನಿಯಾಗ ॥೫೮॥

* * *

ಮಜ್ಜನಕ್ಕರಳುವದು ಮಜ್ಜಮಲ್ಲಿಗೆ ಹೂವ ।
ಸುಗ್ಗೀಗರಳುವದು ಸುರಗೀಯು ।
ಸುಗ್ಗೀಗರಳುವದು ಸುರಗೀಯು–ಸೇವಂತಿಗೆ ।
ನುಗ್ಗುವದು ಬಾಲ್ಯಾರ ಜಡಿಯಾಗ ॥೫೯॥

* * *

ಹೆಣ್ಣಿಲ್ಲದವ್ವನ ಹೆಣ ಚೆಂದವಿಲ್ಲವು ।
ಬಣ್ಣದ ಸಿರಿಯ ಸೊಸೆದಿರು ।
ಬಣ್ಣದ ಸಿರಿಯ ಸೊಸೆದಿರು–ತೀಡಿದರ ।
ಕಣ್ಣೀನ ಕಾಡಿಗೆ ಉಲಚವು ॥೬೦॥

* * *

ಮುತ್ತು ಬಂತೇ ಮನಿಗೆ ರತ್ನಬಂತೇ ಮನಿಗೆ ।
ಅತ್ತಿ ನಿನ ಮನಿಗೆ ಸೊಸಿ ಬಂತೆ ।
ಅತ್ತಿ ನಿನ ಮನಿಗೆ ಸೊಸಿ ಬಂತೆ-ಅದರಿಂದ ।
ನೆಟ್ಟ ತೆರಿಗೆಲ್ಲ ಫಲಬಂತೆ ॥೬೧॥

* * *

ಕಾಲುಂಗುರ ಕಣಿ ಕಣಿ ನೇವಳ ಮಿಣಿ ಮಿಣಿ ।
ನಾವು ದೊಡ್ಡವರ ಸೊಸೆದೀರು ।
ನಾವು ದೊಡ್ಡವರ ಸೊಸೆದೀರು-ಬರುವಾಗ ।
ಸಾಲು ಮಾಳಿಗೆಯ ಸವನವು ॥೬೨॥

* * *

ಒನಕೀಗೆ ವಜ್ರ ಒರಳೀಗೆ ತಾಂಬೂಲ ।
ಕೇರುವ ಮೊರಕೆ ಜಗತರ ।
ಕೇರುವ ಮೊರಕೆ ಜಗತರ-ನಮ್ಮನೆಯ ।
ಸೊಸೆದೇರಿಗೆಲ್ಲ ದೊರಿತನ ॥೬೩॥

ಮೂಡಲ ದಿಕ್ಕೀಗೆ ನೋಡವ್ವ ಗಿಣಿಗೋಳ ।
ಗಿಣಿಗಳಿಗೆ ತಕ್ಕಂಥ ಮರಿಗsಳ ।
ಗಿಣಿಗಳಿಗೆ ತಕ್ಕಂಥ ಮರಿಗsಳ-ತಾಯವ್ವ ।
ಮರಿಗಳಿಗೆ ತಕ್ಕಂಥ ಸೊಸೆದೀರ ||೬೦೪||



## ಅಕ್ಕ-ತಂಗಿ, ಅಣ್ಣ-ತಮ್ಮ, ಅತ್ತಿಗೆ-ನಾದಿನಿ

ಹೆಣ್ಣೀನ ಜನುಮಾಕ ಅಣ್ಣsತಮ್ಮರು ಬೇಕು ।
ಬೆನ್ನs ಕಟ್ಟವರು ಸಭೆಯೊಳಗ ।
ಬೆನ್ನs ಕಟ್ಟವರು ಸಭೆಯೊಳಗ-ಸಾವೀರ
ಹೊನ್ನ ಕಟ್ಟವರು ಉಡಿಯೊಳಗ ||೬೦೫||

* * *

ಅಕ್ಕ ತಂಗಿಯರು ನಾವು ಹೆಚ್ಚೀನು ಕಡಿಮೇನು ।
ಸುತ್ತs ತಂಗೆವ್ವ ಸುರಗೀಯ ।
ಸುತ್ತs ತಂಗೆವ್ವ ಸುರಗೀಯ-ಮೂಗುತಿ ನೀರು ।
ಎತ್ತs ತಮ್ಮನ ಎಡ ಬಲಕ ||೬೦೬||

* * *

ಅಕ್ಕs ತಂಗೆರ ಜಗಳ ರೊಕ್ಕs ಬಾರಿಸಿಧಂಗ ।
ಹುಕ್ಕೇರಿ ನವಿಲು ಕುಣಿಧಾಂಗ ।
ಹುಕ್ಕೇರಿ ನವಿಲು ಕುಣಿಧಾಂಗ-ಸಂಜ್ಯಾಗ ।
ಗದುಗೀನ ತಾಸೆ ಬಡಿಧಂಗ ||೬೦೭||

* * *

ಬೆಳ್ಳನ್ನ ಎರಡೆತ್ತು ಬೆಳ್ಳೀಯ ಬಾರಕೋಲು ।
ಹಳ್ಳsದ ಹೊಲ ಹರಗ್ಯಾನ ।
ಹಳ್ಳsದ ಹೊಲ ಹರಗ್ಯಾನ-ನನತಮ್ಮನ ।
ತೆಳ್ಳನ್ನ ಹೊಟ್ಟೆ ಹಸಿದಾವ ||೬೦೮||

ಬಸರೀಯ ಕಟ್ಟೆಲ್ಲಿ ಬೇವೀನ ಮರವೆಲ್ಲಿ |
ನ್ಯಾಯಽ ಹೇಳವರ ಮನೆಯೆಲ್ಲಿ |
ನ್ಯಾಯಽ ಹೇಳವರ ಮನೆಯೆಲ್ಲಿ-ನನತಮ್ಮ |
ಮೂರ ಮಾತ್ಹೇಳಿ ಮುಗಿಸ್ಯಾನ ||೬೦೯||

* * *

ಹಡದಮ್ಮ ಹಾಳೆಂದು ಧಡ ಧಡ ನಾಬಂದೆ |
ಒಳಗ ಅಣ್ಣಯ್ಯನ ಮಡದೀಯ |
ಒಳಗ ಅಣ್ಣಯ್ಯನ ಮಡದೀಯ-ಧನಿಕೇಳಿ |
ತಲೆ ಬಾಗಲಿಂದ ತಿರಗೀದೆ ||೬೧೦||

* * *

ಹೊಟ್ಟಿ ನೋವು ಎಂದಾಳು ಪಟ್ಟಿ ಜವುಳಿ ತೆಗೆದಾಳು |
ಹಟ್ಟೀಗೂ ಹೊಲಕು ಓಡಾಡಿ |
ಹಟ್ಟೀಗೂ ಹೊಲಕು ಓಡಾಡಿ-ತಂಗೆವ್ವ |
ಪುಟ್ಟ ಬಾಲಕನ ಹಡೆದಾಳು ||೬೧೧||

* * *

ಕಾಲುಂಗರ್ದ ತಂಗೀಯ ಕರಿಯಾಕ ಬಂದಾರ |
ಕಾರೊಡ್ಡಿ ಹುಯ್ಯೋ ಮಳೆರಾಯ |
ಕಾರೊಡ್ಡಿ ಹುಯ್ಯೋ ಮಳೆರಾಯ-ತಂಗೀಯ |
ಇಂದಿನ ಪಯಣ ಉಳಿಯಽಲಿ ||೬೧೨||

* * *

ಅಣ್ಣಽನ ಹೆಂಡಽತಿ ಕಣ್ಣೀಗೊಳ್ಳೀಯವಳು |
ಸುಣ್ಣದ ನೀರು ಒಲಿಮುಂದ
ಸುಣ್ಣದ ನೀರು ಒಲಿಮುಂದ-ಇಟಗೊಂಡು
ಎಮ್ಮಿ ಹಾಲೆಂದು ಬಡಿಸ್ಯಾಳ ||೬೧೩||

* * *

ಹಸರ ಕುಬಸದ ಮ್ಯಾಗ ಎಸಳ ಕೂದಲ ಬಿಟ್ಟು |
ಬಿಸಿಲಿಗ್ಯಾಕಕ್ಕ ಮಲಿಗ್ಯಾಳ |
ಬಿಸಿಲಿಗ್ಯಾಕಕ್ಕ ಮಲಿಗ್ಯಾಳ-ಅಕ್ಕಽನ |
ಕುಶಿ ಮೋಜಿನ ಬಯಕಿ ತಿಳಿಯಽವ ||೬೧೪||

ಕಟ್ಟಾಣಿ ಕರಮಣಿ ಕಟ್ಟಿಂದಾ ಮಡದೀಗಿ ।
ಟೀಕೆನ್ನ ಗುಂಡ ತಗಿಯೆಂದಾ ।
ಟೀಕೆನ್ನ ಗುಂಡ ತಗಿಯೆಂದಾ–ನನತಮ್ಮ ।
ದಿಷ್ಟ್ಯಾದ ವಂದ ಮಡದೀಗಿ ॥೬೧೫॥

* * *

ಹಡದವ್ವ ಇದ್ದಾಗ ನಡುಮನಿ ನನಗಿತ್ತ ।
ಕಡಗದ ಕೈಯ ಸೊಸಿ ಬಂದು ।
ಕಡಗದ ಕೈಯ ಸೊಸಿ ಬಂದು–ನಡೆದಾಗ ।
ತುದಿಗಟ್ಟಿ ನನಗ ಎರವಾಯ್ತು ॥೬೧೬॥

* * *

ಅಕ್ಕ ತಂಗೇರು ಮೇಲ ಮುತ್ತು ಮಾಣಿಕ ಮೇಲ ।
ಉತ್ತ್ಸರಿ ಸಾತಿ ಮಳಿ ಮೇಲ ।
ಉತ್ತ್ಸರಿ ಸಾತಿ ಮಳಿ ಮೇಲ–ನನತಮ್ಮ ।
ನೀ ಮೇಲ ನನ್ನ ಬಳಗಾಕ ॥೬೧೭॥

* * *

ಬಂಗಾರ ಬ್ಯಾಡ ಬಳಿಬ್ಯಾಡ ಅಣ್ಣಯ್ಯ ।
ಕೊಡಿರೊ ನನಗೊಂದು ಎಮ್ಮೀಯ ।
ಕೊಡಿರೊ ನನಗೊಂದು ಎಮ್ಮೀಯ–ನಿಮ್ಮಗಳ ।
ಹೆಸರ್ಹೇಳಿ ಮೊಸರ ಕಡದೇನು ॥೬೧೮॥

ಖಂಡಗ ಹಾಲಿನೆಮ್ಮಿ ಗುಂಗ್ರು ಗೋಡಿನೆಮ್ಮಿ ।
ತಂಗೆವ್ವ ಬೇಡಿ ಅಳತಾಳ ।
ತಂಗೆವ್ವ ಬೇಡಿ ಅಳತಾಳ–ಅಣ್ಣಯ್ಯ ।
ದಂಡೀಯ ಹಾಕಿ ಕೊಡಿರೆಂತ ॥೬೧೯॥

* * *

ಅಳುತಿದ್ದ ತಂಗೀಗೆ ನಗುತ ಎಮ್ಮಿಯಕೊಟ್ಟ ।
ಮೇಲೊಂದು ಮಾತ ತಾ ನುಡಿದ ।
ಮೇಲೊಂದು ಮಾತ ತಾ ನುಡಿದ–ತಂಗೆವ್ವ ।
ಮಡದಿಗೊಪ್ಪಿಸದೆ ಹೊಡದೇನಿ ॥೬೨೦॥

ನೀ ಒಪ್ಪಿ ನಿನ್ನ ಮಡದ್ಯೊಪ್ಪಿ ಕೊಟ್ಟsರೆ ।
ಹೆಸರ್ಹೋಳಿ ಮಸರ ಕಡೆದೇನು ।
ಹೆಸರ್ಹೋಳಿ ಮಸರ ಕಡೆದೇನು-ಅಣ್ಣಯ್ಯ ।
ನಿಮ ದೇವ್ರಿಗೊಂದೀಪ ಉರಿಸೇನು ||೬೨೧||

* * *

ಸರದಾರs ಬರುವಾಗ ಸುರಿದಾವs ಮಲ್ಲೀಗಿ ।
ಧೊರೆ ನನ್ನ ತಮ್ಮ ಬರುವಾಗ ।
ಧೊರೆ ನನ್ನ ತಮ್ಮ ಬರುವಾಗ-ಯಾಲಕ್ಕಿ ।
ಗೊನಿ ಬಾಗಿ ಹಾಲ ಸುರಿದಾವ ||೬೨೨||

* * *

ಎನಗ ಯಾರಿಲ್ಲಂತ ಮನದಾಗ ಮರಗಿದರ ।
ಪರನಾಡಲೊಬ್ಬ ಪ್ರತಿಸೂರ್ಯ ।
ಪರನಾಡಲೊಬ್ಬ ಪ್ರತಿ ಸೂರ್ಯ-ನನ್ನಣ್ಣ ।
ಬಿದಿಗಿ ಚಂದ್ರಾಮ ಉದಿಯಾದ ||೬೨೩||

* * *

ಹಳ್ಳsದ ದಂಡೀಗಿ ಹಸರು ಮೆಣಸಿನಕಾಯಿ ।
ದಣಿಸ್ಯಾಡತಾವ ಗಿಣಿಹಿಂಡು ।
ದಣಿಸ್ಯಾಡತಾವ ಗಿಣಿಹಿಂಡು-ಅಣ್ಣಯ್ಗ ।
ಕುಣಿಸ್ಯಾಡತಾಳ ಅತ್ತೀಗಿ ||೬೨೪||

* * *

ಕುದರೀಯ ಕುಣಿಸೂತ ಆನೀಯ ನಡಿಸೂತ ।
ಅರಗಿಣಿಗೆ ಮಾತ ಕಲಿಸೂತ ।
ಆರಗಿಣಿಗೆ ಮಾತ ಕಲಿಸೂತ-ಬರತಾನ ।
ಬರಿಗೊಡದಮ್ಮ ಬದಿನಾಗ ||೬೨೫||

* * *

ನಕ್ಕರ ನಗತಾವ ಚಿಕ್ಕs ತಮ್ಮನ ಹೋರಿ ।
ಹಕ್ಕಿ ಹಾರಿದರ ಬೆದಿರ್ಯಾವ ।
ಹಕ್ಕಿ ಹಾರಿದರ ಬೆದಿರ್ಯಾವ-ನಗರsದ ।
ಜಕ್ಕಾತಿ ಮೀರಿ ಬರತಾವ ||೬೨೬||

ಅವರೀಗಿ ಅವರಣ್ಣ ಅವಲಕ್ಕಿ ಕಳುವ್ಯಾನ ।
ನಮ್ಮಣ್ಣನೇನು ಬಡವೇನ ।
ನಮ್ಮಣ್ಣನೇನು ಬಡವೇನ-ಕ್ಯಾದೀಗಿ ।
ಗರಿಯೊಳಗ ಘಳಿಗಿ ಕಳಸ್ಯಾನ ॥೬೨೭॥

* * *

ಜಂಬ ನನ ತಮ್ಮಯ್ಯ ಕೆಂಜೋಳ ತೂರ್‍ಯಾನ ।
ಸುಂಕ ಹಾರ್‍ಯಾವ ಸುರಪೂರ ।
ಸುಂಕ ಹಾರ್‍ಯಾವ ಸುರಪೂರ-ಬಾಲ್ಯಾರು ।
ಸುಂಕ ನೋಡುತಲೆ ಬೆರಗ್ಯಾರ ॥೬೨೮॥

* * *

ಮಲ್ಲಾಡ ದ್ಹಕ್ಕೀಗಿ ಮಜ್ಹಾಕಿ ನನ ತಮ್ಮ ।
ಕಂಚೀನ ಗುಂಡು ಕವಣೀಯು ।
ಕಂಚೀನ ಗುಂಡು ಕವಣೀಯು-ಹೊಡೆದರ ।
ಜಂಬ ನಿನ ತೋಳ ಹೊಳೆದಾವ ॥೬೨೯॥

* * *

ಸೊಲ್ಲಾಪುರದಣ್ಣಾಗ ನಿಲ್ಲದಲೆ ಬರಹೇಳ ।
ಸೀರ್‍ಯೊಲ್ಲೆ ಅವನ ಕುಬಸೊಲ್ಲೆ ।
ಸೀರ್‍ಯೊಲ್ಲೆ ಅವನ ಕುಬಸೊಲ್ಲೆ-ಅಣ್ಣಾsನ ।
ಮಾರಿ ನೋಡಂಥ ಮನಸಾಗಿ ॥೬೩೦॥

* * *

ಅಚ್ಚ ಮಲ್ಲಗಿ ಹೂವ ಮುಚ್ಚಿ ಮಾರುವ ಜಾಣಾ ।
ನಾ ಕೊಳುವೆ ನಿದರ ಬೆಲಿಹೇಳೋ ।
ನಾಕೊಳುವೆ ನಿದರ ಬೆಲಿಹೇಳೋ-ತಂಗೀಗಿ ।
ಸುರುಳಿ ಗೂದಲದ ಸುಗುಣೀಗಿ ॥೬೩೧॥

* * *

ಪುಂಡೀಯು ಪಲ್ಲೇದ ಚಂಡೀಯು ಕಡಿಥಂಗ ।
ಪುಂಡ ನನ ತಮ್ಮ ಸಾವ್ಕಾರ ।
ಪುಂಡ ನನ ತಮ್ಮ ಸಾವ್ಕಾರ-ನಾಮಾತು ।
ಬಂಡೀಗೆ ಕೀಲ ಜಡಿಥಂಗ ॥೬೩೨॥

ಅಣ್ಣ ಬರ್ತಾನಂತ ಅಂಗಳಕ ಥಳಿಕ್ಹೊಟ್ಟ ।
ರನ್ನ ಬಚ್ಚಲಕ ಮಣಿಹಾಕಿ ।
ರನ್ನ ಬಚ್ಚಲಕ ಮಣಿಹಾಕಿ–ಕೇಳೇನ ।
ಥಣ್ಣಗ್ಹಾರಿಲ್ಲ ತವರವರು ||೬೩೩||

* * *

ಬಸರಾದರ ತೊಡಬೇಕ ಹಸರತಾಬುತಿ ಕುಬುಸಾ ।
ಹಸರೇಲಿಯೊಳಗ ಉಣಬೇಕ ।
ಹಸರೇಲಿಯೊಳಗ ಉಣಬೇಕ–ನನತಮ್ಮ ।
ಹೊಸ ಬೀಗನಾಗಿ ಬರಬೇಕ ||೬೩೪||

* * *

ತಾವರಿಯ ಗಿಡಹುಟ್ಟಿ ದೇವರಿಗೆ ನೆರಳಾಗಿ ।
ನಾಹುಟ್ಟಿ ಮನಿಗೆ ಎರವಾದೆ ।
ನಾಹುಟ್ಟಿ ಮನಿಗೆ ಎರವಾದೆ–ನನತಮ್ಮ ।
ತಾ ಹುಟ್ಟಿ ಮನಿಗೆ ಧನಿಯಾದ ||೬೩೫||

* * *

ಅಣ್ಣ ತಮ್ಮರು ಬೇಡಿ ಹೊನ್ನsಸೂರಿಗೆ ಮಾಡಿ ।
ಅಣ್ಣ ನಿನಗೊಬ್ಬ ಅಳಿಯsನ
ಅಣ್ಣ ನಿನಗೊಬ್ಬ ಅಳಿಯsನ–ನಾಬೇಡಿ ।
ಸನ್ಯಾಸಿ ಶಿವಗ ತಪವಿದ್ದೆ ||೬೩೬||

* * *

ಆಡೀನ ಮಲಿಹಾಂಗ ಜೋಡ ನಾವಿಬ್ಬsರ ।
ಆಡಬ್ಯಾಡ ತಂಗಿ ಕದನವ ।
ಆಡಬ್ಯಾಡ ತಂಗಿ ಕದನsವ–ಜಗಳsಕ ।
ಜೋಡೀನ ಹಕ್ಕಿ ಅಗಲ್ಯಾವ ||೬೩೭||

* * *

ಹನ್ನೆರಡು ವರ್ಷಕ್ಕ ಕನ್ನೆ ಮೈನೆರೆದಾಳ ।
ನಾಯೇನ ಒಯ್ಲಿ ಕೊಡವೀಗಿ ।
ನಾಯೇನ ಒಯ್ಲಿ ಕೊಡವೀಗಿ–ತಂಗೀಗಿ ।
ಕನ್ನsಡಿ ಕುಬುಸ ನೆನೆದಂಡಿ ||೬೩೮||

ಎಂದು ಇಲ್ಲದ ನನ್ನ ಎಡಗಣ್ಣು ಹಾರೀತ ।
ಚಿಂದರ ಹುಬ್ಬ ಕುಡಿಬೆಳಕ ।
ಚಿಂದರ ಹುಬ್ಬ ಕುಡಿಬೆಳಕ-ನನತಮ್ಮ ।
ಸಂಜಿಗ್ಗುಡಿದವ್ನ ಮಗಬಂದ ॥೬೩೯॥

* * *

ಮೂರುವ ಸಂಜೀಕಿ ಚಂದರನ ಬೆಳಕೀಲಿ ।
ಯಾರು ಬರತಾರ ನನ ಮನಿಗೆ ।
ಯಾರು ಬರತಾರ ನನ ಮನಿಗೆ-ತಮ್ಮಽನ ।
ರಾಜ ಪಂಡಿತನ ಗೆಳೆಯಽರು ॥೬೪೦॥

* * *

ಬಂಗಾರ ಬಳಿ ಮುಂದ ಬಿಂದುಲಿದ್ದರೆ ಛಂದ ।
ಹಿಂಡು ಮಂದ್ಯಾಗ ನನ್ನಣ್ಣ ।
ಹಿಂಡು ಮಂದ್ಯಾಗ ನನ್ನಣ್ಣ-ತಾಕೂತು ।
ಬಂದನೆಂದರ ಬಲು ಛಂದ ॥೬೪೧॥

* * *

ಗಿಡ್ಡಽರು ನಡೆದರ ಗಿಣಿ ಹಿಂಡು ನಡೆಧಂಗ ।
ಉದ್ದಽನ ಬಾಲಿ ನನತಂಗಿ ।
ಉದ್ದಽನ ಬಾಲಿ ನನತಂಗಿ-ನಡೆದರ ।
ರುದ್ದರನ ತೇರ ಎಳೆಧಂಗ ॥೬೪೨॥

* * *

ಸಣ್ಣ ಶಾಂವಿಗಿ ಒಲ್ಲ ಚೆನ್ನಿ ಸಕ್ಕರಿ ಒಲ್ಲ ।
ಹೆಣ್ಣೆಂಬ ಶಬುದ ಬಿಡವಲ್ಲ ।
ಹೆಣ್ಣೆಂಬ ಶಬುದ ಬಿಡವಲ್ಲ-ನನತಮ್ಮ ।
ಹೆಣ್ಣು ಕೊಡತೇನಿ ಉಣ್ಣೇಳೋ ॥೬೪೩॥

* * *

ತಂಗೀಗಿ ಕಳುವ್ಯಾನ ತೆವರೇರಿ ನಿಂತಾನ ।
ಅಂಗೀಲಿ ನೀರು ಒರಿಸ್ಯಾನ ।
ಅಂಗೀಲಿ ನೀರು ಒರಿಸ್ಯಾನ-ನನ್ನಣ್ಣ ।
ಇಂದೀಗಿ ತಂಗಿ ಎರವಂದಾ ॥೬೪೪॥

ತಂಗಿ–ತಂಗೀ ಬಾರ ತಂಬೂಲ ತುಟಿ ಬಾರ ।
ಸೆಟ್ಟಿ ಸಾವುಕಾರ ಸೊಸಿ ಬಾರ ।
ಸೆಟ್ಟಿ ಸಾವುಕಾರ ಸೊಸಿಬಾರ–ನನತಂಗಿ ।
ಭಂಗಾರ ಬಾರs ಬಯಲೀಗಿ ॥೬೪೫॥

* * *

ಬೀಗ ಬರತಾನಂತ ಬೀದೀಯ ಉಡುಗೀದ ।
ಗೋದ ಮಲ್ಲೀಗಿ ಹರವಿದ ।
ಗೋದ ಮಲ್ಲೀಗಿ ಹರವಿದ–ನನತಮ್ಮ ।
ಬೀದೀಯ ನೋಡಿ ಜರಗಾದಾ ॥೬೪೬॥

ಅತ್ತೀಯ ಮನಿಸುದ್ದಿ ಹತ್ತ್ಯಾವ ತವರೀಗಿ ।
ಸಿಟ್ಟಿನವ ಭಾಳ ನನ್ನಣ್ಣ ।
ಸಿಟ್ಟಿನವ ಭಾಳ ನನ್ನಣ್ಣ–ಕೇಳೂತ ।
ಬಿಟ್ಟ್ಯಾನೋ ತನ್ನ ಮರಿಗುದರಿ ॥೬೪೭॥

* * *

ಕಾರ್ತುಣವಿ ಹಬ್ಬsಕ ಕರಿಲಾಕ ಬರಬ್ಯಾಡ ।
ಕಾಲs ಬಾಡಗಿ ಕೊಡಬ್ಯಾಡ ।
ಕಾಲs ಬಾಡಗಿ ಕೊಡಬ್ಯಾಡ–ನನ್ನಣ್ಣ ।
ಹೊನ್ನ ದೀವಳಿಗಿ ಮರಿಬ್ಯಾಡ ॥೬೪೮॥

* * *

ಮಳಿ ಬಂತು ಮಳಿ ಬಂತು ಬೆನ್ನಿಂದ ಹೊಳಿಬಂತು ।
ಇನ್ನೊಂದು ಕೊಡವ ತರಲಿಲ್ಲ ।
ಇನ್ನೊಂದು ಕೊಡವ ತರಲಿಲ್ಲ–ತಮ್ಮsನ ।
ಗೀರ ಗಂಧsಕ ನೀರಿಲ್ಲ ॥೬೪೯॥

* * *

ನೂಲಾಕ ಕುಂತೀದ ನೂರೆಂಟು ಮಾಯ್ಯಾಗಿ ।
ಮತ್ತ ನನ ಜೀವ ಅನುಮಾನ ।
ಮತ್ತ ನನ ಜೀವ ಅನುಮಾನ–ಅಣ್ಣsನ
ನೂಲೆಳಿ ಯಾಕ ತಡದಾವ ॥೬೫೦॥

ಗಂಡ ಹೆಂಡರ ಮಾತು ಒಂದೆ ಹಾಸಿಗಿ ಮ್ಯಾಲ।
ಗಂಧ ಸಿಂಬಡಿಸಿ ನಗತಾಳ।
ಗಂಧ ಸಿಂಬಡಿಸಿ ನಗತಾಳ-ನನತಮ್ಮ।
ಗಂಗಿ ನಿನಗೆಲ್ಲಿ ದೊರೆತಾಳ ||೬೫೧||

* * *

ಕಣ್ಣೀಗಿ ಮೂಗೀಗಿ ಎರಡೇನ ಅತ್ತೀಗಿ।
ನಾ ನನ್ನ ಅಣ್ಣ ಎರಡೇನ।
ನಾ ನನ್ನ ಅಣ್ಣ ಎರಡೇನ-ಅತಿಗೆಮ್ಮ।
ನಿನ್ನಿಂದ ಅಣ್ಣ ಎರಡಾದ ||೬೫೨||

* * *

ಬಾಳೀಯ ವನದಾಗ ಬಾಯಿ ಮಾಡವನ್ಯಾರ।
ತಾಯಿ ಹಡೆದವ್ವನ ಕಿರಿಮಗ।
ತಾಯಿ ಹಡೆದವ್ವನ ಕಿರಿಮಗ-ನನತಮ್ಮ।
ಬಾಳೀಗಿ ನೀರಹ ಬಿಟ್ಟಾನ ||೬೫೩||

* * *

ವರನುಳ್ಳ ಬೀಗತಳ ಒಳಗ ಸೇದೂ ಭಾವಿ।
ಹಲಗಿ ತೊಟ್ಟೀಲ ಹಸುಗೂಸು।
ಹಲಗಿ ತೊಟ್ಟೀಲ ಹಸುಗೂಸು-ನನತಂಗಿ।
ಪಡೆದು ಬಂದೀದಿ ಶಿವನಲ್ಲಿ ||೬೫೪||

* * *

ಅತ್ತೀಯ ಮನಿಗ್ಹೋಗಿ ಆರು ತಿಂಗಳಾಗಿ।
ಬೆಳದಿಂಗಳು ನಮಗ ಬಿಸಿಲಾಗಿ।
ಬೆಳದಿಂಗಳು ನಮಗ ಬಿಸಿಲಾಗಿ-ನನತಮ್ಮ।
ಬಿಳಿ ಗುದರಿ ಭೀಮ ಕರಿಬಂದ ||೬೫೫||

* * *

ಹಂಡ ಬಣ್ಣದ ಕುದರಿ ಗೊಂಡೇದ ಲಗಾಮು।
ಕಂಡೇನ ಊರ ತೆವರಾಗ।
ಕಂಡೇನ ಊರ ತೆವರಾಗ-ನನ್ನಣ್ಣ।
ದಂಡಾಡಿ ಊರ ಹೊಗತಾನ ||೬೫೬||

ತಮ್ಮಽನ ಕಳುಹೀದ ತಲೆಬಾಗಿಲ್ಲಿ ಡಿದೀದ ।
ಎಲ್ಲಿತ್ತ ಸಣ್ಣ ಜಡಿಮುಽಳಿ ।
ಎಲ್ಲಿತ್ತ ಸಣ್ಣ ಜಡಿಮುಽಳಿ-ತಮ್ಮನ ।
ಬಣ್ಣದ್ರುಮಾಲ ತೊಯ್ದೀತ ||೬೫೭||

* * *

ಮುನವಳ್ಳಿ ಮುಂದೀನ ವನವ ಕಂಡೀರಕ್ಕಾ ।
ತನುವೀಗಿ ಅಳ್ಳ್ಯಾವ ಹೂಮುಗ್ಗಿ ।
ತನುವೀಗಿ ಅಳ್ಳ್ಯಾವ ಹೂಮುಗ್ಗಿ-ನನಚಲುವ ।
ತಮ್ಮಗೊಡದಾವ ವೊಕ ಮೀಶಿ ||೬೫೮||

* * *

ಕೋಪವ್ಯಾಕಣ್ಣಯ್ಯ ಕೊಳ್ಳೊ, ಕಾಲಿಗೆ· ನೀರ ।
ಬಾಯ ತಂಬುಲವ ಉಗಳಣ್ಣ ।
ಬಾಯ ತಂಬುಲವ ಉಗಳಣ್ಣ-ನೀ ಬರುವ
ದಾರೀಯ ನೋಡಿ ಬಡವಾದೆ ||೬೫೯||

ಬಾವೂಲಿ ಇಟಗೊಂಡು ಕಾವೂಲಿ ತಿದ್ದೂವ ।
ಗಾಳಿ ಬಂದತ್ತ ಬಳುಕೂವ ।
ಗಾಳಿ ಬಂದತ್ತ ಬಳುಕೂವ-ನನತಮ್ಮ ।
ಬಾಳಿ ಎಲಿಗಿಂತ ಬಲುಚಲುವ ||೬೬೦||

ತೋಟಕ್ಕ ಹೋದಣ್ಣ ಊಟಕ್ಕ ಬರಲಿಲ್ಲ ।
ತೋಟಽದ ಹೂವ ತಲಿತುಂಬ ।
ತೋಟಽದ ಹೂವ ತಲಿತುಂಬ-ಇಟಗೊಂಡು ।
ಊಟದ್ದುಂಬಲ ಮರತಾನ ||೬೬೧||

ಹಂತೀಯ ನಮ್ಮತ್ತು ಹಂತೀಲಿ ಬಂದಽರ ।
ಸೆರಗೀಲಿ ಸುಂಕ ವರಿಸೇನ ।
ಸೆರಗೀಲಿ ಸುಂಕ ವರಿಸೇನ-ತಮ್ಮಽನ ।
ಹಂತೀಯ ಎತ್ತು ಹದಿನಾರ ||೬೬೨||

ಅಕ್ಕನ ಊರಾಗ ಮೆಕ್ಕೀಯ ಫಡದಾಗ ।
ಗಕ್ಕನೆ ಬಾರೋ ಮಳಿರಾಜ ।
ಗಕ್ಕನೆ ಬಾರೋ ಮಳಿರಾಜ–ನನ್ನಕ್ಕ ।
ಮಕ್ಕಳ ತಾಯಿ ಮರಗ್ಯಾಳೋ ||೬೬೩||

* * *

ಎಳೆಹುಲ್ಲು ಅಡಿವ್ಯಾಗ ತಿಳಿನೀರು ಕೊಳದಾಗ ।
ಬಲವುಳ್ಳ ನಾಯಿ ಸಾಕ್ಯಾನ ।
ಬಲವುಳ್ಳ ನಾಯಿ ಸಾಕ್ಯಾನ-ನನತಮ್ಮ ।
ಒನಪೀಲೆ ಕುರಿಯ ಕಾಯ್ದಾನ ||೬೬೪||

* * *

ಊರ ಮ್ಯಾಗಲ ಊರ ದಾರಿ ಮ್ಯಾಗಲ ಮನೆಯ ।
ಬಾರದ್ಯಾಕ್ಹೋದಿ ನನ್ನಣ್ಣ ।
ಬಾರದ್ಯಾಕ್ಹೋದಿ ನನ್ನಣ್ಣ–ನಿನಮಡದಿ ।
ಬ್ಯಾಡಂದಳೇನೋ ನನ ಮನಿಗೆ ||೬೬೫||

* * *

ಅರಿಸೀಣ ಬಳ್ಳೊಳ್ಳಿ ಸಬಸಿ ಬಿತ್ತ್ಯಾನ ಬಾಳಾ ।
ವರುಷದ ಬಾಣತಿ ನಿನ ತಂಗಿ ।
ವರುಷದ ಬಾಣತಿ ನಿನ ತಂಗಿ–ಎರೆದ ನೀರ ।
ಅರಿಷೀಣ ಬನಕ ಹರಿದಾವ ||೬೬೬||

* * *

ಅಣ್ಣ ತಮ್ಮರ ಜಗಳ ನಿನ್ನೆ ಮೊನ್ನ್ಯಾಗ್ಯಾವ ।
ಬಣ್ಣ ಬಾಗೀಲ ಎರಡಾಗಿ ।
ಬಣ್ಣ ಬಾಗೀಲ ಎರಡಾಗಿ–ಕಡೆಮಗನ ।
ಸಣ್ಣವನಾಗಿ ಸರಕೋಳೋ ||೬೬೭||

ಯಾಲಕ್ಕೀ ಮಾಟದ ಎರಡಂಗೀ ತೊಟ್ಟಾನ ।
ಎಲಿಬಳ್ಳಿಯೊಳಗ ಸುಳಿದಾನ ।
ಎಲಿಬಳ್ಳಿಯೊಳಗ ಸುಳಿದಾನ-ನನತಮ್ಮ ।
ಎಲಿಗೊಂದ ಮಾತ ಒಗೆದಾನ ||೬೬೮||

ಹಸುಗೂಸು ಕಾಡಿವರ ತುಸು ಕೆಲಸ ನಡೆಯುದ ।
ಹಸಿದು ಬಂದಣ್ಣ ಉಣಲಿಲ್ಲ ।
ಹಸಿದು ಬಂದಣ್ಣ ಉಣಲಿಲ್ಲ–ನನ ಮನಿಯು ।
ಕಸ್ತೂರಿ ಕೈಯ ಬಿಡಲಿಲ್ಲ ||೬೬೯||

* * *

ಅಕ್ಕ-ತಂಗೆರ ಬಣ್ಣ ಅವರಿ ಹೂವಿನ ಬಣ್ಣ ।
ಕುಬುಸದ ಬಣ್ಣ ಕುತನೀಯ ।
ಕುಬುಸ್ದದ ಬಣ್ಣ ಕುತನೀಯ-ಹಡೆದಂಥ ।
ನಾರಿ ನಿನ ಬಣ್ಣ ರವಿ ಚಿನ್ನ ||೬೭೦||

* * *

ಅತ್ತಿಗೆಯ ಅರಸೇನ ತಾಯಿ ಕುಮಾರೇನ ।
ಮಕ್ಕಳಿಗಿ ಮಾವ ನನಗಣ್ಣ ।
ಮಕ್ಕಳಿಗಿ ಮಾವ ನನಗಣ್ಣ–ಬಂದರ ।
ನಿಚ್ಚ ದೀವಳಿಗಿ ಮನಿಯಾಗ ||೬೭೧||

* * *

ಬಡತನ ಬಂದರ ಬಾಗಿಕೊಂಡಿರೂವೇನು ।
ಬಾರೆನಣ್ಣಯ್ಯ ನಿನಮನಿಗೆ ।
ಬಾರೆನಣ್ಣಯ್ಯ ನಿನಮನಿಗೆ-ನಿನಮಡದಿ ।
ಏಳಲ ಮಾಡಿ ನುಡಿದಾಳ ||೬೭೨||

* * *

ಹಾದೀಯ ಮನೆಯಾಕಿ ಹರದಿ ನನ ತಂಗೆವ್ವ ।
ಹಾದಿ ಬಿಡು ನನಗ ಹಸಿವಿಲ್ಲ ।
ಹಾದಿ ಬಿಡು ನನಗ ಹಸಿವಿಲ್ಲ–ಬಗಲಾನ ।
ಬಿಂದೂಲಿ ಬಾಲಗ ಬಿಸಿಲಾತು ||೬೭೩||

* * *

ಗಂಧದ ಹಚ್ಚ್ಯಾನ ಗಾಳೀಗಿ ನಿಂತಾನ ।
ಒಂದೊಂದ ಹೇಳಿ ನಗತಾನ ।
ಒಂದೊಂದ ಹೇಳಿ ನಗತಾನ–ನನ ತಮ್ಮ ।
ಭಿಂಗ್ಯಾರಾಟ್ಲೆ ಕಲಿತಾನ ||೬೭೪||

ಊರಿಗೆ ಹೋಗವರ ಉಸ್ತಾರೇನ್ಹೇಳಲಿ ।
ಕಸ್ತೂರಿ ಅಂಗಿ ಬಗಲಾಗ ।
ಕಸ್ತೂರಿ ಅಂಗಿ ಬಗಲಾಗ–ನನತಮ್ಮ ।
ಉಸ್ತಾರ್‍ಯಾಗೂಟ ಮರತಾನ ॥೬೭॥

* * *

ಕಣ್ಣು ಮೂಗಿಲೆ ನನ್ನ ಹೆಣ್ಣಮಗಳು ಚೆಲುವಿ ।
ಬಣ್ಣಕ ನನ್ನ ಸೊಸಿ ಚಲುವಿ ।
ಬಣ್ಣಕ ನನ್ನ ಸೊಸಿ ಚಲುವಿ--ದಸರೇಕ ।
ಬನ್ನಿ ಮುಡಿವಾಗ ಮಗಚಲುವ ॥೬೭॥

* * *

ಬೀಸಲಾರದೆ ಹೋಗಿ ಬೀದ್ಯಾಗ ನಿಂತೇನ ।
ದೇಸಾಯಿ ಅಣ್ಣ ಕರೆದೊಯ್ಯೋ ।
ದೇಸಾಯಿ ಅಣ್ಣ ಕರೆದೊಯ್ಯೋ–ನಿನಮನಿಯ ।
ಕೂಸೆತ್ತಿ ಹೊತ್ತು ಗಳದೇನ ॥೬೭॥

* * *

ಕೂಸನಾದರು ಎತ್ತಿ ಏಸುದಿನ ಕಳಿದೆವ್ವ ।
ಲೇಸ್ಹೋಗು ನಿನ್ನ ಒಗತನ ।
ಲೇಸ್ಹೋಗು ನಿನ್ನ ಒಗತನ–ಕಿದ್ದರ ।
ಏಸೊಂದು ಬಂಣ ಉಡಿಸೇನ ॥೬೭॥

* * *

ಅಣ್ಣನ ಮನೀಗೆ ಹೆಣ್ಣು ಬೇಡಲು ಹೋದೆ ।
ಕನ್ನಡಿ ಗೋಡಿ ಮರಿ ಮಾಡಿ ।
ಕನ್ನಡಿ ಗೋಡಿ ಮರಿ ಮಾಡಿ–ಅತ್ತೀಗಿ ।
ಕಣ್ಣು ಚಿವುಟ್ಯಾಳ ಪುರುಷನ ॥೬೭॥

* * *

ಕಣ್ಣು ಚಿವುಟಲಿ ಬ್ಯಾಡ ನಿನ್ಹೆಣ್ಣು ನಾನೊಲ್ಲೆ ।
ಅನ್ನಿಗರ ಮಗಳು ಅತಿ ಚಲುವಿ ।
ಅನ್ನಿಗರ ಮಗಳು ಅತಿ ಚಲುವಿ–ಮಾಡಿಕೊಂಡು ।
ನಿನ್ನೂರ ಮ್ಯಾಲ ಬರುವೇನ ॥೬೮೦॥

ಕೆಂಪsನ ಹೆಣ್ಣೀಗೆ ಸಂಪೀಗೆ ತೆನಿಯೆಂದ
ಅಂತರಲೆ ಬೆಳೆವ ಎಳೆ ಹುಣಚಿ।
ಅಂತರಲೆ ಬೆಳೆವ ಎಳೆಹುಣಚಿ-ಕಾಯೀಗಿ।
ಎಂಥವರೂ ಬಾಯಿ ಬಿಡತಾರ ||೬೮೧||

ಕರ್ರ ನ ಹೆಣ್ಣೀಗಿ ಕಮಲದ ಹೂವೆಂದ।
ಕರಲಾಗ ಬೆಳೆವ ಕಡಲೀಯು।
ಕರಲಾಗ ಬೆಳೆವ ಕಡಲೀಯು–ಗಿಡಕಾಗಿ।
ಧೊರಿಯ ಮಗ ತೇಜಿ ಇಳದಾನ ||೬೮೨||

* * *

ಹಂಪೀಯು ತೇರೀಗಿ ಹೊಂದಿನಿಂತವಳ್ಯಾರ।
ಚಂದಾಳದ ಗೊಂಬಿ ನನ ತಂಗಿ।
ಚಂದಾಳದ ಗೊಂಬಿ ನನ ತಂಗಿ–ನಿಂತsರ।
ಚಂದಪ್ಪಗ ಛಾಯ ಹಿಡಿಥಂಗ ||೬೮೩||

* * *

ಸೀತಾಳ ಕೊಡಪಾನ ಶಿವಯೋಗಿ ಪಾವೂಡ।
ಶೀಲವಂತೆವ್ವ ನನತಂಗಿ।
ಶೀಲವಂತೆವ್ವ ನನತಂಗಿ–ಬರುವಾಗ।
ಶಿವ ತನ್ನ ಸದರ ಇಳದಾನ ||೬೮೪||

* * *

ಗಿಂಡಿ ತೋರಣಕಾಗಿ ಬಂದsಗಂಡನ ತಂಗಿ।
ತೆಂಗು ಬಾಳೀಯ ಅಡಿಕೇಯು।
ತೆಂಗು ಬಾಳೀಯ ಅಡಿಕೇಯು-ತೋರಣಕಾಗಿ।
ಬಂದು ಬಾಗೀಲ ತಡೆದಾಳ ||೬೮೫||

* * *

ಕರಿಯ ಸೀರಿಯ ನುಟ್ಟು ಕೆರಿಯನೀರಿಗೆ ಹೋದೆ।
ಬೆಲೆಯ ಕೇಳ್ಯಾರ ಬಲುಮಂದಿ।
ಬೆಲೆಯ ಕೇಳ್ಯಾರ ಬಲುಮಂದಿ–ನನ್ನೂರ।
ದೊರೆ ಮೋಜಿನಣ್ಣ ಉಡಿಸ್ಯಾನ ||೫೮೬||

ಬಾರೊ ಬಾರೊ ನನ್ನ ಬಣ್ಣದೊಲ್ಲಿಯ ತಮ್ಮ ।
ಹ್ಯಾಂಗ ಬರಲೆಕ್ಕ ಬರಿಗೈಲಿ ।
ಹ್ಯಾಂಗ ಬರಲೆಕ್ಕ ಬರಿಗೈಲಿ–ನೀನಿಟ್ಟ ।
ವಾಲೀಗೆ ತರುವೆ ಬಿಡಿ ಮುತ್ತ । ॥೬೮೭॥

* * *

ನನಗ ಯಾರಿಲ್ಲೆಂದು ಮನದಾಗ ಮರುಗೀದೆ ।
ಪರನಾಡಾಗೊಬ್ಬ ಪ್ರತಿಸೂರ್ಯ ।
ಪರನಾಡಾಗೊಬ್ಬ ಪ್ರತಿಸೂರ್ಯ–ನನ್ನಣ್ಣ ।
ಬಿದಿಗೆ ಚಂದ್ರಾಮಾ ಉದಯಾದಾ ॥೬೮೮॥

* * *

ಅಕ್ಕನ ಮಗ ಬಂದಾ ಹುಕ್ಕೇರಿ ದೊರಿ ಬಂದ ।
ಸಕ್ಕರೆ ಹೇರ ಹೊಡೆತಂದ ।
ಸಕ್ಕರೆ ಹೇರ ಹೊಡೆತಂದ–ದೊರೆಮಗ ।
ಅಕ್ಕ ಬಾಗೀಲ ತೆಗೆಯಂದ ॥೬೮೯॥

* * *

ಅರಕೆರೇ ಬನ್ನೂರು ಅದು ನನ್ನ ತವರೂರು।
ಸರಕಾನೆ ಕೂಗಿ ಬರತಾನೆ ।
ಸರಕಾನೆ ಕೂಗಿ ಬರತಾನ–ಅಣ್ಣಯ್ಯ ।
ಸರಿಕಾಣೊ ನಿನ್ನ ಥೊರಿತನ ॥೬೯೦॥

* * *

ಆಗಡ ಎಮ್ಮಿಯ ತಂದು ಪಗಡಿಯಾಟಕೆ ಹೋದ ।
ಅಗಡೆಮ್ಮಿ ಹಾಲು ಕೊಡವಲ್ದು ।
ಆಗಡೆಮ್ಮಿ ಹಾಲು ಕೊಡವಲ್ದು–ಅಣ್ಣಯ್ಯ ।
ಪಗಡೆ ಬಿಟ್ಟು ಮನಿಗೆ ಬರವಲ್ಲ ॥೬೯೧॥

* * *

ಬಡಗು ಬಾಗಿನ್ಹಟ್ಟಿ ಬೆಡಗೀನಾ ಪಡಸಾಲೆ ।
ಒರಗಿ ಕೊಂಡೋಲೆ ಬರೆಯುವನೆ ।
ಒರಗಿ ಕೊಂಡೋಲೆ ಬರೆಯುವನೆ–ಅಣ್ಣಯ್ಯ ।
ನಿನ್ನ ಥೊರೆಯೆಂಥು ಕೈಯ ಮುಗಿದಾರೊ ॥೬೯೨॥

ಸೇವಂತಿಗೆ ದುರ್ಗದ ರಾಣ್ಯಾದ ತಮ್ಮಯ್ಯ
ರಾಣಿಯು ಬಿಟ್ಟು ಬರೆನೆಂದು ।
ರಾಣಿಯು ಬಿಟ್ಟು ಬರೆನೆಂದು-ತಾಕೊಟ್ಟ ।
ಕತ್ತಿಯ ಮ್ಯಾಲೆ ರುಜ ಬರೆದ ||೬೯೩||

ಸಂಪೀಗೆ ಹೂವೀಗೆ ಸುಂಪಿಲ್ಲ ನಮ ಮಂಡೆ ।
ಸಂತೀಗೆ ಹೋದ ಹಿರಿಯಣ್ಣ ।
ಸಂತೀಗೆ ಹೋದ ಹಿರಿಯಣ್ಣ-ಬರುತನಕ ।
ಸಂತೋಷವಿಲ್ಲ ಮನದಾಗ ||೬೯೪||

* * *

ಅಕ್ಕ ತಂಗೇರು ನಾವು ಹೆಚ್ಚೀನ ಗರತೇರು ।
ಸಕ್ಕರೆಯ ನಡುವೆ ಕರಿಎಳ್ಳು ।
ಸಕ್ಕರೆಯ ನಡುವೆ ಕರಿಎಳ್ಳು-ಹೊಯ್ದಂತೆ ।
ಅಕ್ಕಮ್ಮ ಗುರುತ ನರಿಯೂಳು ||೬೯೫||

* * *

ಅಣ್ಣ ತಮ್ಮನ ಬಿಲ್ಲು ನಿಂತವಂಗಳದಲ್ಲಿ ।
ಅಣ್ಣನಿದ್ದ ತಮ್ಮ ಕಡು ಪಾಪಿ ।
ಅಣ್ಣನಿದ್ದ ತಮ್ಮ ಕಡು ಪಾಪಿ-ಬಿಲ್ಹೋಗಿ ।
ನಿಂತsನು ಬ್ಯಾಸಿಗಿ ಬಿಸಲಾಗ ||೬೯೬||

* * *

ನಾರಿ ಮಂಡೆಯ ಕೂದಲು ಆರುದ್ದ ಮೂರುದ್ದ ।
ಇನ್ನ್ಯಾರು ಕಟ್ಟಲರಿಯೂರು ।
ಇನ್ನ್ಯಾರು ಕಟ್ಟಲರಿಯೂರು-ತಂಗೆವ್ವ ।
ಅಕ್ಕವ್ವನ ಬೇಗ ಕರೆತಾರ ||೬೯೭||

* * *

ತಂಗೀಯ ಕರೆತಾರೊ ಹಿಂಗಾರ ಮುಡಿಯುವಳ ।
ಲಿಂಗಕಗ್ನಿಯ ನಿಡುವವಳ ।
ಲಿಂಗಕಗ್ನಿಯ ನಿಡುವವಳ-ತಂಗೀಯ ।
ತಿಂಗಳಿಗೊಂದು ಸಾರೆ ಕರೆತಾರೋ ||೬೯೮||

ಅಗಸೀಯ ಹೊಳಿಯಾಗ ಜಗತರದ ಮಲ್ಲೀಗಿ ।
ಕೊಯ್ತಾಳ ತನ್ನ ಸೆರಿ ತುಂಬ ।
ಕೊಯ್ತಾಳ ತನ್ನ ಸೆರಿ ತುಂಬ-ನಿನ್ನಕ್ಕನ್ಮಗಳು ।
ಬಕ್‌ತಲಿ ಮುಟ್ಟಿ ಮುಡಿವಳು ||೯೯||

* * *

ಕಾಸ್ಗನ ಕಾಯಿಯ ಕಾಲೋಳ್ತೂರುವನಾರೊ ।
ಹಾಸ್ಯಗಾರ ನನ್ನ ಮೈದೂನ ।
ಹಾಸ್ಯಗಾರ ನನ ಮೈದೂನ-ಮಾವನ ಮಗ ।
ಹಾಸ್ಯ ಮಾಡುವನು ಪರ ಹೆಣ್ಣ ||೨೦೦||

*

ಅಕ್ಕಿ ಸಣ್ಣೊರಳೀಗೆ ಮುತ್ತು ಸಣ್ಣ ಕೊರಳೀಗೆ ।
ನೇಪಳ ಸಣ್ಣ ನಡುವೀಗೆ ।
ನೇಪಳ ಸಣ್ಣ ನಡುವೀಗೆ--ತಮ್ಮಾನು ।
ಮಾವನ ಮಗಳು ಮನಸೆಂದ ||೨೦೧||

* * *

ತಂಗೀಯ ಕಳುವ್ಯಾನ ತೆವರೇರಿ ನಿಂತಾನ ।
ಅಂಗೀಲಿ ನೀರ ಒರಿಸ್ಯಾನ ।
ಅಂಗೀಲಿ ನೀರ ಒರಿಸ್ಯಾನ-ನನ್ನಣ್ಣ ।
ಇಂದೀಗೆ ತಂಗಿ ಎರವೆಂದ ||೨೦೨||

* * *

ಬೀಗ ಬರತಾನಂತ ಬೀದಿಯ ಉಡುಗೀದ ।
ಕೊಯ್ದು ಮಲ್ಲೀಗಿ ಹರಡೀದ ।
ಕೊಯ್ದು ಮಲ್ಲೀಗಿ ಹರಡೀದ-ನನತಮ್ಮ ।
ಬೀದೀಯ ನೋಡಿ ಬೆರಗಾದ ||೨೦೩||

* * *

ಯಾಲಕ್ಕೀ ಮಾಟದ ಎರಡಂಗಿ ತೊಟ್ಟಾನ ।
ಎಲಿ ಬಳ್ಳಿಯೊಳಗ ಸುಳಿದಾನ ।
ಎಲಿ ಬಳ್ಳಿಯೊಳಗ ಸುಳಿದಾನ-ನನತಮ್ಮ ।
ಎಲಿಗೊಂದ ಮಾತ ಒಗೆದಾನ ||೨೦೪||

ಮಾರೂವ ಸಂಜೀಗೆ ಚಂದರವ ಬೆಳಕಿಲ್ಲ ।
ಯಾರು ಬರತಾರ ನನ ಮನಿಗೆ ।
ಯಾರು ಬರತಾರ ನನ ಮನಿಗೆ–ತಮ್ಮಾನ ।
ರಾಜ ಪಂಡಿತನ ಗೆಳೆಯರು ||೭೧೧||

* * *

ಜಂಬ ನನ ತಮ್ಮಯ್ಯ ಬಿಳಿಜ್ವಾಳಾ ತೂರ್‍ಯಾನ ।
ಸುಂಕ ಹಾರ್‍ಯಾವು ಸುರಪುರಕ ।
ಸುಂಕ ಹಾರ್‍ಯಾವು ಸುರಪುರಕ--ಬಾಲೇರು ।
ಸುಂಕ ನೋಡುತಲೆ ಬೆರಗ್ಯಾರೊ ||೭೧೨||

* * *

ಗಂಡ ಹೆಂಡಿರ ಜೋಡು ದುಂಡು ಮುತ್ತಿನ ಜೋಡು ।
ಗಂಡೆರಳಿ ಜೋಡು ಅಡಿವ್ಯಾಗ ।
ಗಂಡೆರಳಿ ಜೋಡು ಅಡಿವ್ಯಾಗ-ನನಬಾಲಾ ।
ನೀ ಜೋಡು ನನಗ ಮನಿಯಾಗ ||೭೧೩||

* * *

ಹಗಲು ಅಣ್ಣೀ ಸೊಪ್ಪು ಇರುಳು ಗೋಣಿಸೊಪ್ಪು ।
ನಿನೆ ಮೊನ್ನೆ ನೆಟ್ಟ ಹೊನೆ ಗೊನೆ ।
ನಿನೆ ಮೊನ್ನೆ ನೆಟ್ಟ ಹೊನೆಗೊನೆ-ಸೊಪ್ಪೀಗೆ ।
ವಾರಗಿತ್ಯಾರ ಹೊಡೆದಾಟ ||೭೧೪||

* * *

ವೈದೂನ ಮತಿವಂತ ನನಕೂಡ ಮಾತಿಲ್ಲ ।
ಏನು ಅಂದಿಲ್ಲ ಅವರೀಗೆ ।
ಏನು ಅಂದಿಲ್ಲ ಅವರೀಗೆ-ಒಳಗೀನ ।
ವೈರಿ ಹೇಳ್ಯಾಳ ಒಳಮಾತ ||೭೧೫||

* * *

ನಾದುನೊಳ್ಳೆವಳೆಂದು ಹಾದ್ಯಾಗ ಮನಿಕೊಟ್ಟೆ ।
ನಾಯೀಗೆ ಮುದ್ದೆ ಹೊರುವೋಳ ।
ನಾಯೀಗೆ ಮುದ್ದೆ ಹೊರುವೋಳ-ಕಂಡೇರೆ ।
ನಾಡಿಗೆಲ್ಲ ಆಸೆ ಅವಳ್ಮ್ಯಾಲೆ ||೭೧೬||

ಸಣ್ಣ ಸೀರೆಯವಳೆ ಸವತಿ ಮತ್ಸರದವಳೆ ।
ನನ ಕಂಡು ಮಾರಿ ತಿರವವಳೆ ।
ನನಕಂಡು ಮಾರಿ ತಿರವವಳೆ-ಸವತೀಯೆ ।
ನನ ಕಂಡರ್ಯಾಕ ಮುಖ ಮುನಿಸು ॥೭೧೭॥

* * *

ಅತ್ತೀಗಿ ನನ ಕುಲನ ಒತ್ತರಿಸಿ ಕೇಳ್ಯಾಳ ।
ಹತ್ತು ಸಾವಿರದ ಹಡಗೀನ ।
ಹತ್ತು ಸಾವಿರದ ಹಡಗೀನ-ಮ್ಯಾಲ್ಬರುವ ।
ಮುತ್ತಿಗಿಂತ ನನ್ನ ಕುಲ ಮೇಲು ॥೭೧೮॥

* * *

ಅಣ್ಣ ನಿನ್ನs ಹೆಂಡ್ತಿ ಅರೆಮೂಗಿ ಕೊರೆ ಮೂಗಿ ।
ನಾ ಬಂದ್ರೆ ಕಾಲ ಮುದುರಾಳು ।
ನಾ ಬಂದ್ರೆ ಕಾಲ ಮುದುರಾಳು-ಅಣ್ಣಯ್ಯ ।
ನೀವೆಲ್ಲಿ ತಂದ್ರಿ ಚಲುವೀಯ ॥೭೧೯॥

* * *

ಮಾಡಬಾರದ ಕೆಲಸ ಮಾಡಂದಾಳತ್ತೆವ್ವ ।
ಕರಡಿಕಟ್ಟೆ ಹಾಲು ಹಿಂಡೆಂಬಳು ।
ಕರಡಿಕಟ್ಟೆ ಹಾಲು ಹಿಂಡೆಂಬಳು-ದೇವರೇ ।
ಹುಲಿಯ ಮುಂಗಾಲು ಹಿಡಿಯೆಂಬsಳು ॥೭೨೦॥

* * *

ಚಿಕ್ಕ ಹೆಂಡತಿ ಕೂಡ ಚಕ್ಕಂದ ವಾಡೂವ ।
ಬೆಕ್ಕಿಗಿಲಿಯಂತೆ ನಡುಗೂವ ।
ಬೆಕ್ಕಿಗಿಲಿಯಂತೆ ನಡುಗೂವ-ಮಾರಾಯ ।
ಹೆತ್ತವರ ಗುರುತ ಮರೆತಾನು ॥೭೨೧॥

ಕರಿಯ ಸೀರೆಯ ತಂದು ಕೊರಳಿಗ್ಹಾರವಹಾಕಿ ।
ಕರದಲ್ಲಿ ಹಣದ ಗಂಟನ್ನು ।
ಕರದಲ್ಲಿ ಹಣದ ಗಂಟನ್ನು-ಇಟ್ಟsರು ।
ಕಿರಿಯವಳು ಮನದಿ ಮರುಗsಳು ॥೭೨೨॥

## ಮಕ್ಕಳು ಮೊಮ್ಮಕ್ಕಳು ಬಸಿರು-ಬಯಕೆ

ಆಡೂ ಮಕ್ಕಳ ಕಂಡು ಬೇಡಿತ್ತ ನನಜೀವ ।
ಕೇಳಿದ್ದನೇನ ಶಿವರಾಯ ।
ಕೇಳಿದ್ದನೇನ ಶಿವರಾಯ--ಹೊಟ್ಯಾಗ ।
ಮೂಡಿದ್ದನೇನ ಮಗರಾಮ ||೭೧೩||

* * *

ನಾಕು ತಿಂಗಳ ಬಸಿರ ನಾಕೇಳಿ ನೀಕೇಳಿ ।
ನೀರ ಹೊಳಿ ಕೇಳಿ ನಿಜವಾಗಿ ।
ನೀರ ಹೊಳಿ ಕೇಳಿ ನಿಜವಾಗಿ–ಮನಿಯಾನ ।
ಮಾವ ಕೇಳಿ ಹೂವ ಮುಡಿಸ್ಯಾರ ||೭೧೪||

* * *

ಮಾವೀನ ಮಿಡಿ ತಂದು ಮಾವ ಉಡಿಯಾಗ್ಹಾಕಿ ।
ಮಾಯಽದ ಮಕ್ಕಳ್ಹಡಿಯೆಂದು ।
ಮಾಯಽದ ಮಕ್ಕಳ್ಹಡಿಯೆಂದು--ಹಿಗ್ಗೀಲಿ ।
ಮಾವ ಬಂದು ಹರಿಕೀ ಕೊಡತಾರ ||೭೧೫||

* * *

ದೇವಽರ ಮನಿಯಾಗ ಜೋಡೆರಡು ದೀವಿಗಿ ।
ದ್ವಾರೇದ ಕೈಯ ತಲೆದಿಂಬ ।
ದ್ವಾರೇದ ಕೈಯ ತಲೆದಿಂಬ--ಮಾಡಿಕೊಂಡು ।
ಕಂದಽನ ಹಡದು ಮಲಗ್ಯಾಳ ||೭೧೬||

* * *

ಬ್ಯಾನೀಯ ತಿನುವಾಗ ಬ್ಯಾಡವ್ವ ಮಕ್ಕಳು ।
ಬಾಗಿ ಬಚ್ಚಲಕ ಹೋಗುವಾಗ ।
ಬಾಗಿ ಬಚ್ಚಲಕ ಹೋಗುವಾಗ--ಬಯಸ್ಯಾರ ।
ನೂರೊಂದು ಫಲವ ಕೊಡು ಶಿವನೆ ||೭೧೭||

ಅತ್ತsರ ಅಳಲೆವ್ವ--ಈ ಕೂಸು ನನಗಿರಲಿ ।
ಕೆಟ್ಟsರ ಕೆಡಲಿ ಮನಿಗೆಲಸ ।
ಕೆಟ್ಟsರ ಕೆಡಲಿ ಮನಿಗೆಲಸ--ಕಂದನಂಥ ।
ಮಕ್ಕಳಿರಲೆವ್ವ ಮನಿತುಂಬ ॥೭೮॥

* * *

ಆಡಿ ಬಾ ನನಕಂದ ಅಂಗಾಲು ತೊಳದೇನ ।
ತೆಂಗೀನ ಕಾಯಿ ತಿಳಿ ನೀರ ।
ತೆಂಗೀನ ಕಾಯಿ ತಿಳಿನೀರ--ತಕ್ಕೊಂಡು ।
ಭಂಗಾರ ಮಾರಿ ತೊಳದೇನ ॥೭೯॥

* * *

ಅಂಗೀ ತೊಡುವ ಬಾಳಾ ಎಂದಿಗಾದಾನೆಂದು ।
ಕಂಡ ದೇವರಿಗೆ ಕೈ ಮುಗಿದು ।
ಕಂಡ ದೇವರಿಗೆ ಕೈ ಮುಗಿದು–ನನಬಾಳಾ ।
ಎಂದಿಗಾದಾನು ಪರಬುದ್ಧಾ ॥೮೦॥

* * *

ಕೂಸು ಇದ್ದ ಮನೀಗೆ ಬೀಸಣಿಕಿ ಯಾತsಕ
ಕೂಸು ಕಂದವ್ವ ಒಳ ಹೊರಗ ।
ಕೂಸು ಕಂಡವ್ವ ಒಳ ಹೊರಗ--ಆಡಿದರ ।
ಬೀಸಣಿಕಿ ಗಾಳಿ ಸುಳಿದಾವ ।೮೧।

* * *

ಎಲ್ಲ್ಯಾರೆ ಇರಲೆವ್ವ ಹುಲ್ಲಾಗಿ ಬೆಳೆಯಲಿ ।
ನೆಲ್ಲಿ ಬಡ್ಯಾಗಿ ಚಿಗಿಯsಲಿ ।
ನೆಲ್ಲಿ ಬಡ್ಯಾಗಿ ಚಿಗಿಯsಲಿ--ಕಂದಯ್ಯ ।
ಜಯವಂತನಾಗಿ ಬೆಳಿಯsಲೀ ॥೮೨॥

* * *

ಹೆಣ್ಣು ಹುಟ್ಟಿದ ಮನಿ ಹೆಗ್ಗಣ್ಣತ್ತೀಧಾಂಗ ।
ಗಂಡಸ ಮಗ ಗಜ ಭೀಮ ।
ಗಂಡಸ ಮಗ ಗಜ ಭೀಮ–ಹುಟ್ಟಿದರ ।
ಚಿಲಕಿ ಚಿತ್ತಾರ ನಗತಾವ ॥೮೩॥

ಹೆಣ್ಣು ಹುಟ್ಟೇತಂತ ಹೇಳಿ ಕಳುಹಲು ಬ್ಯಾಡ ।
ಹೆಣ್ಣೆಂದರವರು ಹೆದರ್ಯಾರ ।
ಹೆಣ್ಣೆಂದರವರು ಹೆದರ್ಯಾರ-ಕಂದವ್ವ ।
ಹೆಣ್ಣಲ್ಲ ನಮುಗ ರವಿಚಿನ್ನ ॥೨೩೪॥

* * *

ಅಕ್ಕ ತಂಗೇರ ಆಟ ಬೆಕ್ಕೀನ ಚಲ್ಲಾಟ ।
ಪಕ್ಷಿ ನಿನ್ನಾಟ ವನದಾಗ ।
ಪಕ್ಷಿ ನಿನ್ನಾಟ ವನದಾಗ--ಹಡೆದವ್ವ ।
ಮೊಮ್ಮಕ್ಕಳಾಟ ಮನಿಯಾಗ ॥೨೩೫॥

* * *

ಹತ್ತು ಹಡಿಯುದಕಿಂತ ಮುತ್ತೊಂದ ಹಡದೇನಿ ।
ಎತ್ತಿಕೋ ತಮ್ಮ ಬಗಲಾಗ ।
ಎತ್ತಿಕೋ ತಮ್ಮ ಬಗಲಾಗ--ನನತಮ್ಮ ।
ಮುತ್ತೀನ ಶಿಲ್ಲೀವ ಮರಿಮಾಡ ॥೨೩೬॥

* * *

ಅಣ್ಣಗೇರಿ ಮುತ್ತು ಎಡಕೊಂದು ಬಲಕೊಂದು ।
ಛಾಯುಽದ ಮುತ್ತು ಚಳತುಂಬ ।
ಛಾಯುಽದ ಮುತ್ತು ಚಳತುಂಬ-ಅಮರೇಶ ।
ನ್ಯಾಯುಽದ ಮುತ್ತು ನಡಿ ಮನೀಗೆ ॥೨೩೭॥

* * *

ನಡಿಯವ್ವ ನನಮಗಳ ನಡಿಗೀಯ ನೋಡ್ಯಾನ ।
ಎಡಗಾಲ ಮ್ಯಾಲ ಪದುಮವ ।
ಎಡಗಾಲ ಮ್ಯಾಲ ಪದುಮವ--ಪಾವಿನಗೆಜ್ಜಿ ।
ನಡೆದುಽರ ನನಮನೆಗೆ ನುಡದಾಳ ॥೨೩೮॥

* * *

ನನ ಅಣ್ಣನ ಮಗಳೆ ನನ್ನ ಹೋಲಲಿ ಬ್ಯಾಡ ।
ನನ್ನಲ್ಲಿ ಭಾರಿ ಗುಣವಿಲ್ಲ ।
ನನ್ನಲ್ಲಿ ಭಾರಿ ಗುಣವಿಲ್ಲ--ಹೇಮರಡ್ಡಿ ।
ಮಲ್ಲಮ್ಮನ ಹೋಲ ನನ ಸೊಸಿಯು ॥೨೩೯॥

ಹೆಣ್ಣs ಹಡದಿನಿ ತಾಯಿ ಬಣ್ಣsದ ಗೌರೀನ ।
ನನ್ನs ಕೂಡ್ರಿಸಿ ಮನಿದಗದಾ ।
ನನ್ನs ಕೂಡ್ರಿಸಿ ಮನಿ ದಗದಾ--ಮಾಡೂವ ।
ಹೆಣ್ಣಲ್ಲ ನನ್ನ ಹಡೆದವ್ವ ||೭೪೦||

* * *

ಹತ್ತು ಗಂಡ್ ಹಡಿದರ ಮತ್ತೆ ಬಂಜಿ ಅನ್ನುವರ ।
ದಟ್ಟೀಯ ಉಡುವ ದ್ರೌಪದೀ ।
ದಟ್ಟೀಯ ಉಡುವ ದ್ರೌಪದೀ–ಹುಟ್ಟಿದರ ।
ಮಕ್ಕಳ ತಾಯಿ ಅನ್ನುವರ ||೭೪೧||

* * *

ಸಾರಿಸಿದ ಮಸಿಯಾಗ ನೀರ್ಯಾರು ಚಲ್ಯಾರ ।
ಪಾರ್ವ್ಯಾಳ ಆಡಿ ಗಿಳಿಯಾಡಿ ।
ಪಾರ್ವ್ಯಾಳ ಆಡಿ ಗಿಳಿಯಾಡಿ–ನನ ಹಡೆದವ್ವ ।
ಮೊಮ್ಮಕ್ಕಳಾಡಿ ಮಲಗ್ಯಾರ ||೭೪೨||

* * *

ಮುದ್ದು ಬಾಯಿಗೆ ಸೇರ ಬುದ್ಧಿ ಕೆಮಿಗ್ಹೋಗ
ಮುದ್ದು ಬಾಲಂಗೆ ಇದು ಶೀಲ ।
ಮುದ್ದು ಬಾಲಂಗೆ ಇದು ಶೀಲ–ನಿನ್ನಂಥ ।
ಮಕ್ಕಳು ಬೇಕೋ ಮನೆತುಂಬ ||೭೪೩||

* * *

ಮುದ್ದು ನೀನಳದೀರು ಎದ್ದಾಗ ಹಾಲುಣ್ಣು ।
ನಿದ್ದೆ ಬಂದಾಗ ಪವಡೀಸು ।
ನಿದ್ದೆ ಬಂದಾಗ ಪವಡೀಸು--ಬಾಳಾ ನೀ ।
ಬುದ್ಧಿ ಬಂದಾಗ ಹರಿದಾಡು ||೭೪೪||

* * *

ಹರೆದಾಡಿ ಬರುವಾಗ ಹರಿಯು ಬ್ರಹ್ಮರು ಕಾಯ್ದು ।
ಹರೆದಾಡಿ ಜಗುಲಲಿ ಇಳಿವಾಗ ।
ಹರೆದಾಡಿ ಜಗುಲಲಿ ಇಳಿವಾಗ--ಕಿರಿಯನ್ನಾ ।
ಮನೆ ದೇವರೇ ಕಾಯ್ಪನನುದೀನಾ ||೭೪೫||

ಕೂಗುವ ಮಕ್ಕಳ ಅರಸ ಕೊಂಡೋಡಿಕ್ಕು ।
ಅರಸುತ್ತ ಬಕ್ಕು ನಿನಮಾವ ।
ಅರಸುತ್ತ ಬಕ್ಕು ನಿನಮಾವ--ತಿಳಿದಾರೆ ।
ಅರಸನ ಘಾಡ ಅಳಕುಗು ||೭೪೬||

* * *

ತೊಟ್ಟಿಲೊಳಗಿನ ಕಂದ ತೋಳ ಬೀಸುವ ಚಂದ ।
ರಟ್ಟೆ ನೊಂದಾವು ಎಲೆಕಂದಾ ।
ರಟ್ಟೆ ನೊಂದಾವು ಎಲೆಕಂದಾ-ನಿಮ್ಮವ್ವ ।
ದೃಷ್ಟಿ ತಗಿಯಾಕ ಅರಿಯುsಳು ||೭೪೭||

* * *

ಕಂಡದ್ದು ಕನಸಾಗಿ ಉಂಡದ್ದು ಸವಿಯಾಗಿ ।
ಕಂದs ನೀಕಾಡಬೇಡೆಂದು ।
ಕಂದs ನೀಕಾಡಬೇಡೆಂದು-ಬೇಡೂವೆ ।
ಕಂದಯ್ಯ ಮಾಡೋ ನಿದ್ದೀಯು ||೭೪೮||

* * *

ಕಂಡೆಲ್ಲಿ ಅಡ್ಯಾನ ಕಡಗೆಲ್ಲಿ ಚಲ್ಲ್ಯಾವ ।
ದುಂಡು ಮುತ್ತೆಲ್ಲಿ ಉದುರ್ಯಾವ ।
ದುಂಡು ಮುತ್ತೆಲ್ಲಿ ಉದುರ್ಯಾವ-ಕಂದsನ ।
ಬಿಂದೂಲಿ ಕಂಡವರು ಕೊಡಿರೆವ್ವ ||೭೪೯||

* * *

ಕಂದsನ ಕಿರಿ ಕಿರಿ ಇಂದೇನ ಹೇಳಲಿ ।
ಬಿಂದೀಗಿ ಹಾಲು ಸುರುವೆಂದ ।
ಬಿಂದೀಗಿ ಹಾಲು ಸುರುವೆಂದ-ಸಂಜೀಯ ।
ಚಂದ್ರಾಮನ ತಂದು ನಿಲಿಸೆಂದಾ ||೭೫೦||

* * *

ಕೂಸು ನೀ ಅಳಬ್ಯಾಡ ಕುಸುಮಲ್ಲಿಗಳಬ್ಯಾಡ ।
ರಾಶಿ ಬಂಗಾರ ಅಳಬ್ಯಾಡ ।
ರಾಸಿ ಬಂಗಾರ ಅಳಬ್ಯಾಡ-ನನಬಾಳ ।
ಬಂಗಾರ ಭಾರ ಬಗಲಾಗ ||೭೫೧||

ನನ್ನ ಅಂಗಳದಾಗ ಮಲ್ಲೀಗಿ ಗಿಡಹುಟ್ಟಿ ।
ಜಲ್ಲೀಸ ಬ್ಯಾಡೋ ಗಿಣಿರಾಮಾ ।
ಜಲ್ಲೀಸ ಬ್ಯಾಡೋ ಗಿಣಿರಾಮಾ-ನಿಮ್ಮಂಥ ।
ಬಾಲರ್ಹೋಗ್ಯಾರ ಜಳಕಕ್ಕ ॥೭೫೨॥

* * *

ಕುಂತಾಡೋ ಮಗಳೀಗಿ ಕೂದಲ ಬಿಟ್ಟೀನ ।
ನಗರದ ಚೌರಿ ತರಿಸೇನ ।
ನಗರದ ಚೌರಿ ತರಿಸೇನ-ಮನಿಯಾನ ।
ತಮ್ಮಗ ಧಾರಿ ಎರದೇನ ॥೭೫೩॥

* * *

ಹಸರಂಗೀ ತೊಡಸಿದ ಹಾಲ್ಗಡಗ ಇಡಿಸೀದ ।
ಹಳ್ಳಕ ನೀನು ಬರಬ್ಯಾಡ ।
ಹಳ್ಳಕ ನೀನು ಬರಬ್ಯಾಡ-ನನಕಂದ ।
ಬೆಳ್ಳಕ್ಕಿ ಹಿಂಡು ಚದರ್ಯಾವ ॥೭೫೪॥

* * *

ಮಕ್ಕಳ ಹಡಿಬೇಕ ಮುತ್ತೊಂದು ಮಾಣೀಕ ।
ಎತ್ತಿಕೋರಿ ಭಾವ ಬಗಲಾಗ ।
ಎತ್ತಿಕೋರಿ ಭಾವ ಬಗಲಾಗ-ನನಕಂದ ।
ಅತ್ತರ ಮುತ್ತು ಉದಿರ್ಯಾವ ॥೭೫೫॥

* * *

ಅತ್ತರ ಕಂದನ ಮುತ್ತ್ಯಾಕ ಉದಿರ್ಯಾವ ।
ಎತ್ತಿಕೋರಿ ಭಾವ ಬಗಲಾಗ ।
ಎತ್ತಿಕೋರಿ ಭಾವ ಬಗಲಾಗ-ಕಂದನ ಬಳಗ ।
ಎತ್ಯಾಡಿ ಮುದ್ದು ಕೊಡತಾರ ॥೭೫೬॥

* * *

ಹಿಂಡ ಮಕ್ಕಳೊಳಗ ಪುಂಡ ನನ ಕಂದಯ್ಯ ।
ದುಂಡ ಮಲ್ಲೀಗಿ ಮರನೇರಿ ।
ದುಂಡ ಮಲ್ಲೀಗಿ ಮರನೇರಿ-ಹೂ ಕೊಯ್ದಾ ।
ಗಂಡುಳ್ಳ ಬಾಲೇರ ತುರುಬೀಗಿ ॥೭೫೭॥

ಹಾಲು ಬೇಡಿ ಅತ್ತಾನ ಕೋಲು ಬೇಡಿ ಕುಣದಾನ ।
ಮಸರ ಬೇಡಿ ಕೆಸರ ತುಳಿದಾನ ।
ಮಸರ ಬೇಡಿ ಕೆಸರ ತುಳಿದಾನ-ಕಂದಯ್ಯನ ।
ಕುಸಲಽದ ಗೆಜ್ಜಿ ಕೆಸರಾಯ್ತು ||೭೫೮||

* * *

ಕೂಸು ನನ ಕಂದಯ್ಯ ಕೇಶ ಬಿಟ್ಟಾಡಾಗ ।
ದೇಶನಿಂದೆರಡು ಗಿಣಿ ಬಂದು ।
ದೇಶದಿಂದೆರಡು ಗಿಣಿಬಂದು-ಕೇಳ್ಯಾವ ।
ಕೂಸ ನೀಯಾರ ಮಗನೆಂದು ||೭೫೯||

* * *

ಬೀಸಲಕ ಕುಂತೇನಿ ಕೂಸ ನನ ತೊಡೀಮ್ಯಾಲಿ ।
ವಾದಸ್ಯಾಡ ಬ್ಯಾಡ ನೆಗೆಣ್ಣಿ ।
ವಾದಸ್ಯಾಡ ಬ್ಯಾಡ ನೆಗೆಣ್ಣಿ-ನಿನಕೆಲಸ ।
ತಾಸೊತ್ತಿನ್ಯಾಗ ತಿರುವೇನ ||೭೬೦||

* * *

ತಂಬಿಟ್ಟು ತಿಳಿದುಪ್ಪ ನಿಂಬಿ ಉಪ್ಪಿನಕಾಯಿ ।
ರಂಭಿ ನನತಂಗಿ ಬಸರಂತ ।
ರಂಭಿ ನನತಂಗಿ ಬಸರಂತ-ಹೇಳ್ಯಾನ ।
ಹಂಪಿ ಸಾಗರದ ಬಣಜೀಗ ||೭೬೧||

* * *

ಕಂದಽ ಹುಟ್ಟುವಾಗ ಕುಂದ್ಯಾವಕ್ಕನ ಮಾರಿ ।
ಕಂದ ಚಂಡಾಡಿ ಬರುವಾಗ ।
ಕಂದ ಚಂಡಾಡಿ ಬರುವಾಗ-ಆ ಮಾರಿ ।
ಕುಂದಲ್ಲರಳಾಗಿ ಹೊಳದಾವ ||೭೬೨||

* * *

ಕೂಡಽಲ ಸಂಗಯ್ಯ ನೀಡು ಮಕ್ಕಳ ನನಗ ।
ನನಗಲ್ಲ ನನ್ನ ಗೆಳತೀಗೆ ।
ನನಗಲ್ಲ ನನ್ನ ಗೆಳತೀಗೆ-ಕೊಟ್ಟಽರ ।
ಬಾಗಿಲಕ ಹೊನ್ನ ಬಡಿಸೇನ ||೭೬೩||

ಬಂಗಾರ ಬಳಿಯೊತ್ತಿ ಪಂಡs ಕಂಕಣವೊತ್ತಿ ।
ಗೊಂಡೇವು ಒತ್ತಿ ಮನಿಗ್ಯಾಳ ।
ಗೊಂಡೇವು ಒತ್ತಿ ಮನಿಗ್ಯಾಳ-ನನತಂಗಿ ।
ದಂಡs ನಾಳವನ ಬಂಕೀಲಿ ॥೭೬೪॥

* * *

ಮಾವsನ ಕುದಿರೀಗಿ ಮೇಲ್ ಹಾಕೋ ನನಮಗನೆ ।
ಮಾವ ನಿನಗೇನು ಕೊಡತಾನ ।
ಮಾವ ನಿನಗೇನು ಕೊಡತಾನ-ತೊಟ್ಟಿಲನ ।
ಮಾದೇವಿಗೆ ಧಾರಿ ಎರದಾನ ॥೭೬೫॥

* * *

ಹೆಣ್ಣೀನ ಹಡದೇನಿ ಬಣ್ಣsದ ಗೌರೀಯ ।
ನನ್ನ ಕೈಯಾನ ತಳಗೀಯ ।
ನನ್ನ ಕೈಯಾನ ತಳಗೀಯ-ತಾಂಬರಗಿಂಡಿ ।
ತಮ್ಮsಗ ಧಾರಿ ಎರದೇನ ॥೭೬೬॥

* * *

ಹೆಣ್ಣು ಜನುಮಕ ಬಂದೆ ಮಣ್ಣು ಮಾಡಲಿ ಬ್ಯಾಡ ।
ಹೆಣ್ಣುತನ ಶಿವನೆ ಜಗದಾಗ ।
ಹೆಣ್ಣುತನ ಶಿವನೆ ಜಗದಾಗ-ಕೈ ಮುಗಿವೆ ।
ಕಂದಯ್ನ ಕೊಟ್ಟು ಕಡಿಮಾಡು ॥೭೬೭॥

* * *

ಕಂದsನ ಕೊಡು ಶಿವನೆ ಬಂದನ ಬಡಲಾಕ ।
ಹಂಗೀನ ಬಾನ ಉಣಲಾರೆ ।
ಹಂಗೀನ ಬಾನ ಉಣಲಾರೆ-ಜನದಾಗ ।
ಬಂಜೆಂಬು ಸಬುದ ಹೊರಲಾರೆ ॥೭೬೮॥

* * *

ನಾಕ ಮಕ್ಕಳ ಕೊಟ್ಟೆ ಸಾಕು ಮಾಡೋ ಶಿವನೆ ।
ನಾಕರ ಮ್ಯಾಲೆ ಆರೂತಿ ।
ನಾಕರ ಮ್ಯಾಲೆ ಆರೂತಿ-ಹಿಡೀಲಾಕ ।
ನಾರೀಯು ಕೊಟ್ಟು ಕಡಿ ಮಾಡೋ ॥೭೬೯॥

ಬಸುರು ಇರುವೆನೆಂದು ಖುಶಿ ಭಾಳ ಮನದಾಗ ।
ಹಡೆವೆ ನಾನೆಂಬ ಹವಣೀಕಿ ।
ಹಡೆವೆ ನಾನೆಂಬ ಹವಣೀಕಿ-ಸಂಗಯ್ಯ ।
ಕರುಣ ತಪ್ಪಿದರ ಮರಣವ ॥೭೭೦॥

* * *

ಕೂಸೊಂದು ಕುಂದಣ ಏಸೊಂದು ಜಾವ್ಗೂಳ ।
ನಾಡೀಗೆ ಜಾಣ ಅಗಸ್ಯಾಲ ।
ನಾಡೀಗೆ ಜಾಣ ಅಗಸ್ಯಾಲ-ಮಾಡ್ಯಾನ ।
ಕೂಸ ಕಂದಯ್ನ ಎರಳೀಲೆ ॥೭೭೧॥

* * *

ಹಾರೈಸಿ ಹಡೆದವ್ವ ಒಳಗೇನು ಮಾಡೂತಿ ।
ನೋಡು ಬಾ ತಾಯಿ ಮಗನಾಟಾ ।
ನೋಡು ಬಾ ತಾಯಿ ಮಗನಾಟಾ-ನನಬಾಳಾ ।
ಗುಲಗಂಜಿ ಗಿಡಕ ಗುರಿಯಿಟ್ಟಾ ॥೭೭೨॥

* * *

ಗದಗೀನ ಪ್ಯಾಟ್ಯಾಗ ಆಡ್ಯಾಳ ಡೊಂಬೂತಿ ।
ನೋಡಿ ಬಂದಣ್ಣ ಉಣವೊಲ್ಲ ।
ನೋಡಿ ಬಂದಣ್ಣ ಉಣವೊಲ್ಲ-ಡೊಂಬೂತಿ ।
ನಾಳೆ ಬಂದಾಡ ನವಿಲಾಟ ॥೭೭೩॥

* * *

ಸಜ್ಜೀಯ ರುಚಿಕೊಟ್ಟ ಸಜ್ಜಕದ ಹೋಳೀಗಿ ।
ಗಜ್ಜರಿ ಚೆಟ್ಟು ಎಳ್ಳೆಣ್ಣಿ ।
ಗಜ್ಜರಿ ಚೆಟ್ಟು ಎಳ್ಳೆಣ್ಣಿ-ತಂಗೆವ್ವ ।
ಗುಜ್ಜಿ ನಿನ ಬಯ್‌ಕಿ ತಿಳಿಯಾವ ॥೭೭೪॥

* * *

ಕರಿಯಂಗಿ ಕಸೂತಿ ತಲೆತುಂಬ ಜಾವ್ಗೂಳ ।
ಅಂಗಳದಾಗ ನವಿಲಾಟ ।
ಅಂಗಳದಾಗ ನವಿಲಾಟ-ಅದಕಿಂತ ।
ಮಲ್ಲಯ್ಯನಾಟ ವಿಪರೀತ ॥೭೭೫॥

ಹವ್ವಲ್ಲಿ ಎಂದುರ ಹೋಗವನು ತಿರಿಗ್ಯಾನ ।
ಎಲ ನಿನ್ನನ್ಯಾರು ಕರದಾರ ।
ಎಲ ನಿನ್ನನ್ಯಾರು ಕರದಾರ-ನಾವ್‌ನಮ್ಮ ।
ಗಿಣಿ ರಾಮುನನ್ನು ಕರದೇವ ॥೭೭೬॥

* * *

ಸಂತೋಷದ ಸುದ್ದಿ ಸಂತ್ಯಾಗ ಕೇಳೀನಿ ।
ಕೂಸು ನನತಂಗಿ ಬಸರಂತ ।
ಕೂಸು ನನತಂಗಿ ಬಸರಂತ--ಹೇಳ್ಯಾನ ।
ಹಂಸ ಭಾವೀಯು ಬಣಜೀಗ ॥೭೭೭॥

* * *

ಗಂಡ ಮಗನ ಬೇಡಿ ಬಂಡಿಲಿ ಭಾಗೇವ ಬೇಡಿ ।
ಗಂಡಗಾಸೇವ ಘನ ಬೇಡಿ ।
ಗಂಡಗಾಸೇವ ಘನ ಬೇಡಿ--ನನಮಗಳು ।
ತಿಂಗಳೊಂದತ್ತು ಹಿಡಿದಾಳ ॥೭೭೮॥

* * *

ಜೋಗೂಳ ಹಾಡಿದರ ಆಗುಲೇ ಕೇಳ್ಯಾನ ।
ಹಾಲ ಹಂಬಲ ಮರೆತಾನ ।
ಹಾಲ ಹಂಬಲ ಮರೆತಾನ--ಕಂದಯ್ಯ ।
ಜೋಗೂಳದಾಗ ಅತಿ ಮುದ್ದ ॥೭೭೯॥

* * *

ಕಾಡಿಗ್ಹಚ್ಚಿದ ಕಣ್ಣು ತೀಡಿ ಮಾಡಿದ ಹುಬ್ಬು ।
ಮಾವೀನ ಹೋಳು ನಿನಕಣ್ಣು ।
ಮಾವೀನ ಹೋಳು ನಿನಕಣ್ಣು--ಕಂದಯ್ಯ ।
ಮಾವ ಬಣ್ಣೀಸಿ ಕರೆದಾನ ॥೭೮೦॥

* * *

ಬಂಜೀಯು ಮನಿಮುಂದ ಸಿಂಗಾರ ಗಿಡಹುಟ್ಟಿ ।
ಕೊಂಗಿ ಕೊಂಗ್ಯಾಗ ಗಿಳಿ ಕುಂತು ।
ಕೊಂಗಿ ಕೊಂಗ್ಯಾಗ ಗಿಳಿ ಕುಂತು--ಓದ್ಯಾವ ।
ಬಂಜಿ ನಿನ ಬದುಕು ಹೆರವರಿಗೆ ॥೭೮೧॥

ಹಸು ಮಕ್ಕಳಾಡಿದರ ಹಸನವ್ವ ಅಂಗಳ ।
ದೆಸಿ ಮುಖದ ಚೆಲುವ ಮಗರಾಮ ।
ದೆಸಿ ಮುಖದ ಚೆಲುವ ಮಗರಾಮ--ಆಡಿದರ ।
ಹಸನ ಹಡೆದವ್ವ ಅರಮನಿ ॥೭೮೨॥

* * *

ಯಾತಕ್ಕಳತಾನಂತ ಎಲ್ಲಾರೂ ಕೇಳ್ಯಾರ ।
ಕಾಯಿದ ಹಾಲ ಕೆನಿಬೇಡಿ ।
ಕಾಯಿದ ಹಾಲ ಕೆನಿಬೇಡಿ-ಕಂದಯ್ಯ ।
ಕಾಡಿ ಕೈಬಿಟ್ಟು ಇಳಿಯಾನ ॥೭೮೩॥

* * *

ಗಂಡು ಮಗನೆ ಬಾರೋ ಚೆಂಡು ಬೆತ್ತಾಸಬಾರೋ ।
ದುಂಡ ಮುತ್ತಿನ ಸರ ಬಾರೋ ।
ದುಂಡ ಮುತ್ತಿನ ಸರ ಬಾರೋ-ಕಂದಯ್ಯ ।
ಬಂಗಾರ ಬಾರೋ ಬೈಲೀಗಿ ॥೭೮೪॥

* * *

ಅತ್ತಾನ ಕಾಡ್ಯಾನ ಮತ್ತೇನು ಬೇಡ್ಯಾನ ।
ಮೆತ್ತ ಮೆತ್ತನ ಧಿಮುಕವ ।
ಮೆತ್ತ ಮೆತ್ತನ ಧಿಮುಕವ-ಕೊಟ್ಟರ ।
ಗಪ್ ಚಿಪ್ಪಾಗಿ ಮಲಗ್ಯಾನ ॥೭೮೫॥

* * *

ಕಂದವ್ವ ಕಾಡಿದರ ಸುಂದವ್ವ ಮನಿಗೆಲಸ ।
ರಿಮ್ಮ ರಿಮ್ಮನ್ನ ಹಲಗಿ ।
ರಿಮ್ಮ ರಿಮ್ಮನ್ನ ಹಲಿಗಿ-ತೊಟ್ಟಿಲ್ದಾಗ ।
ಕಂದವ್ವ ಕಾಡಿ ಮಲಿಗ್ಯಾನ ॥೭೮೬॥

* * *

ಅಳುವ ಕಂದನ ತುಟಿಯು ಹವಳದ ಕುಡಿಹಂಗ ।
ಕುಡಿಹುಬ್ಬು ಬೇವಿನೆಸಳ್ಹಂಗ ।
ಕುಡಿಹುಬ್ಬು ಬೇವಿನೆಸಳ್ಹಂಗ-ಕಣ್ನೋಟ ।
ಶಿವನ ಕೈಯಲಗು ಹೊಳೆಧಂಗ ॥೭೮೭॥

ಹಚ್ಚನ್ನs ಮೈಯಾವ ಹವಳದ ತುಟಿಯಾವ ।
ಎಲ್ಲಿಗ್ಹೋಗಿದ್ದಿ ಗಿಳಿರಾಮ ।
ಎಲ್ಲಿಗ್ಹೋಗಿದ್ದಿ ಗಿಳಿರಾಮ-ತವರೂರ ।
ಉತ್ಪತ್ತಿ ವನಕ ಉಲುವಿಲ್ಲ ॥೭೮॥

ಗುಜ್ಜಿ ನನ ಕಂದಯ್ಯನ ಗೆಜ್ಜಿ ಸಪ್ಪಳಕೇಳಿ ।
ನಿಬ್ಬಣದೆತ್ತು ಬೆದರ್ಯಾವ ।
ನಿಬ್ಬಣದೆತ್ತು ಬೆದರ್ಯಾವ-ಬೆಟ್ಟಸೇರಿ ।
ಮದ್ಯಾಣ ಮೇವ ಮರೆತಾವ ॥೭೯॥

* * *

ಸಡಗರ ಸಂಪತ್ತು ಯಾರಿಂದ ಹಡೆದವ್ವ ।
ಕಡೆವ ಹಾಕೀರೊ ಮಗನಿಂದ ।
ಕಡೆವ ಹಾಕೀರೊ ಮಗನಿಂದ-ಹೊಸ್ತೀಲ ।
ದಾಟೇರಿ ಬರುವ ಸೊಸಿಯಿಂದ ॥೮೦॥

* * *

ಬಾಲ ಹನುಮನ ಮುಂದ ಬಾಗಿ ಚಂಡಾಡ್ಯಾನ ।
ಬಾವೂಲಿ ಗಿವಿಯ ನನ ಬಾಲ ।
ಬಾವೂಲಿ ಗಿವಿಯ ನನ ಬಾಲ-ಕಂಡರ ।
ಬಾಲ್ಯಾರು ಬಸಿರು ಬಯಸ್ಯಾರ ॥೮೧॥

* * *

ದೇಶs ದೇಶದ ಮಂದಿ ಕಾಸೀಗೆ ಹೋಗ್ತಾರ ।
ಕೂಸು ಕಂದವ್ವ ಒಳ ಹೊರಗ ।
ಕೂಸು ಕಂದವ್ವ ಒಳಹೊರಗ-ಆಡಿದರ ।
ಕಾಸಿ ಪರವೂತ ನನಗಾದೆ ॥೮೨॥

* * *

ಗಾಳಿ ದೇವರ ಕೂಡ ಧೂಳಿ ದೇವರ ಬಂದಾ ।
ಆಕಳ ಹಿಂದ ಕರ ಬಂದಾ ।
ಆಕಳ ಹಿಂದ ಕರ ಬಂದಾ-ನನ ಮನಿಯ ।
ಮಾರಾಯ್ರ ಹಿಂದ ಮಗಬಂದಾ ॥೮೩॥

ಬೆಟ್ಟಕ್ಕೆ ಬಿದಿರಾಸೆ ಹೆಣ್ಣೀಗೆ ತವರಾಸೆ
ಬತ್ತೀದ ಬೆಳೆಗೆ ಮಳಿಯಾಸೆ
ಬತ್ತೀದ ಬೆಳೆಗೆ ಮಳಿಯಾಸೆ-ಕಂದಯ್ಯ ।
ನಿನ್ನಾಸೆ ನನಗ ಅನುಗಾಲ ॥೭೯೪॥

* * *

ಪೂಲಿಬಂಗಾರ ಬಾ ಜಗ್ಗಿ ಬಿದ್ದಾವ ಜೋಲ ।
ಲಗ್ಗಿ ಹೂಡ್ಯಾನ ನಡುಓಣಿ ।
ಲಗ್ಗಿ ಹೂಡ್ಯಾನ ನಡುಓಣಿ-ನನಬಾಲ- ।
ನಬ್ಬರಣಿ ಕೇಳ ಹಡೆದವ್ವ ॥೭೯೫॥

* * *

ಯಾಲಕ್ಕಿ ಗಿಡ ಹುಟ್ಟಿ ಎಲೆಗೊಂದು ಕಾಯಾಗಿ ।
ಹೆಣ್ಣುಟ್ಟಿ ಹೆರರ ಮನೆಗಾಗಿ ।
ಹೆಣ್ಣುಟ್ಟಿ ಹೆರರ ಮನೆಗಾಗಿ-ಕಂದಯ್ಯ ।
ನೀ ಹುಟ್ಟ ಮನೆಗೆ ಧೊರೆಯಾದೆ ॥೭೯೬॥

* * *

ತೊಟ್ಟಿಲೊಳಗಿನ ಕಂದ ಬೆರಳ್ಯಾಕ ಚೀಪೀತು ।
ಹೊಟ್ಟಿ ತುಂಬೀತೆ ಇದರಿಂದ ।
ಹೊಟ್ಟಿ ತುಂಬೀತೆ ಇದರಿಂದ-ದೇವರು ।
ಅಮೃತ ತುಂಬ್ಯಾರ ಬೆರಳಾಗ ॥೭೯೭॥

* * *

ಅಳದೀರು ಕಂದಯ್ಯ ನಿನಗೊಂದು ಹೇಳುವೆನು ।
ಅಮರಾವತಿಯೆಂಬ ಎಳೆದೋಟ ।
ಅಮರಾವತಿಯೆಂಬ ಎಳೆದೋಟ-ದೊಳಗೀನ ।
ಅರಗಿಳಿಯ ತಂದು ಕೊಡುವೇನ ॥೭೯೮॥

* * *

ಕಂದಯ್ಯ ಬಾರೋ ರನ್ನ ದುಂಗುರದವನೆ ।
ಬೆಳ್ಳೀಯ ಗೆಜ್ಜಿ ಬೆಳಗವನೆ ।
ಬೆಳ್ಳೀಯ ಗೆಜ್ಜಿ ಬೆಳಗವನೆ-ಕಂದಯ್ಯ ।
ಯಾಕಳುವೆ ಮುದ್ದೆ ಅಳದೀರು ॥೭೯೯॥

ಬಡವನಿಗೆ ಮಕ್ಕಳು ನಡೆವೂದೆ ಅತಿ ಚಂದ ।
ತಿರುಗಾಡಿ ಬಂದು ಮಡಿಲಲ್ಲಿ ।
ತಿರುಗಾಡಿ ಬಂದು ಮಡಿಲಲ್ಲಿ-ಕೂತಾಗ ।
ಬಡತನದ ಚಿಂತಿ ಅವಗಿಲ್ಲ ॥೬೦೦॥

* * *

ಬಡತನ ಬಂದರ ಬಡಿ ಬ್ಯಾಡ್ರಿ ಮಕ್ಕಳನ ।
ಅಡ್ಯಾಡಿ ಬಂದು ತೊಡಿಮ್ಯಾಲ ।
ಅಡ್ಯಾಡಿ ಬಂದು ತೊಡಿಮ್ಯಾಲ-ಕೂತನರ ।
ಬಂದ ಬಡತನ ಬಯಲಾಗಿ ॥೬೦೧॥

* * *

ಚಿಕ್ಕ ನನ ಕಂದಯ್ಯ ಚಿಣಿಮಾಂಡು ಆಡ್ಯಾನ ।
ಚಿಕ್ಕಹೊಳಿ ದಾಟಿ ತೊರೆಗಲ್ಲ ।
ಚಿಕ್ಕಹೊಳಿ ದಾಟಿ ತೊರೆಗಲ್ಲ-ಬಾಲ್ಯಾರ ।
ಚಿತ್ರದ ಕೊಡಕ ಚಿಣಿ ಬಡದ ॥೬೦೨॥

* * *

ಮಕ್ಕಳಾಟಿಗೆ ಚಂದ ಮತ್ತೆ ಯೌವ್ವನ ಚಂದ ।
ಮುಪ್ಪಿನಲಿ ಚಂದ ನರೆಗಡ್ಡ ।
ಮುಪ್ಪಿನಲಿ ಚಂದ ನರೆಗಡ್ಡ-ಜಗದಾಗ ।
ಎತ್ತ ನೋಡಿದರು ನಗು ಚಂದ ॥೬೦೩॥

* * *

ಕತ್ತೆಯ ಮರಿ ಚಂದ ತೊತ್ತಿನ ನುಡಿ ಚಂದ ।
ಮುತ್ತುಗದ ಹೂ ಬಲು ಚಂದ ।
ಮುತ್ತುಗದ ಹೂ ಬಲು ಚಂದ-ಕಂದಯ್ಯ ।
ನಿನ್ನಾಟ ಚಂದ ನಮಗೆಲ್ಲ ॥೬೦೪॥

* * *

ಬಾರಯ್ಯ ಬಾ ನನ್ನ ಬಾಲ ಚಕ್ರವರ್ತಿ ।
ನಾಲೀಗಿ ಮ್ಯಾಲ ಸರಸೋತಿ ।
ನಾಲೀಗಿ ಮ್ಯಾಲ ಸರಸೋತಿ-ಇರುವಂಥ ।
ನನ ಬಾಲ ಹಾಲ ಕುಡಿಬಾರೋ

ಕಿತ್ತೂರ ಕ್ವಾಟಿ ಛಂದ ಕೊಪ್ಪsಳ ಕೆರಿ ಛಂದ ।
ಬನಶಂಕ್ರಿ ಛಂದ ಜಗಕೆಲ್ಲ ।
ಬನಶಂಕ್ರಿ ಛಂದ ಜಗಕೆಲ್ಲ-ಕಂದಮ್ಮಾ ।
ನೀ ಛಂದ ನಮ್ಮ ಮನೆಗೆಲ್ಲ ||೮೦೬||

* * *

ಶೃಂಗೇರಿ ಊರು ಚಂದ ಬೇಲೂರು ಕೇರಿ ಚಂದ ।
ಶಾರದಾಂಬ ಚಂದ ಜಗಕೆಲ್ಲ ।
ಶಾರದಾಂಬ ಚಂದ ಜಗಕೆಲ್ಲ-ಕಂದಯ್ಯ ।
ನೀ ಚಂದ ನಮ್ಮ ಮನಿಗೆಲ್ಲ ||೮೦೭||

* * *

ಸಕ್ಕsರಿ ಸವಿಗಾರಾ ವೀಳ್ಯsದ ರುಚಿಗಾರಾ ।
ವೀರಭದ್ರನ ಅವತಾರಾ ।
ವೀರಭದ್ರನ ಅವತಾರಾ-ನನ ಮಗನ ।
ಹ್ಯಾಂಗ ಸಂಬಳಸ್ಲಿ ಹಡೆದವ್ವ ||೮೦೮||

* * *

ಅಳಬೇಡ ಎಲೆಬಾಲ ನಿನಗೆ ಜೋಗುಳ ಹಾಡಿ ।
ಕರೆ ತಂದು ಹಾಲ ಕುಡಿಸೇನು ।
ಕರೆ ತಂದು ಹಾಲ ಕುಡಿಸೇನು-ಮಾವನ ಮಗಳ ।
ಎಳೆತಂದು ಧಾರೆ ಎರಿಸೇನು ||೮೦೯||

* * *

ಗಂಗೆ ಗಿರಿಗೆ ತಂಪು ಚಂದ್ರ ಲೋಕಕೆ ತಂಪು ।
ಚಂದನ ತಂಪು ನೊಸಲಿಂಗೆ ।
ಚಂದನ ತಂಪು ನೊಸಲಿಂಗೆ-ಹಿರಿಮುsಗ ।
ತಂದೇಯು ಬಗೆಗೆ ಬಲು ತಂಪು ||೮೧೦||

ತಾಯಿದ್ರ ತವರ್ಹೆಚ್ಚು ತಂದಿದ್ರ ಬಳಗ್ಹೆಚ್ಚು ।
ಸಾವಿರಕೆ ಹೆಚ್ಚು ಪತಿ ಪುರುಷ ।
ಸಾವಿರಕೆ ಹೆಚ್ಚು ಪತಿ ಪುರುಷ-ಹೊಟ್ಟೇಯ ।
ಮಾಣಿಕದ ಹರಳು ಮಗ ಹೆಚ್ಚು ||೮೧೧||

ಎಲ್ಲಾರ ಮಕ್ಕಳ್ಹಂಗ ಅಲ್ಲವ್ವ ನನಕಂದ ।
ನಲ್ಲರಳಗಣ್ಣು ನಗುಮುಖ ।
ನಲ್ಲರಳಗಣ್ಣು ನಗುಮುಖ-ಕಾಮನ
ಬಿಲ್ಲಿನ್ಹಾಂಗ ಕುಡಿ ಹುಬ್ಬ ॥೮೧೨॥

* * *

ನನ್ನ ಹೊಟ್ಟೀಲೊಂದು ಚಿನ್ನ ಹುಟ್ಟಿತು ತಾಯಿ ।
ನಿನ್ನೂರಿಗೊಮ್ಮೆ ಕರೆದೊಯ್ಯ ।
ನಿನ್ನೂರಿಗೊಮ್ಮೆ ಕರೆದೊಯ್ಯ-ಹಡೆದವ್ವ ।
ರಾಮ ಸಾಲ್ಯಾಗ ಬರೆಹಾಕ ॥೮೧೩॥

* * *

ಕಾಲಾಸೆ ಹೆಳವಗ ಕಣ್ಣಾಸೆ ಕುರುಡಗ ।
ವಸ್ತ್ರದ ಆಸೆ ಬಡವೀಗೆ ।
ವಸ್ತ್ರದ ಆಸೆ ಬಡವೀಗೆ-ಕಂದಯ್ಯ ।
ನಿನ್ನಾಸೆ ನನಗೆ ಅನುಗಾಲ ॥೮೧೪॥

* * *

ಕೂಸೆಲ್ಲ ಕುಂದಣ ನೆತ್ತೆಲ್ಲ ಜಾವೂಳ ।
ಕಟ್ಟೀ ಕೆಳಗಾಡಿ ಬೆವತಾನ ।
ಕಟ್ಟಿ ಕೆಳಗಾಡಿ ಬೆವತಾನ-ನನಕಂದ ।
ಹೊಸ ಮುತ್ತಿನ ದೃಷ್ಟಿ ತೆಗೆದೇನ ॥೮೧೫॥

* * *

ಅಳುವ ಕಂದನ ಬಿಟ್ಟು ಹೊಳೆಯ ನೀರಿಗೆ ಹೋಗಿ ।
ಗಿಳಿಯ ಸಂತೈಸಿ ಬರತಾಳ ।
ಗಿಳಿಯ ಸಂತೈಸಿ ಬರತಾಳ-ನಿನ ತಾಯಿ ।
ಹೊಳಿ ಮಿಂದು ಗಂಗೆ ತರತಾಳ ॥೮೧೬॥

* * *

ಅಜ್ಜಣ್ಣ ನಾಗು ಗೆಜ್ಜೆ ಹುರಿಯಾಗು ।
ಸಹದೇವನಾಗು ಶುಚಿಯಾಗು ।
ಸಹದೇವನಾಗು ಶುಚಿಯಾಗು-ಕಂದಯ್ಯ ।
ಬಸವಣ್ಣನ್ಹಾಂಗ ಹೆಸರಾಗು ॥೮೧೭॥

ಹಾಲ ಕುಡಿಯೆಂದsರ ಹನ್ನೆರಡು ಬಟ್ಟಲ ।
ಕೀಲ ರಂಜಣಿಗಿ ಗಿರಿ ಸಿಂಪಿ ।
ಕೀಲ ರಂಜಣಿಗಿ ಗಿರಿ ಸಿಂಪಿ-ಕಂದsಗ ।
ಹಗಲೆಲ್ಲಿ ತರಲೆ ನೊರೆಹಾಲ ॥೬೮॥

* *

ನನ್ನಪ್ಪ ನೀ ಬಾಳು ಇನ್ನೂ ಸಾವಿರ ಕಾಲ ।
ಹೊನ್ನೀಯ ಬುಡದ ಗರಿಕೇಯ ।
ಹೊನ್ನೀಯ ಬುಡದ ಗರಿಕೇಯ-ಬೇರಿನ್ಹಾಂಗ ।
ಮೊಮ್ಮಕ್ಕಳ್ನೆತ್ತಿ ಸುಖಿಯಾಗು ॥೬೯॥

* * *

ನನ್ ಕಂದs ನಂಥೋರು ಹನ್ನೆರಡು ಮಕ್ಕsಳು ।
ಹೊನ್ನೀಯ ಮರದ ನೆರಳಾಗ ।
ಹೊನ್ನೀಯ ಮರದ ನೆರಳಾಗ-ಆಡ್ಯಾಗ ।
ಸನ್ಯಾಸಿ ಜಪವ ಮರೆತಾನು ॥೭೦॥

* * *

ತೊಟ್ಲನ್ನ ಕೂಸೀಗಿ ದಿಷ್ಟಿ ಆದೀತಂತ ।
ಕಟ್ಟೇನಿ ನವಿಲ ಗರಿಗೋಳ ।
ಕಟ್ಟೇನಿ ನವಿಲ ಗರಿಗೋಳ-ಬಾಳsಗ ।
ಕರಿಬೇವಿನ ದಿಷ್ಟಿ ತೆಗದೇನ ॥೭೧॥

* * *

ಉಪ್ಪರಿಗೆ ಮನೆಬೇಕು ಕೊಪ್ಪರಿಗೆ ಹಣ ಬೇಕು ।
ರುಕ್ಮಿಣಿಯಂಥ ಸೊಸಿಬೇಕು ।
ರುಕ್ಮಿಣಿಯಂಥ ಸೊಸಿಬೇಕು-ನಮ್ಮನೀಗೆ ।
ಕೃಷ್ಣದೇವರಂಥಾ ಮಗ ಬೇಕು ॥೭೨॥

* * *

ಮಾಳೀಗಿ ಮನಿಬೇಕು ಜೋಳೀಗಿ ಹಣಬೇಕು ।
ಜಾನಕಿಯಂಥ ಸೊಸಿಬೇಕು ।
ಜಾನಕಿಯಂಥ ಸೊಸಿಬೇಕು-ನಮ್ಮನೀಗೆ ।
ರಾಮದೇವರಂಥಾ ಮಗಬೇಕು ॥೭೩॥

ಆಕಽಳ ಕರ ಬಿಟ್ಟು ನಾಕು ಮೂಲಿಗಿ ನಿಂತ ।
ಯಾಕಽ ಗೋವೆವ್ವ ತೊರಿವಲ್ಲಿ ।
ಯಾಕಽ ಗೋಪೆವ್ವ ತೊರಿವಲ್ಲಿ-ನನಕಂದ ।
ಹಾಲಿಲ್ದ ಬಾನ ಉಣವಲ್ಲಾ ||೮೨೪||

* * *

ಹಾಲ ಕಾವೂ ಚಿಂತಿ ಬಾಲ ಮಲಗೂ ಚಿಂತಿ ।
ಇನ್ನಾ್ಯರ ಚಿಂತಿ ನಮಗವ್ವ ।
ಇನ್ನಾ್ಯರ ಚಿಂತಿ ನಮಗವ್ವ-ನನಗೆಳತಿ ।
ಮಗ ಬರುವ ಚಿಂತಿ ಮನದಾಗ ||೮೨೫||

* * *

ಸೊಸಿಯು ಗಂಡ್ಗುಡಿಯಽಲಿ ಮಗಳು ಹೆಣ್ಣುಡಿಯಽಲಿ ।
ಎಳೆಗರು ಎಮ್ಮಿ ಕರೆಯಽಲಿ ।
ಎಳೆಗರು ಎಮ್ಮಿ ಕರೆಯಽಲಿ-ನಮ್ಮನೆಯ ।
ಸಡಗಽರ ನೋಡಾಕ ಶಿವ ಬರಲಿ ||೮೨೬||

* * *

ಕಿರಿ ಕೀರಿ ಕಂದಽಗ ಬೆರಕೀಗಿ ನೀರಿಲ್ಲ ।
ಸರಕಾರದಗಸಿ ತೆರೆದಿಲ್ಲ ।
ಸರಕಾರದಗಸಿ ತೆರದಿಲ್ಲ-ಕಂದಽನ ।
ದನಿ ಕೇಳಿ ಅಗಸಿ ತೆರದಾವ ||೮೨೭||

* * *

ಬಂಗಾರ್ದಂಥಾ ಬಾಲ ಬಿಸಲಾಗ ಆಡಿದರ ।
ಕಸವೀಸಿ ನನ್ನ ಮನದಾಗ ।
ಕಸವೀಸಿ ನನ್ನ ಮನದಾಗ-ಕಂದಽನ ।
ಇಸವಾಸ ಗೆಳತಿ ಕರದೊಯ್ಯ ||೮೨೮||

* * *

ಬಣ್ಣದ ತೊಟ್ಟಿಲಕ ಜಗ್ಗಿ ಬಿದ್ದಾವು ಗೊಂಡೆ ।
ಇಬ್ಬರು ತೂಗಿದರೆ ಮಲಗಽನ ।
ಇಬ್ಬರು ತೂಗಿದರೆ ಮಲಗಽನ-ಕಂದಽನ ।
ಅಬ್ಬರಣಿ ಭಾಳ ಮನಿಯಾಗ ||೮೨೯||

ಆಕಳ ಕಾಲೀಗಿ ಸೂತರದಳಿ ಹಾಕಿ ।
ತವರ್ಮ್ಯಾನ್ನ ಮಲಿಯು ನಲಿ ನಲಿದು ।
ತವರ್ಮ್ಯಾನ್ನ ಮಲಿಯ ನಲಿ ನಲಿದು-ಕುಡಿವಾಗ ।
ನನಬಾಳ ನಿನ್ಹಂಬ್ಲ ನನಗಾಗಿ ॥೭೩೦॥

* * *

ಭಯಪ್ಪ ಛಲಗಂಜಿ ಆಡಿ ಬಾ ಗುಣವಂತ ।
ಮೆಯ್ದು ಬಾ ಕಬ್ಬು ಕವಳೀಯು ।
ಮೆಯ್ದು ಬಾ ಕಬ್ಬು ಕವಳೀಯು-ಬಾಳಾನ ।
ಹೋರಿ ಮೆಯ್ದಾವ ಹೊಡಿಹುಲ್ಲ ॥೭೩೧॥

* * *

ಕಂದsನ ಕಿರಿಕೀರಿ ಇಂದೇನ ಹೇಳsಲಿ ।
ಸಂಬಳಸ್ಲಾರೆ ಹರದೀಯು ।
ಸಂಬಳ ಸ್ಲಾರೆ ಹರದೀಯು-ಕಾಲಾನ ।
ಹೊಂದೀಸಲಾರೆ ಹುಲಿಗೆಜ್ಜಿ ॥೭೩೨॥

ಏಳು ಸುತ್ತಿನ ಕ್ವಾಟಿ ಎಳಿಯು ಬೆಳದಿಂಗಳ ।
ಏರಿ ಬಂದಾಳ ನಿನಗಾಗಿ ।
ಏರಿ ಬಂದಾಳ ನಿನಗಾಗಿ-ನನಬಾಳಾ ।
ಲಾವಂಗದರಸ ಹೊರ ಹೊಂಡ ॥೭೩೩॥

* * *

ಕಂದಯ್ಯ ಅಳದೀರೊ ಕವಳೀಯ ಹಣ್ಣೀಗಿ ।
ತುಂಬುಚ್ಚಿ ಬೀಳ್ವ ಮಗಿ ಮಾವ ।
ತುಂಬುಚ್ಚಿ ಬೀಳ್ವ ಮಗಿ ಮಾವ-ನೀಬೇಡಿ ।
ಅಳದೀರೋ ರಾಮ-ಲಕ್ಷ್ಮಣಾ ॥೭೩೪॥

* * *

ಓಣ್ಯಾಗ ಅವಚಾರಿ ಮನಿಯಾಗ ರಿಪಿಗೇಡಿ ।
ಆಡಹ್ವಾದಲ್ಲಿ ಕಿಡಿಗೇಡಿ ।
ಆಡಹ್ವಾದಲ್ಲಿ ಕಿಡಿಗೇಡಿ-ಬಾಳsನ ।
ಹೆಂಗ ಸಂಬಳಸ್ಲೆ ಹಡೆದವ್ವ ॥೭೩೫॥

ಹಸರಂಗೀ ತೊಡಸೇನಿ ಹಾಲ್ಗಡಗ ಇಡಿಸೇನಿ ।
ಹಳ್ಳ್ಯಾಕ ನೀನು ಬರಬ್ಯಾಡ ।
ಹಳ್ಳ್ಯಾಕ ನೀನು ಬರಬ್ಯಾಡ–ನನಕಂದ ।
ಬೆಳ್ಳಕ್ಕಿ ಹಿಂಡು ಬೆದರ್ಯಾವ ॥೮೩೬॥

* * *

ಸಂಜಿಯಾಯಿತ ನಮ್ಮ ಸೌಭಾಗ್ಯದ ಸಂಜಿ ।
ದನ ಬಂದು ಮನೀಗಿ ಕರಬಂದು ।
ದನ ಬಂದು ಮನೀಗಿ ಕರಬಂದು–ನನಬಾಳಾ ।
ತಾ ಬಂದ ಸಿರಿಯ ತುಳುಕೂತ ॥೮೩೭॥

* * *

ತೊಟ್ಟಿಲೊಳಗಿನ ಕಂದ ತೋಳು ಬೀಸುವ ಚಂದ ।
ರಟ್ಟಿ ನೊಂದಾವು ಎಲೆ ಕಂದಾ ।
ರಟ್ಟಿ ನೊಂದಾವು ಎಲೆ ಕಂದಾ–ನಿಮ್ಮವ್ವ ।
ದೃಷ್ಟಿ ಮುರಿಲಾಕ ಅರಿಯಾಳು ॥೮೩೮॥

* * *

ಅತ್ತ ಕಂದವ್ವಗ ಎತ್ತಿ ಹೊರಿಯಾಕ ತಂದು ।
ಚಂದಪ್ಪನ ನೋಡೋ ನನ ಕಂದಾ ।
ಚಂದಪ್ನ ನೋಡೋ ನನ ಕಂದಾ–ಒಳಗಿರುವ ।
ಗಂಡೆರಳಿ ನೋಡೋ ಗಜ ಭೀಮಾ ॥೮೩೯॥

* * *

ಕಂಡದ್ದು ಕನಸಾಗಿ ಉಂಡದ್ದು ಸವಿಯಾಗಿ ।
ಕಂದ ನೀ ಕಾಡಬೇಡೆಂದು ।
ಕಂದ ನೀ ಕಾಡಬೇಡೆಂದು–ಬೇಡೂವೆ ।
ಕಂದಯ್ಯ ಮಾಡೋ ನಿದ್ದೀಯಾ ॥೮೪೦॥

* * *

ತೂಗು ತೊಟ್ಟಲಿಗೊಂದು ಪಾಗುಪಟ್ಟಿಯ ಹಾಸಿ ।
ಮಾಗಾಯಿ ಮಗನ ಮಲಗೀಸಿ ।
ಮಾಗಾಯಿ ಮಗನ ಮಲಗೀಸಿ–ಅವರಮ್ಮ ।
ಜೋಗೂಳ ಹಾಡಿ ಹಿಗ್ಗ್ಯಾಳ ॥೮೪೧॥

ಮುರುಕು ತೊಟ್ಟಿಲಿಗೊಂದು ಹರಕು ಚಾಪಿ ಹಾಸಿ ।
ಅರಚು ಪಾಪನ ಮಲಗೀಸಿ ।
ಅರಚು ಪಾಪನ ಮಲಗೀಸಿ-ಅವರಕ್ಕ ।
ಕಲಿಕೇತ ಹಾಡಿ ಹಿಗ್ಗ್ಯಾಳ ||೮೪೨||

* * *

ನನ್ನ ಕಂದಽ ಮುದ್ದು ಹೊನ್ನಽ ತಾವರಿ ಮುದ್ದು ।
ಹಣ್ಣುಳ್ಳ ಗಿಡಕ ಗಿಣಿ ಮುದ್ದು ।
ಹಣ್ಣುಳ್ಳ ಗಿಡಕ ಗಿಣಿ ಮುದ್ದು-ಕಂದವ್ವ ।
ನೀ ಮುದ್ದು ನನ್ನ ಬಳಗಽಕ ||೮೪೩||

* * *

ಕಂದೆಲ್ಲಿ ಆಡ್ಯಾನ ಕಡಗೆಲ್ಲಿ ಚಲ್ಲ್ಯಾವ ।
ದುಂಡ ಮುತ್ತೆಲ್ಲಿ ಉದುರ್ಯಾವ ।
ದುಂಡ ಮುತ್ತೆಲ್ಲಿ ಉದುರ್ಯಾವ-ಕಂದಽನ ।
ಬಿಂದೂಲಿ ಕಂಡವರು ಕೊಡಿರೆವ್ವ ||೮೪೪||

* * *

ಬಾಲಯ್ಯ ನೋಽಟವೆ ಬಾಳೀಯ ತೋಽಟಽವೇ ।
ಅಂಗಳದಲಿರುವ ಸಾಗರದ ।
ಅಂಗಳದಲಿರುವ ಸಾಗರದ-ಆಚೀಲಿ ।
ರಂಗ ಪಾಂಡವರಿಗರವೇನೆ ||೮೪೫||

* * *

ಹುಟ್ಟೀದ ಕಂದನಿಗೆ ಅಕ್ಷಯುಽವಾಗಲಿ ।
ಕೊಟ್ಟಂಥ ಸ್ವಾಮಿ ಮರೆವಽನೆ ।
ಕೊಟ್ಟಂಥ ಸ್ವಾಮಿ ಮರೆವಽನೆ-ಕಂದಮ್ಮ ।
ಬೊಟ್ಟು ಬೊಟ್ಟಾಗಿ ಬೆಳೆಯುಽವಾಗಲಿ । ||೮೪೬||

* * *

ಕ್ರೂವಲ್ಲೆಯೆಂದರೆ ಕರುಗಳು ಮೇಯುಽವು ।
ಕರುಗಳ ಬಿಟ್ಟು ಕರಿಯೀರೆ ।
ಕರುಗಳು ಬಿಟ್ಟು ಕರಿಯೀರೆ-ಕಂದನಿಗೆ ।
ಎರೆಯೀರೆ ನೊರೆಹಾಲ ಸಕ್ಕರಿ ||೮೪೭||

ಹಲಿಗಿ ತೊಟ್ಟಿಲದಾಗ ಹವಳದ್ಹಾಸಿಗಿ ಹಾಕಿ ।
ಗುಲಗಂಜಿ ಚಂಡ ನಡುವಿಟ್ಟ ।
ಗುಲಗಂಜಿ ಚಂಡ ನಡುವಿಟ್ಟ-ನನಬಾಳಾ ।
ಮನ ಬಲ್ಲಂಗಾಡೋ ನವಿಲಾಟಾ ||೬೪೮||

* * *

ಪುಟ್ಟುಡುಗ ಪುಟ್ಟುಡುಗ ಯಾತಽರ ಪುಟ್ಟುಡುಗ ।
ಮಾಗಾಯಿಯಿಲ್ಲ ಮುರುವಿಲ್ಲ ।
ಮಾಗಾಯಿಯಿಲ್ಲ ಮುರುವಿಲ್ಲ-ಪುಟ್ಟುಡುಗ್ಗ ।
ಮಾಡಿಸೋರುಂಟು ಹಣವಿಲ್ಲ ||೬೪೯||

* * *

ಕಂದವ್ವ ಅತ್ತಽರ ತಂದೇನಿ ಹೊಂಯಾಕ ।
ಚಂದರನ ನೋಡೋ ನನ ಬಾಲಾ ।
ಚಂದರನ ನೋಡೋ ನನ ಬಾಲಾ-ತವರೀನ ।
ಅಂದಾಲ ನೋಡೋ ಅರಗಿಳಿಯೆ ||೬೫೦||

* * *

ಬಾಳಿಹಣ್ಣೀನ ಮಾಟ ಬಾದಾಮಿ ಎಲಿದೋಟ ।
ಬಾಗಿಲಾಗಾಡೊ ಮಗನಾಟ ।
ಬಾಗಿಲಾಗಾಡೊ ಮಗನಾಟ-ಕಲಕೇರಿ ।
ತೇರೀನ ಮಾಟ ಬಲು ಮಾಟ ||೬೫೧||

* * *

ಲಾಲೀಯ ಹಾಡಿದರ ಲಾಲೀಸಿ ಕೇಳ್ಯಾನ ।
ತಾಯಿ ಹಂಬಲ ಮರೆತಾನ ।
ತಾಯಿ ಹಂಬಲ ಮರೆತಾನ-ಕಂದಯ್ಯ ।
ತೋಳಬೇಡ್ಯಾನ ತಲೆಗಿಂಬ ||೬೫೨||

* * *

ತವರೂರಿಗ್ಹೋದಾಗ ನವಿಲ ಬಣ್ಣದ ಪಕ್ಷಿ ।
ತಲಿಬ್ಯಾನಿಯೆದ್ದು ಅಳುತಿತ್ತ ।
ತಲಿಬ್ಯಾನಿಯೆದ್ದು ಅಳತಿತ್ತ-ಕಂದಽನ ।
ಚಲುವೀಕಿ ನೋಡಿ ನಗತಿತ್ತ ||೬೫೩||

ಆ ಕಡೆ ಮಳೆಯಾಗಿ ಡಂಬಳ ಕೆರಿತುಂಬಿ ।
ಆನಿ ಈಸ್ಯಾವ ಅದರಾಗ ।
ಆನಿ ಈಸ್ಯಾವ ಅದರಾಗ–ಅಣ್ಣಯ್ಯ ।
ಕೂಸ ಕಂದನ ಕರೆದೊಯ್ಯೊ ॥೬೫೪॥

* * *

ಮುತ್ತೀನ ಮೂಗುತಿ ಮೂರೆಸಳ ಕ್ಯಾದೀಗಿ ।
ಮುಚ್ಚಿ ಕೊಂಡಾಳ ಹೆರಳಾಗ ।
ಮುಚ್ಚಿ ಕೊಂಡಾಳ ಹೆರಳಾಗ–ಕಂದಮನ ।
ಎತ್ತಿ ಕೊಂಡವರಿಗನುಮಾನ ॥೬೫೫॥

* * *

ಕಂದವ್ವ ಕಾಡಿದರ ರಿಂದವ್ವ ಮನಿಗೆಲಸ ।
ರಂಗ ರಂಗದ ಹಲಗೀಯ ।
ರಂಗ ರಂಗದ ಹಲಗೀಯ–ತೊಟ್ಲಾಗ ।
ಕಂದವ್ವ ಕಾಡಿ ಮಲಗ್ಯಾಳ ॥೬೫೬॥

* * *

ತೂಗು ತೊಟ್ಟಿಲ ಕಂಡು ಹಾಲು ಬೇಡಲಿ ಬಂದಾ ।
ಬಾಲ ನಿನ ಭಾಷೆ ತಿಳಿಯದ ।
ಬಾಲ ನಿನ ಭಾಷೆ ತಿಳಿಯದ–ಕಂದಯ್ಯ ।
ಹಾಲು ಕುಡಿವೂದು ದುಸ್ತರ ॥೬೫೭॥

* * *

ಅಳು ಬಂದು ಅತ್ತರಿಯ ಹಸ್ತು ಬಂದುಂಡರಿಯ ।
ಎತ್ತಿಕೊಳ್ಳೆಂಬ ಹಟವರಿಯ ।
ಎತ್ತಿಕೊಳ್ಳೆಂಬ ಹಟವರಿಯ–ನನಕಂದ ।
ಅಳದಾಂವಾ ಅತ್ತ ಬಗಿಯೇನ ॥೬೫೮॥

* * *

ಕಂದಯ್ಯ ಅತ್ತರ ಕಣಗಿಲು ಕಾತಾವ ।
ಒಣಗಿದ್ದ ಬಾಳಿ ಚಿಗಿತಾವ ।
ಒಣಗಿದ್ದ ಬಾಳಿ ಚಿಗಿತಾವ–ಬಾಲನ ।
ಬರಡಾಕಳೆಲ್ಲ ಹೈನಾಗೆ ॥೬೫೯॥

ಆ ಊರ ಈ ಊರ ಜೋಗಿ ಜಂಗಮನೂರ।
ನೀರಿಲ್ಲದೂರು ನರಗುಂದ।
ನೀರಿಲ್ಲದೂರು ನರಗುಂದ-ಕಂದsಗ।
ಹಾಲೀಲೆ ಮಾರಿ ತೊಳದೇನ ||೮೬೦||

* * *

ನಡೆದು ಬಾ ಕಂದಯ್ಯ ನಡಗೀಯ ನೋಡೇನ।
ಪದುಮದ ಪಾದ ಬಲಗಾಲ।
ಪದುಮದ ಪಾದ ಬಲಗಾಲ-ಕಂದಯ್ಗ।
ಕಿರಿಗೆಜ್ಜಿ ಇಡಿಸಿ ನೋಡೇನ ||೮೬೧||

ಅರಳೆಲೆ ಬೇಕವ್ವ ಬೆರಳಿಗುಂಗುರ ಬೇಕ।
ಕೊರಳೀಗಿ ಬೇಕ ಹಸಲೀಯು।
ಕೊರಳೀಗಿ ಬೇಕ ಹಸಲೀಯು-ಕಂದsನ।
ಕಾಲೀಗಿ ಬೇಕ ಕಿರಿಗೆಜ್ಜಿ ||೮೬೨||

ಬಡವೀಗೆ ಮಕ್ಕsಳು ನಡೆದsರೆ ಸಂತೋಷ।
ಹುಡಿಯಾಡಿ ಮನೆಗೆ ಬರುವಾಗ।
ಹುಡಿಯಾಡಿ ಮನೆಗೆ ಬರುವಾಗ-ತಾಯೀಗೆ।
ಬಡತನದ ಗ್ಯಾನ ಮರೆತೈತಿ ||೮೬೩||

* * *

ಬಸಿರ ಬಯಕೆ ಚಂದ ಹಸಿರು ಕುಪ್ಪಸ ಚಂದ।
ನಸುಗೆಂಪಿನವಳ ನಗೆ ಚಂದ।
ನಸುಗೆಂಪಿನವಳ ನಗೆ ಚಂದ-ಅಕ್ಕವ್ವ।
ಬಸುರಾದರೆ ಚಂದ ಬಳಗಕ್ಕ ||೮೬೪||

* * *

ಮಕ್ಕಳಿಲ್ಲದ ಮನೆ ಹೊಕ್ಕರೆ ಬಿಣ್ಣsಗೆ।
ಇಟ್ಟ ಶೇಢಳಿಯ ಮನೆಯಂತೆ।
ಇಟ್ಟ ಶೇಢಳಿಯ ಮನೆಯಂತೆ-ಆ ಮನೆಯ।
ಹೊಕ್ಕಣ್ಣಳೆಂಬಳು ಶ್ರೀದೇವಿ ||೮೬೫||

ಬಾಲರಿಲ್ಲದ ಬಾಳ್ವೆ ಬಾಲರಿಲ್ಲದ ತೋಟ।
ಗಂಧ ಕಸ್ತೂರಿ ಪರಿಮಳ।
ಗಂಧ ಕಸ್ತೂರಿ ಪರಿಮಳ-ಒಳಗಿದ್ದು।
ರಂಭೆ ನೀ ಬಾಳಿ ಫಲವಿಲ್ಲ ||೮೬||

* * *

ಬಾಲನ್ನ ಹೆರುವಾಗ ಬಾಡಿತವ್ವನಮುಖ।
ಬಾಲ ಚೆಂಡಾಡಿ ಬರುವಾಗ।
ಬಾಲ ಚೆಂಡಾಡಿ ಬರುವಾಗ-ಅವ್ವನ ಮುಖ।
ಕುಂದಣದ ಚಿನ್ನ ಹೊಳೆದಂತೆ ||೮೭||

* * *

ಮಲ್ಲೀಗಿ ಹೂವೆ ಇಲ್ಯಾಕ ನಿಂತೀದಿ।
ಎಲ್ಲಾರ ಕಣ್ಣು ನಿನಮ್ಯಾಲ।
ಎಲ್ಲಾರ ಕಣ್ಣು ನಿನಮ್ಯಾಲ-ಕಂದಯ್ಯ।
ವಲ್ಲಿ ಸೆರಗೆಲ್ಲ ಪರಿಮಳ ||೮೮||

* * *

ಹಸು ಮಗುವೆ ಚಿನ್ನವೆ ಮಿಸುಣಿ ಹೊಂಬಣ್ಣವೆ।
ಬಸುರೇರ ಹಣೆಯ ತಿಲಕವೆ।
ಬಸುರೇರ ಹಣೆಯ ತಿಲಕವೆ-ನನಕಂದ।
ಹೊಸ ಮುತ್ತಿನ ಹೊನ್ನ ಕಲಶವೇ ||೮೯||

* * *

ಬಾಳೆ ಹಣ್ಣಿನ್ಹಾಂಗ ಬಾಲಕನ ಮೈ ಚಂದ।
ಏನುಂಡು ಈ ಮಗನ ನೀ ಹಡೆದೆ
ಏನುಂಡು ಈ ಮಗನ ನೀ ಹಡೆದೆ-ತವರ್ಮನೆಯ।
ಹಾಲುಂಡು ಹಸಿರು ಬಳೆಯಿಟ್ಟು ||೯೦||

ಬಾಣಂತಿ ಮನೆ ಮುಂದೆ ಹೋಗಿ ಬಾ ಅಣ್ಣಯ್ಯ।
ಮತ್ತೊಂದು ತಮಟೆಯು ಹೊಯ್ಸುವೆ।
ಮತ್ತೊಂದು ತಮಟೆಯ ಹೊಯ್ಸುವೆ-ನಿನಕಂಡು।
ಬಾಗಾದಿ ಬಾಯ ಬಿಡುವಳು ||೯೧||

ಸಣ್ಣಂಗಿ ತೊಡದೀರು ಸರಪಳಿ ಹಾಕದೀರು ।
ಚನ್ನಿಗ ನೀ ಇಲ್ಲಿ ಬರದೀರು ।
ಚನ್ನಿಗ ನೀ ಇಲ್ಲ ಬರದೀರು–ನಿನಕಂಡು ।
ಹೆಣ್ಣಿಲ್ದ ತಾಯಿ ಮರುಗ್ಯಾಳು ॥೮೭೨॥

* * *

ಸೆರಗನ್ನು ಬಿಡು ನನ್ನ ಸೆರಗೀನ ಕಂದಯ್ಯ ।
ನಿರಿಯನ್ನು ಬಿಡು ನನ್ನ ರಘುರಾಮ ।
ನಿರಿಯನ್ನು ಬಿಡು ನನ್ನ ರಘುರಾಮ–ರಾಯಪ್ಪ ।
ಕಡಲೇಯ ಕೊಡುವೆ ನಡೆ ಮುಂದೆ ॥೮೭೩॥

* * *

ಕೊಂಬಿಲ್ಲದಾನೀಗೆ ಕೊಂಬು ಬರ್‍ತಾವೆಂದು ।
ಸಂಭ್ರಮ ನನ್ನ ಮನಿಯಾಗ ।
ಸಂಭ್ರಮ ನನ್ನ ಮನಿಯಾಗ–ಆತ್ಮನಿಗೆ ।
ಕೊಂಬೊಡೆದು ಬಂತು ಕೊನೆ ಮೀಶೆ ॥೮೭೪॥

* * *

ಹಸಿವಾದ ಮಕ್ಕಳಿಗೆ ಹತ್ತಿರೆಲ್ಲು ಮನೆಕಾಣೆ ।
ಹಸಿವ ಬಲ್ಲಮ್ಮ ಒಳಗಿಲ್ಲ ।
ಹಸಿವ ಬಲ್ಲಮ್ಮ ಒಳಗಿಲ್ಲ--ತೊಟ್ಟಿಲದ ।
ಶಿಶುವ ಕಂಡ್ಹಸಿವು ಅಡಗೀತು ॥೮೭೫॥

ಹೆಣ್ಣಿದ್ದ ಮನೀಗೆ ಕನ್ನಡಿ ಯಾತಕ್ಕ ।
ಹೆಣ್ಣು ಸಣ್ಣವಳು ಒಳಗಿರಲು ।
ಹೆಣ್ಣು ಸಣ್ಣವಳು ಒಳಗಿರಲು–ಸಂದಿನಿಯ ।
ಕನ್ನಡಿಯಂತೆ ಹೊಳೆಯುವಳು ॥೮೭೬॥

ಕಂದನ ಕರೆಯವ್ವ ಚಂದನದ ಗೊಂಬೀಯ ।
ಚಂದುಳ್ಳ ಅರಸಿ ಚಲುವೀಯ ।
ಚಂದುಳ್ಳ ಅರಸಿ ಚಲುವೀಯ–ಕಂದನ ।
ಬಿಂದಿಗೇಲಿ ನೀರ ತರುವವಳ ॥೮೭೭॥

ಕಂದಯ್ಯ ಅತ್ತ್ಯರ ಕಣಗೀಲು ಚಿಗಿತಾವು ।
ಒಣಗಿದ್ದ ಬಾಳಿ ಬೆಗಿತಾವು ।
ಒಣಗಿದ್ದ ಬಾಳಿ ಬೆಗಿತಾವು–ಬಾಲsನ ।
ಬರಡಾಕಳೆಲ್ಲ ಹೈನಾಗೆ ॥೮೭೮॥

* * *

ಬಾಳೆ ಹಣ್ಣಿನ ಮಾಟ ಬಾದಾಮಿ ಎಲೆತೋಟ ।
ಬಾಗಿಲಾಗಾಡು ಮಗನಾಟ ।
ಬಾಗಿಲಾಗಾಡು ಮಗನಾಟ–ಕಲಕೇರಿ ।
ತೇರೀನ ಮಾಟ ಬಲು ಮಾಟ ॥೮೭೯॥

* * *

ಹಾಲು ಕುಡಿಯಲು ಬಾರೊ ಬಾಲs ಕೃಷ್ಣನೆ ಬಾರೊ ।
ಗೋವಿಂದ ಬಾರೋ ಹರಿಬ್ಬಾರೊ ।
ಗೋವಿಂದ ಬಾರೊ ಹರಿಬಾರೊ–ತೊಟ್ಟಿಲದ ।
ಕಂದಯ್ಯ ಹಾಲು ಕುಡಿಬಾರೋ ॥೮೮೦॥

* * *

ಮೂಗುತಿ ಮುಂಭಾರ ಎಣಿಗಂಟು ಹಿಂಭಾರ ।
ನೀ ತಂದ ಬಣ್ಣ ನೆರಿಭಾರ ।
ನೀ ತಂದ ಬಣ್ಣ ನೆರಿಭಾರ--ನನರಾಯ ।
ಮೂರೆಳೀ ಗುಂಡು ಎದೆಭಾರ ॥೮೮೧॥

* * *

ಸಣ್ಣsನ ನಡುವಿಗೆ ಬಣ್ಣ ಉಟ್ಟರು ಭಾರ ।
ಕೆನ್ನೆಗೇ ಭಾರ ಹರಳೋಲೆ ।
ಕೆನ್ನೆಗೇ ಭಾರ ಹರಳೋಲೆ–ನನ ಕಂದ ।
ಬೆನ್ನೀಗೆ ಭಾರ ಶಿವದಾರ ॥೮೮೨॥

* * *

ಶಾಸ್ತ್ರsವ ಮಾಡೀರಿ ಸೂತರದ ಗೊಂಬೀಗೆ ।
ಲೋಕ ಪಾಲಕರ ಮಗನೀಗೆ ।
ಲೋಕ ಪಾಲಕರ ಮಗನೀಗೆ--ಮೊದಲಗಿತ್ತಿ ।
ಶಾಸ್ತ್ರsವ ಮಾಡ್ರಿ ನಡು ಮನೇಲಿ ॥೮೮೩॥

ಅಕ್ಷತೆ ಇಕ್ಕೀರಿ ಅಚ್ಚs ಮುತ್ತೈದೇರು ।
ಪಾರುವತಿ ಪಡೆದ ಮಗನೀಗೆ ।
ಪಾರುವತಿ ಪಡೆದ ಮಗನೀಗೆ-ಮೊದಲಗಿತ್ತಿ ।
ಅಕ್ಷತೇ ಇಕ್ಕಿ ಐವsರು ॥೮೮೪॥

* * *

ಆರೆಣ್ಣೆ ತೂರೆಣ್ಣೆ ಆರ್ಮ್ಯಾನ ದೊಳ್ಳೆಣ್ಣೆ ।
ನಾರೇರ ಕೈಯ ಉಗುರೆಣ್ಣೆ ।
ನಾರೇರ ಕೈಯ ಉಗುರೆಣ್ಣೆ--ಒತ್ತೀರಿ ।
ರಾಜ್ಯವಾಳುವರ ಮಗನೀಗೆ ॥೮೮೫॥

* * *

ಸೀಗೇಯ ಒತ್ತೀರಿ ಸೀತೆ ಕುಮಾರನಿಗೆ ।
ಸೀತಮ್ಮ ಪಡೆದ ಮಗನೀಗೆ ।
ಸೀತಮ್ಮ ಪಡೆದ ಮಗನೀಗೆ--ಮೊದಲಗಿತ್ತಿ ।
ಸೀಗೆ ಒತ್ಹೋಗಿ ಬೆಳಗಾಯ್ತು ॥೮೮೬॥

* * *

ಐರಣಕ್ಕೆ ಹೊರ್ಟಾರ ಐವsರು ಚೆಲುವೇರು ।
ಐವತ್ತು ವರಹದ ತೊಡಗೇಯ ।
ಐವತ್ತು ವರಹದ ತೊಡಗೇಯ-ತೊಟಗೊಂಡು ।
ಐರಣಕ ಹೊಂಟ ರೈವsರು ॥೮೮೭॥

* * *

ತೆಂಗಿನಾ ಮರಕೆ ತಿಂಗ್ಳಿಂದಾ ನೀರಿಲ್ಲ ।
ತಿಂಗ್ಳ ಬಾಣಂತಿ ತಂಗೆವ್ವ ।
ತಿಂಗ್ಳ ಬಾಣಂತಿ ತಂಗೆವ್ವ--ಮೀದ ನೀರು ।
ತೆಂಗೀನ ಮರಕೆ ಹರಿಪಾವು ॥೮೮೮॥

* * *

ಚಿನ್ನsದಾ ಕೈಕಡಗ ಚೆನ್ನೇರು ಇಟಗೊಂಡು ।
ಚಿನ್ನದಾಭರಣ ನಡುಬಾಗಿ ।
ಚಿನ್ನದಾಭರಣ ನಡುಬಾಗಿ--ಮುಡಿಜೋಲಿ ।
ಚೆನ್ನೇರು ಅಗಣಿ ಎರೆದಾರು ॥೮೮೯॥

ನೀರಿಲ್ಲಾದ ತಾವ ನೀರ್‍ಯಾಕ ನಿಂತಾವ ।
ಊರೀಗೆ ದೊಡ್ಡವರ ಮಗ ಮೀದ ।
ಊರೀಗೆ ದೊಡ್ಡವರ ಮಗ ಮೀದ--ತಾವೊಳಗೆ ।
ಬಾಳೀ ಮರ ಅರಳಿ ಹೂ ಫಲವಾಗಿ ||೪೯೦||

* * *

ಸೀತಮ್ಮ ಮೀದ್ನೀರು ಸೀತಾಳ ಪಾತಾಳ ।
ಸೀತಮ್ನ ಮೈದ್ನ ಲಕ್ಷ್ಮಣ ।
ಸೀತಮ್ನ ಮೈದ್ನ ಲಕ್ಷ್ಮಣ–ಮೀದನೀರು ।
ಸೇತೂವೆ ಕಟ್ಟಿ ಹರಿದಾವು ||೪೯೧||

* * *

ಎಲ್ಲಾರ ಮಕ್ಕಳ್ಹಾಂಗ ಅಲ್ಲ ನನ ಕಂದಯ್ಯ ।
ನಲ್ಲಸರ ಗಣ್ಣು ನಗೆ ಮುಖ ।
ನಲ್ಲಸರ ಗಣ್ಣು ನಗೆ ಮುಖ–ಕಾಮನ ।
ಬಿಲ್ಲು ಹೋತ್ತಾವ ಕುಡಿಹುಬ್ಬು ||೪೯೨||

* * *

ಔಡಲೆಲೆ ಮುದ್ದು ಬೆಳ್ಳಿ ತಾವರೆ ಮುದ್ದು ।
ಹಣ್ಣುಳ್ಳ ಮರಕೆ ಗಿಣಿ ಮುದ್ದು ।
ಹಣ್ಣುಳ್ಳ ಮರಕೆ ಗಿಣಿ ಮುದ್ದು–ಕಂದಯ್ಯ ।
ನೀ ಮುದ್ದು ನಮ್ಮ ಮನೆಗೆಲ್ಲ ||೪೯೩||

* * *

ನನ್ನಯ್ಯ ಬಾರೋ ಚಿನ್ನದುಂಗುರದವನೇ ।
ಬೆಳ್ಳೀಯ ಗೆಜ್ಜೆ ಬೆಳಗವನೆ ।
ಬೆಳ್ಳೀಯ ಗೆಜ್ಜೆ ಬೆಳಗವನೆ-ನನ್ನಪ್ಪ ।
ಯಾಕಳುವೆ ಮುದ್ದು ಅಳದೀರು ||೪೯೪||

* * *

ಹಣ್ಣು ಒಲ್ಲನಂತೆ ಹಾಲು ಉಗ್ಯಾರಂತೆ ।
ಚಿನ್ನದಂಥ ಕಂದ ಕೃಷ್ಣನಿಗೆ ।
ಚಿನ್ನದಂಥ ಕಂದ ಕೃಷ್ಣನಿಗೆ–ಆಯಾವ ।
ಪಾಪೀಯ ದೃಷ್ಟಿ ತಗಲೀತು ||೪೯೫||

ಅತ್ತsರೆ ಹಾಲಿಲ್ಲ ಕೆಟ್ಟsರೆ ಬುದ್ಧಿಲ್ಲ ।
ಮುತ್ತು ನನ್ನಯ್ಯ ಅಳದೀರು ।
ಮುತ್ತು ನನ್ನಯ್ಯ ಅಳದಿರು–ಈಗsಲೆ ।
ನೊರೆಹಾಲ ಕರೆದು ತರುವೆನು ॥೯೬॥

* * *

ಅಜ್ಜ ಅಜ್ಜಿಗೆ ಮುದ್ದು ಗೆಜ್ಜೆ ಕಾಲಿಗೆ ಮುದ್ದು ।
ಹಣ್ಣುಳ್ಳ ಮರಕ್ಕೆ ಗಿಣಿ ಮುದ್ದು ।
ಹಣ್ಣುಳ್ಳ ಮರಕ್ಕೆ ಗಿಣಿ ಮುದ್ದು–ಕಂದಯ್ಯ ।
ನೀ ಮುದ್ದು ನಮ್ಮ ಬಳಗಕ್ಕೆ । ॥೯೭॥

* * *

ಹಾಲನ್ನ ಕುಡಿವಾಗ ಗಿಳಿಯೊಂದು ಬಂದೀತು ।
ಗಿಳಿಯು ಕೊಂಡೋದ ಒಳಲೇಯ ।
ಗಿಳಿಯು ಕೊಂಡೋದ ಒಳಲೇಯ–ತರುವುದಕೆ ।
ಆಳಿಗೊಂದಾಳು ಹೊರಟಾವು ॥೯೮॥

* * *

ಹಾಲು ಕುಡಿಯಲು ಬಾರೊ ಬಾಲಕೃಷ್ಣಯ್ಯ ಬಾರೊ ।
ಗೋವಿಂದ ಬಾರೊ ಹರಿ ಬಾರೊ ।
ಗೋವಿಂದ ಬಾರೊ ಹರಿ ಬಾರೊ–ತೊಟ್ಟಿಲದ ।
ಕಂದಯ್ಯ ಹಾಲ ಕುಡಿಬಾರೊ ॥೯೯॥

* * *

ಸಂಜೀ ಸಂಪೀಗೆ ಉದಯsದ ಮಲ್ಲೀಗೆ ।
ಮಧ್ಯಾಹ್ನವಾದ ಮುಡಿವಾಳ ।
ಮಧ್ಯಾಹ್ನವಾದ ಮುಡಿವಾಳ–ಪಚ್ಚೆತೆನೆ ।
ನನ್ನ ಕಂದsನ ಜಡೆಯಲ್ಲಿ ॥೧೦೦॥

* * *

ಆಡೂವರಿಲ್ಲದೆ ಅಂಗಳಭಿನ್ನಾಗಿ ।
ಹೂಡಿದರು ಹೊನ್ನ ಬುಗರೀಯ ।
ಹೂಡಿದರು ಹೊನ್ನ ಬುಗರೀಯ–ಹೊಯ್ಲದಮೇಲೆ ।
ಮೊಮ್ಮಕ್ಕಳಾಡಿದರು ಧೂಳೆದ್ದು ॥೧೦೧॥

ಕಂದಯ್ಯ ಕಾಡೂನ ಕೆಂದಿ ನೊರೆಹಾಲೀಗೆ ।
ನಂದಽದಾ ದೀವಿಗೆಯ ಬೆಳಕಿಗೆ ।
ನಂದಽದಾ ದೀವಿಗೆಯ ಬೆಳಕಿಗೆ-ಬಾಲಯ್ಯ ।
ತಾನೆದ್ದು ಕಾಡುವ ಇರುಳೆದ್ದಾ ||೯೦೨||

* * *

ಹಸುಮಗುವೆ ಚಿನ್ನಽವೆ ಮಿಸುನಿ ಹೊಂಬಣ್ಣಽವೆ ।
ಬಸುರೇರ ಹಣೆಯ ತಿಲಕಽವೆ ।
ಬಸುರೇರ ಹಣೆಯ ತಿಲಕಽವೆ-ನನ್ನಪ್ಪ ।
ಹೊಸ ಮುತ್ತಿನ ಹೊನ್ನ ಕಲಶಽವೆ ||೯೦೩||

* * *

ಬಾಳೆಯ ಬುಡದಲ್ಲಿ ಬಾಳೆಯ ಸಸಿ
ಬಾಳೀಗೆ ಹಬ್ಬಿದವು ಶತಬಳ್ಳಿ ।
ಬಾಳೀಗೆ ಹಬ್ಬಿದವು ಶತ ಬಳ್ಳಿ-ಬಾಲಕನ ।
ತೋಳೀಗೆ ಹಬ್ಬಿದವು ಬಿಳಿ ಚಿಬ್ಬು ||೯೦೪||

* * *

ಉಪ್ಪಿಲ್ಲದುಣವಲ್ಲ ಉಪಚಾರದ ಕಂದಯ್ಯ ।
ಉಪ್ಪರಿಗೆ ಇಲ್ಲದ ಒರಗೊಲ್ಲ ।
ಉಪ್ಪರಿಗೆ ಇಲ್ದ ಒರಗೊಲ್ಲ-ನನಕಂದ ।
ಹೊತ್ತು ಇಲ್ದ ದಾರಿ ನಡಿಯಽನು ||೯೦೫||

* * *

ತಮ್ಮನಽ ತೊಟ್ಟೀಲ ಬಂದ್‌ತೂಗೆ ಅತಿಗೆವ್ವ ।
ಮುಚಿಗೋಳ ಕೊರಳ ಪದಕ್ಕಽವ ।
ಮುಚಿಗೋಳ ಕೊರಳ ಪದಕಽವ-ನಿನತಮ್ಮ ।
ಬೆಚ್ಚ್ಯಾನು ಬೆಳ್ಳಿ ಬೆಳಕೀಗೆ ||೯೦೬||

* * *

ತೊಟ್ಟಿಲ ಬಾಗಿಲಿಗೆ ದೃಷ್ಟಿ ತಾಕೀತೆಂದು ।
ಕಟ್ಟಿದ್ದ ಪಾಗು ತೆರವೂದು ।
ಕಟ್ಟಿದ್ದ ಪಾಗು ತೆರವೂದು-ಮರೆಯಲ್ಲಿ ।
ದೃಷ್ಟಿ ತುಂಬಿದಳು ಮಡಿಲಾಗ ||೯೦೭||

ಹಗಲಿಗೆ ಕಂದನ ಮಾಡಿ ರಾತ್ರಿ ಜೋಗುಳ ಹಾಡಿ ।
ಹರಿಹರನೆಂದು ಹೆಸರಿಟ್ಟು ।
ಹರಿಹರನೆಂದು ಹೆಸರಿಟ್ಟು-ಬಾಲಯ್ಯ ।
ಸಿರಿದೇವಿ ಕಂದ ಸುಖಬಾಳೆ ॥೯೦೮॥

* * *

ಹಸುಗೂಸು ಕಾಡಿದರ ತುಸು ಕೆಲಸ ನಡಿಯೂವ ।
ಹಸಿದು ಬಂದಣ್ಣ ಉಣಲಿಲ್ಲ ।
ಹಸಿದು ಬಂದಣ್ಣ ಉಣಲಿಲ್ಲ-ನನಮನೆಯ ।
ಕಸ್ತೂರಿ ಕೈಯ ಬಿಡಲಿಲ್ಲ ॥೯೦೯॥

* * *

ಸಂಜೆ ಸಿರಿದೇವಿ ಬಂದ್ಹೋಗು ಮನಿತನಕ ।
ಮಂದಾಲಿಗ್ಯಾವೆ ಮರಿಗಾವೆ ।
ಮಂದಾಲಿಗ್ಯಾವೆ ಮರಿಗಾವೆ-ನೀ ಕೊಟ್ಟ ।
ಕಂದಯ್ಯ ಹಾಸ ತೊಡಿಮ್ಯಾಲ ॥೯೧೦॥

* * *

ಆಡುವ ಮಕ್ಕಳೇ ನನ್ನ ಅರಗಿಣಿಯು ಕಂಡಿರಾ ।
ಕಂಡ ಮಕ್ಕಳೇ ಕರೆತನ್ನಿ ।
ಕಂಡ ಮಕ್ಕಳೇ ಕರೆತನ್ನಿ-ಕಂದಯ್ಯನ ।
ಕಾಡದೆ ಆಡಿ ಬರುವವನ ॥೯೧೧॥

* * *

ಸೀಗೇ ಮೆಳೆಯಲ್ಲಿ ಸಿಕ್ಕೀತು ಅರಗೀಣಿ ।
ಕೊಕ್ಕೆಲ್ಲ ಮುತ್ತು ನವರತ್ನ ।
ಕೊಕ್ಕೆಲ್ಲ ಮುತ್ತು ನವರತ್ನ-ಅರಗೀಣಿ ।
ಸಿಕ್ಕೀತು ಶಿವನ ದಯದಿಂದ ॥೯೧೨॥

* * *

ಯಾಕ ಅಳತಾನಂತ ಎಲ್ಲಾರು ಕೇಳ್ಯಾರ ।
ಕಾಯದ ಹಾಲ ಕೆನಿ ಬೇಡಿ ।
ಕಾಯದ ಹಾಲ ಕೆನಿ ಬೇಡಿ-ನನ್ನಪ್ಪ ।
ಅತ್ತತ್ತು ಸೊರಗಿ ಬಳಲೀದ ॥೯೧೩॥

ಆಡಿ ಬಾರೋ ನನ್ನ ಅಪರಂಜಿ ಚಿನ್ನsವೆ ।
ಸೋದರತ್ತೇರಿಗತಿ ಮುದ್ದು ।
ಸೋದರತ್ತೇರಿಗತಿ ಮುದ್ದು-ನನಕಂದ ।
ಆಡಿ ಬಾ ಶಿವನ ಮಠಕ್ಹೋಗಿ ||೯೧೪||

* * *

ಅಂಬೆಗಾಲಿಕ್ಕ್ಯಾತ ತುಂಬೀಯು ಕರೆವನು ।
ಹಂಬಲಿಸಿ ತಾಯ ಮೊಲೆಯನ್ನು ।
ಹಂಬಲಿಸಿ ತಾಯ ಮೊಲೆಯನ್ನು-ತುಯ್ದಾಡಿ ।
ಬೆಂಬಿಡದೆ ಹಾಲ ಕುಡಿವsನು ||೯೧೫||

* * *

ಯಾರು ಹೊಡೆದರು ನನ್ನ ಮುದ್ದು ಕಂದಯ್ಯsನ ।
ಗೋಪುರದ ಲಾಡೋ ಗರುಡನ ।
ಗೋಪುರದ ಲಾಡೋ ಗರುಡನ-ಸಾಮೀಯ ।
ಯಾ ತಾಯಿ ಹೊಡೆದು ಅಳಿಸ್ಯಾಳ ||೯೧೬||

* * *

ಚನ್ನಿಗನ ಹಚ್ಚಡವ ಚನ್ನಾಗಿ ತೊಳಿಯವ್ವ ।
ಚನ್ನಿಗರಾಯ್ನ ಹಳದೀಯ ।
ಚನ್ನಿಗರಾಯ್ನ ಹಳದೀಯ-ಹಚ್ಚಡವ ।
ಚಿನ್ನದ ನೀರಲ್ಲಿ ತೊಳಿಯವ್ವ ||೯೧೭||

* * *

ಕಂದನ್ನ ಕರೆಯವ್ವ ಬಿಂದಿಗೇ ಬಾಯವನ ।
ಬಂದ್ ಬಂದು ನಮ್ಮ ಕೆಲಸsವ ।
ಬಂದ್ ಬಂದು ನಮ್ಮ ಕೆಲಸsವ-ಕೆಡಿಸೂವ ।
ನಂದಿ ಈಶ್ವರನ ಕರೆಯವ್ವ ||೯೧೮||

* * *

ಯಾರು ಹೊಡೆದರು ನನ್ನ ಜೀರಿಗೆ ಮೈಯsಗ ।
ಈರುಳ್ಳಿ ಮೊಗ್ನ ಮುಖದವನ ।
ಈರುಳ್ಳಿ ಮೊಗ್ನ ಮುಖದವನ-ಕಂದಯ್ಗ ।
ಯಾ ತಾಯಿ ಹೊಡದು ಅಳಿಸ್ಯಾಳ ||೯೧೯||

ಮುದ್ದು ನನ್ನಯ್ಯ ನಿದ್ದೇಯ ಅರಮಽನಿ ।
ವಜ್ರಂಗಿ ಮುತ್ತು ನಾಗಸರ ।
ವಜ್ರಂಗಿ ಮುತ್ತು ನಾಗಸರ–ಕಿನ್ನಽರಿ ।
ಸೂಳೇರಂಗಡಿಗೆ ನಿಲುಭಾರ ॥೯೨೦॥

* * *

ಜಾಣ ಜಾಣರಿಗಿಂತ ಜಾಣನನ ಕಂದಯ್ಯ ।
ಜಾಜಿ ಹೂವಿನ್ಯಾಗ ಗಿಣಿಮಾಡಿ ।
ಜಾಜಿ ಹೂವಿನ್ಯಾಗ ಗಿಣಿಮಾಡಿ–ಕಳುಹೀದೆ ।
ಜಾಣಿ ಅಕ್ಕಯ್ನ ಕಂದಯ್ಗ ॥೯೨೧॥

* *

ಮುದ್ದು ನನ್ನಯ್ಯ ಒದ್ದು ಬಿಟ್ಟಾ ಚಂಡು ।
ಸವದತ್ತಿಯಾಚೆ ಮುನವಳ್ಳಿ ।
ಸವದತ್ತಿಯಾಚೆ ಮುನವಳ್ಳಿ–ಸೂಳೇರು ।
ಒದ್ದು ಬಿಟ್ಟ ಚೆಂಡ ತಡೆದಾರು ॥೯೨೨॥

ಮಕ್ಕಳಽ ಪಾಶಕ್ಕೆ ಹಕ್ಕಿ ಕಟ್ಟಿತು ಗೂಡ ।
ಸಿಕ್ಕೀತು ಶಿವನ ಬಲೆಯಲ್ಲಿ ।
ಸಿಕ್ಕೀತು ಶಿವನ ಬಲೆಯಲ್ಲಿ–ಬಲೆಗಾರ ।
ಮಕ್ಕಳ ತಾಯ ಕೊಲಬೇಡ ॥೯೨೩॥

* * *

ಹಾಲುಂಬ ಬಟ್ಟಽಲು ಕೊಟ್ಟಽರು ಬಾಲಂಗೆ ।
ದೇವೇಂದ್ರ ಕೊಟ್ಟ ಶಚಿಕೊಟ್ಟ ।
ದೇವೇಂದ್ರ ಕೊಟ್ಟ ಶಚಿಕೊಟ್ಟ–ಬಟ್ಟಽಲು ।
ಯಾರು ಕೇಳಿದರು ಕೊಡಲೊಲ್ಲ ॥೯೨೪॥

* * *

ಬಲವಂತ ಬರತಾನ ಬಲಕಾಗೆ ಕಾವೇರಿ ।
ಬಲ ಶೀಲವಂತ ತಮ್ಮಯ್ಯ ।
ಬಲ ಶೀಲವಂತ ತಮ್ಮಯ್ಯ--ಬರತಾನ ।
ಬಲಕಾಗೆ ಗಂಗೆ--ಗೌತಮಿ ॥೯೨೫॥

ಸಣ್ಣಂಗಿ ತೊಡದೀರೊ ಸರಪಾಳ್ಯಾ ಕಾದೀರೋ ।
ಚನ್ನೀಗ ನೀನಿಲ್ಲಿ ಬರದೀರೋ ।
ಚನ್ನೀಗ ನೀನಿಲ್ಲಿ ಬರದೀರೋ--ನಿನಕಂಡು ।
ಹೆಣ್ಣಿಲ್ಲದವ್ವ ಮರುಗ್ಯಾಳೊ ||೯೨೬||

* * *

ಬಾಣಂತಿ ಮನಿಮುಂದೆ ಹೋಗಿ ಬಾ ಅಣ್ಣಯ್ಯ ।
ಮತ್ತೊಂದು ತವುಟೀಯು ಹೊಯಿಸೂವೆ ।
ಮತ್ತೊಂದು ತವುಟೀಯು ಹೊಯಿಸೂವೆ-ನಿನಕಂಡು ।
ಭಾಗಾದಿ ಬಾಯ ಬಿಡುವsಳು ||೯೨೭||

* * *

ಗಂಡನ್ಮನೀಗ್ಹೋಕಾಕಿ ಗೊಂಬಿ ತೊಟ್ಟೇಲೊಯ್ಯೆ ।
ಗಂಡsಗ ಒಯ್ಯ ಸೆಳಿಮಂಚ ।
ಗಂಡsಗ ಒಯ್ಯ ಸೆಳಿಮಂಚ--ನನತಂಗಿ ।
ಕೂಸೀಗೆ ಒಯ್ಯs ಹಸರಂಗಿ ||೯೨೮||

* * *

ಬಾಡದೀರು ಬಳ್ಳಿ, ನೀ ಬಣ್ಣ ಕೆಡದೀರು ।
ಗ್ವಾಡೀಯು ಮ್ಯಾಲೆ ಕೊಡಿ ಬಿಡು ।
ಗ್ವಾಡೀಯು ಮ್ಯಾಲೆ ಕೊಡಿ ಬಿಡು-ಬಳ್ಳಿನೀ ।
ನಾಡಗಾರರಿಗೆ ನೆರವಾಗು ||೯೨೯||

* * *

ಅಳುವ ಕಂದನ ತುಟಿಯು ಹವಳದ ಕುಡಿಹಂಗ ।
ಕುಡಿಹುಬ್ಬು ಬೇವಿನೆಸಳ್ಹಂಗ ।
ಕುಡಿಹುಬ್ಬು ಬೇವಿನೆಸಳ್ಹಂಗ-ಕಣ್ಣೋಟ ।
ಶಿವನ ಕೈಯಲಗು ಹೊಳಿಧಂಗ ||೯೩೦||

* * *

ಅಗ್ಗಿಣೀ ಮಿದ್ದು ಮೊಗ್ಗು ಮಂಡೆಗೆ ತುಂಬಿ ।
ಬಗ್ಗಿ ಚಾವಡಿಗೆ ಹೊರಟಾರ ।
ಬಗ್ಗಿ ಚಾವಡಿಗೆ ಹೊರಟಾರ--ಕಂದಯ್ಯ ।
ಮುಗ್ಗ ಬಾಡೀತೋ ಬಿಸಲಾಗ ||೯೩೧||

ನಾಗರಃ ಕಲ್ಲತ್ತಿ ಹೂವಕೊಯ್ಯವನ್ಯಾರಿ ।
ನಾಗೇಂದ್ರ ನಳಿಯ ಬಲಿಯಿಂದ್ರ ।
ನಾಗೇಂದ್ರ ನಳಿಯ ಬಲಿಯಿಂದ್ರ-ಕೊಯ್ದ ಹೂವ ।
ನಾಗಕನ್ನೆಯರ ತುರುಬೀಗೆ ||೯೩೨||

* * *

ಜಾಣರೂ ನನ್ನಯ್ದ ಜಾತ್ರಿಗೆ ಹೋಗ್ವಾಗ ।
ಜಾರಿ ಬಿದ್ದಾವ ಬಿಳಿ ಎಲಿ ।
ಜಾರಿ ಬಿದ್ದಾವ ಬಿಳಿ ಎಲಿ-ಸೂಳೇರು ।
ತಾಳೆ ಹೂವೆಂದು ಮುಡಿದಾರು ||೯೩೩||

* * *

ಏರೀಯ ಹತ್ಯಾನ ಎಳೆಗೊಂಬಿ ಮುರಿದಾನ ।
ಸಾರ್‍ಯಾನ ಸಣ್ಣ ದನಿಯಾಗ ।
ಸಾರ್‍ಯಾನ ಸಣ್ಣ ದನಿಯಾಗ-ಈರಣ್ಣ ।
ಹಾರ್‍ಯಾನ ಚಿಗರಿ ಮರಿ ಹಾಂಗ ||೯೩೪||

* * *

ನನ್ನಯ್ಯ ನೀ ಬಾಳು ಇನ್ನು ಸಾವಿರಕಾಲ ।
ಹೊನ್ನೇಯ ಬುಡದ ಗರಿಕೇಯ ।
ಹೊನ್ನೇಯ ಬುಡದ ಗರಿಕೇಯ-ಬೇರಿನ್ಹಾಂಗ ।
ಮೊಮ್ಮಕ್ಕಳೆತ್ತಿ ಸುಖಿಯಾಗು ||೯೩೫||

* * *

ಕಂದಽನ ಕರೆಯವ್ವ ಚಂದನದ ಬೊಂಬೀಯ ।
ಚೆಂದುಳ್ಳ ಅರಸಿ ಚಲುವೀಯ ।
ಚೆಂದುಳ್ಳ ಅರಸಿ ಚಲುವೀಯ-ಕಂದಽನ ।
ಬಿಂದಿಗ್ಯಾಗ ನೀರು ತರುವವಳ ||೯೩೬||

* * *

ಸುಮ್ಮನೆ ಅಳಬೇಡ ಸೂರ್ಯಽನ ಬೆಳಕಲ್ಲಿ ।
ಘಮ್ಮನ್ನೊ ಜಾಜಿ ಗಂಧಽವ ।
ಘಮ್ಮನ್ನೊ ಜಾಜಿ ಗಂಧಽವ-ಇಡುವೇನು ।
ಸುಮ್ಮನೆ ಮಲಗು ಕಂದಮ್ಮ ||೯೩೭||

ಅತ್ತsರಿ ಅಳುವಲ್ಲ ಕಚ್ಚಿವಾಡೊ ಮಗಳಲ್ಲ ।
ಅತ್ತ ಬಂದಾಳು ನಿಮ್ಮಜ್ಜಿ ।
ಅತ್ತ ಬಂದಾಳು ನಿಮ್ಮಜ್ಜಿ-ಕಂದವ್ವ ।
ಬಾಚಿ ತಚ್ಬ್ಯಾಳ ಬಲಭುಜವ ||೯೩೮||

* * *

ಕೂಸೊಂದು ಕುಂದsಣ ಏಸೊಂದು ಜಾವ್ರೂಳ ।
ದೇಶಕ್ಕ ಜಾsಣ ಅಗಸಾಲಿ ।
ದೇಶಕ್ಕ ಜಾಣ ಅಗಸಾಲಿ-ಮಾಡ್ಯಾನ ।
ಕೂಸು ಕಂದಯ್ನ ನರಳೀಲಿ ||೯೩೯||

* * *

ಹಾರೈಸಿ ಹಡೆದವ್ವ ಒಳಗೇನು ಮಾಡುತೀ ।
ನೋಡು ಬಾ ತಾಯಿ ಮಗನಾಟಾ ।
ನೋಡು ಬಾ ತಾಯಿ ಮಗನಾಟಾ--ನಿನಬಾಲಾ ।
ಗುಲಗಂಜಿ ಗಿಡಕ ಗುರಿಯಿಟ್ಟ ||೯೪೦||

* * *

ಹೆಣ್ಮಕ್ಕಳ್ಹುಟ್ಟಿದರೆ ಪರರಿಗೆ ಸೊಸೆಯಕ್ಕು ।
ಗಂಡ್ಮಕ್ಕಳ್ಹುಟ್ಟಿ ಮನೆಯಕ್ಕು ।
ಗಂಡ್ಮಕ್ಕಳ್ಹುಟ್ಟಿ ಮನೆಯಕ್ಕು-ಹಡೆದಪ್ಪ ।
ಎಲ್ಲೋದರು ನಿನ್ನ ಹೆಸರಕ್ಕು ||೯೪೧||

* * *

ಸಂಜೆಯಾಯಿತು ನನ್ನ ಸೌಭಾಗ್ಯದ ಸಂಜಿ ।
ದನ ಬಂದು ಮನೆಗೆ ಕರ ಬಂದು ।
ದನ ಬಂದು ಮನೆಗೆ ಕರ ಬಂದು-ನನಬಾಳ ।
ತಾ ಬಂದ ಸಿರಿಯು ತುಳುಕೂತ ||೯೪೨||

* * *

ಮುತ್ತೀನ ಮೂಗುತಿ ಮೂರೆಸಳ ಕ್ಯಾದೀಗಿ ।
ಮುಚ್ಚಿ ಕೊಂಡಾಳ ಹೆರಳಾಗ ।
ಮುಚ್ಚಿ ಕೊಂಡಾಳ ಹೆರಳಾಗ--ಕಂದವ್ವನ ।
ಎತ್ತಿ ಕೊಂಡವರಿಗನುಮಾನ ||೯೪೩||

ತವರೂರಿಗ್ಹೋದಾಗ ನವಿಲುಬಣ್ಣದ ಪಕ್ಷಿ ।
ತಲಿಬ್ಯಾನಿ ಎದ್ದು ಅಳುತ್ತಿತ್ತು ।
ತಲಿಬ್ಯಾನಿ ಎದ್ದು ಅಳತಿತ್ತು-ಕಂದಽನ ।
ಚಲುವೀಕಿ ನೋಡಿ ನಗುತ್ತಿತ್ತು ॥೯೪೪॥

* * *

ಮಕ್ಕಽಳು ಮನಿತುಂಬ ಕಷ್ಟಕೆ ಒಬ್ಬಳು ।
ಭತ್ತಕೊಡು ಶಿವನೆ ಅನುಗಾಲ ।
ಭತ್ತ ಕೊಡು ಶಿವನೆ ಅನುಗಾಲ-ಮಕ್ಕಳಿಗೆ ।
ನುಚ್ಚಂಬಲಿ ಮಾಡಿ ಸಲುಹೇನ ॥೯೪೫॥

* * *

ಅಚ್ಚಽ ಮುದ್ದಂಗಿ ವಜ್ರದ ಕೀಲಂಗಿ ।
ಮಾರೀವೋ ನಿನ್ನ ಮೈಯಂಗಿ ।
ಮಾರೀವೋ ನಿನ್ನ ಮೈಯಂಗಿ-ಕಂದಯ್ಯ ।
ಮದ್ದೂರ ಸಂತೆ ಮಳಿಗ್ಯಾಗ ॥೯೪೬॥

* *

ಯಾಕತ್ತಿ ನನ್ನ ಗೋಪಿದೇವಿ ಕಂದಯ್ಯ ।
ಗೋಪುರದೊಳಗಾಡೊ ಚಿಲಕಾಯಿ ।
ಗೋಪುರದೊಳಗಾಡೊ ಚಿಲಕಾಯಿ-ಚಿಂತಾಮಣಿ ।
ಹಸುಳೆ ಬಂದಾಡೊ ತೊಡಿಮ್ಯಾಲ ॥೯೪೭॥

* * *

ಕಲ್ಹತ್ತಿ ಮರಕ ಕಟ್ಟ್ಯಾರ ಏಣೀಯ ।
ರಾಮಽರ ಮಡದಿ ಸೀತವ್ವ ।
ರಾಮಽರ ಮಡದಿ ಸೀತವ್ವ-ಕಟ್ಟಿದೇಣಿ ।
ಶಿವನ ಬಳಿಗ್ಹೋಗಿ ಅರುವಾದೋ ॥೯೪೮॥

ಅಳಗಲ್ಲಿ ಮಾಗಾಯಿ ಬೆರಳಲ್ಲಿ ಹೊನ್ನುಂಗ್ರ ।
ಅರಳೀಯ ಮರದ ನೆರಳಾಗ ।
ಅರಳೀಯ ಮರದ ನೆರಳಾಗ-ಆಡೂವ ।
ತರುಳ ನೀನ್ಯಾರ ಮಗನಯ್ಯ ॥೯೪೯॥

ಆಡೂತ ಬಂದಯ್ಗ ಹಾಲೂ ಸಕ್ಕರೆ ಕೊಡುವೆ ।
ಮಾಡೀಸಿ ಕೊಡುವೆ ಮರಿಗಿಲ್ಕಿ ।
ಮಾಡೀಸಿ ಕೊಡುವೆ ಮರಿಗಿಲ್ಕಿ-ಕಂದಯ್ಗ ।
ತಿದ್ದೀಸಿ ಕೊಡುವೆ ಬಸವನ್ನ ||೯೫೦||

* * *

ಹಸಿರು ಹಾವಿನ್ಹಾಂಗ ಹಸಿದು ಬಂದ ಕಂದಯ್ಯ ।
ಅಸಮಾನಕಾರ ಒಳಗಿರುವ ।
ಅಸಮಾನಕಾರ ಒಳಗಿರುವ-ಕತ್ತೀಯ ।
ಮಸೆದು ನುಂಗವರ ಮಗ ಬಂದ ||೯೫೧||

* * *

ಅಜ್ಜಣ್ಣನಾಗು ಗೆಜ್ಜೆ ಹುರಿಯಾಗು ।
ಸಹದೇವನಾಗು ಶುಚಿಯಾಗು ।
ಸಹದೇವನಾಗು ಶುಚಿಯಾಗು-ನನ್ನಯ್ಯ ।
ಭೀಮಣ್ಣನ್ಹಾಂಗ ಸುಖಬಾಳು ||೯೫೨||

* * *

ನಿದ್ದಿ ಬಾರದ ಕಣ್ಗೆ ಮದ್ದೇನೆ ಮರವೇನೆ ।
ಗದ್ದೇಲಿ ಬೆಳೆದ ಗರುಕೇಯ ।
ಗದ್ದೇಲಿ ಬೆಳೆದ ಗರುಕೇಯ-ಸೊಪ್ಪು ತಂದು ।
ಮದ್ದು ಮಾಡಿದರ ಮಲಗ್ಯಾನ ||೯೫೩||

* * *

ನನ್ನಯ್ನ ಆಟವೆ ಮಲ್ಲಾಡ್ದ ಗೀತವೆ ।
ಒಳ್ಳೆ ತಾವರೆಯ ಪದ್ಮವೆ ।
ಒಳ್ಳೆ ತಾವರೆಯ ಪದ್ಮವೆ-ಬೆಳದಿಂಗಳು ।
ಎಲ್ಲರಂಗಳಕ ಹರಿದಾವು ||೯೫೪||

* * *

ಜಾಣನ ಕಿನ್ನರಿ ಜಾತ್ರೀಗೆ ನಿಲುಭಾರ ।
ಜಾಣ ನನ್ನಯ್ನ ಮರುವೀನ ।
ಜಾಣ ನನ್ನಯ್ನ ಮರುವೀನ-ಕಿನ್ನರಿ ।
ಜೋನುಗರಂಗಡಿಗೆ ನಿಲುಭಾರ ||೯೫೫||

ಆರು ತೇರಿನ ಅರಸೆ ಮೂರು ತೇರಿನ ಮುನಿಯೆ ।
ಗೊಂಬೆ ತೇರೀನ ದಳಪತಿಯೆ ।
ಗೊಂಬೆ ತೇರೀನ ದಳಪತಿಯ-ನಂಜಯ್ನ ।
ಪಡೆದವ್ವನ್ಯಾರು ಧರೆಯಾಗ ॥೯೫೬॥

* * *

ಹೊಟ್ಟಿ ನೋವು ಎಂದವಳು ಪಟ್ಟೀ ಬಿಚ್ಚಿಟ್ಟ್ಯಾಳು ।
ಹೊಲ ಮನಿಗೆ ಓಡ್ಯಾಡಿ ।
ಹೊಲ ಮನಿಗೆ ಓಡ್ಯಾಡಿ-ನನತಂಗಿ ।
ಚಿಕ್ಕ ಬಾಲಕನ ಹಡದಾಳ ॥೯೫೭॥

* * *

ಕಂದನ ಹೆರಲಾಗಿ ಕಂದಿ ಅಮ್ಮನ ಮುಖವು ।
ಕಂದಯ್ಯ ನಾಡಿ ಬರುವಾಗ ।
ಕಂದಯ್ಯ ನಾಡಿ ಬರುವಾಗ-ಅಮ್ಮಯ್ಯ ।
ಕುಂದಾಟನಾಡಿ ನಗತಾಳೆ ॥೯೫೮॥

* * *

ಮೂರು ತಿಂಗಳಿಗೆ ಮುಖ ಬೆಳ್ಳಗಾಗಿತ್ತು ।
ಹುಸಿಯಿಲ್ಲದ್ಹೇಳು ತಂಗೆವ್ವ ।
ಹುಸಿಯಿಲ್ಲದ್ಹೇಳು ತಂಗೆವ್ವ-ನಿನಮಾರಿ ।
ಹಸನಾಗಿ ಚಿನ್ನ ಎಸೆದಂಗೆ ॥೯೫೯॥

* * *

ಹೊಳೆಸಾಲ ಹರದೀಗಿ ಒಳತುಟಿಗೆ ಜಾಜೀಲಿ ।
ತಾಂಬರದ ಕೊಡವು ಬಗಲಾಗ ।
ತಾಂಬರದ ಕೊಡವು ಬಗಲಾಗ-ನನಗೆಳತಿ ।
ಸಾಕೇನ ಗರತಿ ಸವಿನೀರ ॥೯೬೦॥

* * *

ಪಟ್ಟಣಕ ಬಂದಾವ ಬಟ್ಟ ಬಾರೀ ಹಣ್ಣ ।
ಊರಿಗ್ಹೋಗುವಣ್ಣ ಇವನೊಯ್ಯೊ ।
ಊರಿಗ್ಹೋಗುವಣ್ಣ ಇವನೊಯ್ಯೊ-ಆ ಊರ ।
ಕಟ್ಟಿಮನಿ ಗೆಳತಿ ಬಸುರ್ಹಾಳ ॥೯೬೧॥

ಗೆಳತಿ ಹಡದಾಳಂತ-ನಗುತ ಬಾಗೀನೊಯ್ದು ।
ಜರತಾರದಂಗಿ ಮುಯ್ಯೊಯ್ದು ।
ಜರತಾರದಂಗಿ ಮುಯ್ಯೊಯ್ದು-ಗೆಳತೆವ್ವ ।
ಜನಕೊಪ್ಪು ಮಗನ ಹಡದಾಳ ॥೯೬೨॥

* * *

ಕೊಂಬಿಲ್ಲದಾನೀಗೆ ಕೊಂಬು ಬರ್‍ತಾವೆಂದು ।
ಸಂಭ್ರಮ ನನ್ನ ಮನಿಯಾಗ ।
ಸಂಭ್ರಮ ನನ್ನ ಮನಿಯಾಗ-ಆತ್ಮನಿಗೆ ।
ಕೊಂಬೊಡೆದು ಬಂದ್ವು ಕುಡಿಮೀಸಿ ॥೯೬೩॥

* * *

ಅಳಬ್ಯಾಡ ನನಕಂದ ನಿನಗೆ ಜೋಗುಳ ಹಾಡಿ ।
ಕರೆತಂದು ಹಾಲ ಕುಡಿಸೇನ ।
ಕರೆತಂದು ಹಾಲ ಕುಡಿಸೇನ-ಮಾವನ ಮಗಳ್ನ ।
ಎಳೆತಂದು ಧಾರಿ ಎರದೇನು ॥೯೬೪॥

ಯಾರಾಸೆ ನಿನಗ ಪಾರಿವಾಳದ ಪಕ್ಷಿ ।
ನೀರಾಸೆ ಮರದ ನೆರಳಾಸೆ ।
ನೀರಾಸೆ ಮರದ ನೆರಳಾಸೆ-ಕಂದಯ್ಯ ।
ನಿನ್ನಾಸೆ ನಮ್ಮ ಮನಿಗೆಲ್ಲ ॥೯೬೫॥

* * *

ಅಳುವ ಕಂದನ ಬಿಟ್ಟು ಹೊಳಿಯ ನೀರಿಗೆ ಹೋಗಿ ।
ಗಿಳಿಯ ಸಂತೈಸಿ ಬರತಾಳ ।
ಗಿಳಿಯ ಸಂತೈಸಿ ಬರತಾಳ-ನಿಮ್ಮವ್ವ ।
ಹೊಳೆ ಮಿಂದು ಗಂಗೆ ತರತಾಳ ॥೯೬೬॥

* * *

ಬಾಳೀ ಹಣ್ಣಿನ್ಹಾಂಗ ಬಾಲಕನ ಮೈ ಚಂದ ।
ಏನುಂಡು ಈ ಮಗನ ನೀಹಡೆದೆ ।
ಏನುಂಡು ಈ ಮಗನ ನೀಹಡೆದೆ-ತವರಮನೆ ।
ಹಾಲುಂಡು ಹಸರು ಬಳೆಯುಟ್ಟು ॥೯೬೭॥

ಸೆರಗನ್ನು ಬಿಡು ನನ್ನ ಸೆರಗೀನ ಕಂದಯ್ಯ ।
ನೆರಿಯನ್ನು ಬಿಡು ನನ್ನ ರಘುರಾಮ ।
ನೆರಿಯನ್ನು ಬಿಡು ನನ್ನ ರಘುರಾಮ-ರಾಮಣ್ಣ ।
ಕಡಲೇಯ ಕೊಡುವೆ ನಡೆಮುಂದೆ ||೯೬೮||

* * *

ಬಾವೂಲಿ ಇಟಗೊಂಡು ಕಾವೂಲಿ ತಿದ್ದೂವ ।
ಗಾಳಿ ಬಂದತ್ತ ಬಳಕೂವ ।
ಗಾಳಿ ಬಂದತ್ತ ಬಳಕೂವ-ನನತಮ್ಮ ।
ಭಾಳಿ ಎಲಿಗಿಂತ ಬಲು ಚಲುವ ||೯೬೯||

* * *

ಆಡೋ ಮಕ್ಕಳಿಗೆ ಅಂಗಾಲು ಕೆಸರಾಗಿ ।
ತೆಂಗಿನ ಕಾಯಿ ತಿಳಿನೀರ ।
ತೆಂಗಿನ ಕಾಯಿ ತಿಳಿನೀರ-ತಕ್ಕೊಂಡು ।
ಅಂಗಾಲನ ಮಣ್ಣ ತೊಳಿಯವ್ವ ||೯೭೦||

* * *

ಹೂವು ಹೆರಳಿಗೆ ಚಂದ ಮುತ್ತು ಕೊರಳಿಗೆ ಚಂದ ।
ನಕ್ಷತ್ರ ಚಂದ ಗಗನಕ್ಕ ।
ನಕ್ಷತ್ರ ಚಂದ ಗಗನಕ್ಕ-ಕಂದಯ್ಯ ।
ನೀ ಚಂದ ನನ್ನ ವಂಶಕ್ಕ ||೯೭೧||

* * *

ಆಡಿಬಾರೋ ಕಂದ ನೋಡಿ ಸಂತಸ ಬಡುವೆ ।
ಮಾಡಿಸಿ ಕೊಡುವೆ ಗಿಲಕೀಯ ।
ಮಾಡಿಸಿ ಕೊಡುವೆ ಗಿಲಕೀಯ-ಬುಗರೀಯ ।
ಓಡಿ ಬಾ ಶಿವನ ಮಠದಾಗ ||೯೭೨||

* * *

ಕಸೂತಿಯ ಕರಿಅಂಗಿ ತಲಿತುಂಬ ಜಾವೂಳ ।
ಅಂಗಳದಾಗ ನವಿಲಾಟ ।
ಅಂಗಳದಾಗ ನವಿಲಾಟ--ಅದಕಿಂತ ।
ಲಿಂಗಯ್ಯನಾಟ ವಿಪರೀತ ||೯೭೩||

ಯಾತಕಳತಾನೆಂದು ಎಲ್ಲಾರು ಕೇಳ್ಯಾರ।
ಕಾಯದ ಹಾಲ ಕೆನಿಬೇಡಿ।
ಕಾಯದ ಹಾಲ ಕೆನಿಬೇಡಿ–ಕಂದಯ್ಯ।
ಕಾಡಿ ಕೈಬಿಟ್ಟು ಇಳಿಯಽನು ॥೧೭೪॥

* * *

ಕಾಡಿಗ್ಹಚ್ಚಿದ ಕಣ್ಣು ತೀಡಿ ಮಾಡಿದ ಹುಬ್ಬು।
ಮಾವಿನ ಹೋಳು ನಿನ ಕಣ್ಣು।
ಮಾವಿನ ಹೋಳು ನಿನಕಣ್ಣು–ಕಂದಯ್ಯ।
ಮಾವ ಬಣ್ಣೀಸಿ ಕರದಾನ ॥೧೭೫॥

* * *

ಅತ್ತ ಕಂದವ್ವಽನ ಎತ್ತಿ ಹೊರಿಯಾಕ ತಂದ।
ಚಂದಪ್ಪಽ ನೋಡ ನನಕಂದಾ
ಚಂದಪ್ಪಽ ನೋಡ ನನಕಂದಾ–ಒಳಗಿರುವ।
ಗಂಡೆರಳಿ ನೋಡೊ ಗಜಭೀಮ ॥೧೭೬॥

* * *

ಕಸ್ತೂರಿಯಂಥಾ ಕಂದ ಕಸದಾಗ ಆಡಿದರ।
ಕಸವೀಸಿ ನನ್ನ ಮನದಾಗ।
ಕಸವೀಸಿ ನನ್ನ ಮನದಾಗ–ಕಂದಽನ।
ಇಸ್ವಾಸ ಗೆಳತಿ ಕರೆದೊಯ್ದು ॥೧೭೭॥

* * *

ತೊಟ್ಲಾನ ಕೂಸಿಗೆ ದೃಷ್ಟಿಯಾದೀತಂತ।
ಕಟ್ಟಿದ್ದೆ ನವಿಲಗರಿಗೋಳ।
ಕಟ್ಟಿದ್ದೆ ನವಿಲಗರಿಗೋಳ–ಬಾಳಽಗ।
ಕರಿಬೇವಿನ ದೃಷ್ಟಿ ತಗದೇನ ॥೧೭೮॥

* * *

ಹಾಲ ಕಾಯುವ ಚಿಂತಿ ಬಾಲ ಮಲಗುವ ಚಿಂತಿ।
ಇನ್ಯಾರ ಚಿಂತಿ ನಮಗವ್ವ।
ಇನ್ಯಾರ ಚಿಂತಿ ನಮಗವ್ವ–ನನ ಗೆಳತಿ।
ಮಗ ಬರುವ ಚಿಂತಿ ಮನದಾಗ ॥೧೭೯॥

ಹಾಲಽ ಕುಡಿ ಎಂದಽರ ಹನ್ನೆರಡು ಬಟ್ಟಽಲ
ಕೇಲ ರಂಜಣಿಗಿ ಗಿರಿಸಿಂಪಿ ।
ಕೇಲ ರಂಜಣಿಗಿ ಗಿರಿಸಿಂಪಿ–ಕಂದಽಗ ।
ಹಗಲೆಲ್ಲಿ ತರಲಿ ನೊರೆಹಾಲ ||೯೮೦||

* * *

ತೂಗುಽ ತೊಟ್ಟಿಲಕೊಂದು ಪಾಗುವಟ್ಟಿಯ ಹಾಸ ।
ಮಾಗಾಯಿ ಮಗನ ಮಲಗೀಸಿ ।
ಮಾಗಾಯಿ ಮಗನ ಮಲಗೀಸಿ–ಅವರವ್ವ ।
ಜೋಗೂಳ ಹಾಡಿ ಹಿಗ್ಗ್ಯಾಳ । ||೯೮೧||

* * *

ಮುರುಕ ತೊಟ್ಟಿಲಿಗೊಂದು ಹರಕುಚಾಪಿಯ ಹಾಸಿ ।
ಅಳುವ ಕಂದನ ಮಲಗೀಸಿ ।
ಅಳುವ ಕಂದನ ಮಲಗೀಸಿ–ಅವರಕ್ಕ ।
ಕಲಕೇತಿ ಹಾಡಿ ಹಿಗ್ಯಾಳ ||೯೮೨||

* * *

ಸಕ್ಕಽರಿ ಸವಿಗಾರ ವೀಳ್ಯಽದ ರುಚಿಗಾರ ।
ವೀರಭದ್ರಽನ ಅವತಾರ ।
ವೀರಭದ್ರಽನ ಅವತಾರ–ನನ ಮಗನ ।
ಹ್ಯಾಂಗ ಸಂಬಾಳಸ್ಲಿ ಹಡದವ್ವ । ||೯೮೩||

* * *

ಬಂಗಾರ ಬಾವೂಲಿ ಜಗ್ಗಿ ಬಿದ್ದಾವು ಜೋಲು ।
ಲಗ್ಗೆ ಹೊಡ್ಯಾನು ನಡುಓಣಿ ।
ಲಗ್ಗೆ ಹೊಡ್ಯಾನು ನಡುಓಣಿ–ನನಬಾಳ ।
ನಬ್ಬರಣಿ ಕೇಳ ಹಡದವ್ವ ||೯೮೪||

* * *

ಬಾಲ ಹನುಮನ ಮುಂದ ಬಾಗಿ ಚಂಡಾಡ್ಯಾನ ।
ಬಾವೂಲಿ ಗಿಲಿಯು ನನಬಾಲ ।
ಬಾವೂಲಿಗಿಲಿಯು ನನಬಾಲ–ನ್‌–ಕಂಡಽರೆ ।
ಬಾಲ್ಯಾರು ಬಸಿರು ಬಯಸ್ಯಾರ ||೯೮೫||

ಹಡಗಿ ತೊಟ್ಟಿಲ್ದಾಗ ಹವಳದ್ಹಾಸಿಗಿ ಹಾಸಿ ।
ಗುಲಗಂಜಿ ಚಂಡು ನಡುವಿಟ್ಟ ।
ಗುಲಗಂಜಿ ಚಂಡು ನಡುವಿಟ್ಟ-ನನಬಾಳ ।
ಮನಬಲ್ಹಾಂಗಾಡೊ ನವಿಲಾಟ ||೯೮೬||



## ಬಡ ಹೆಣ್ಣಿನ ಗೋಳು

ನಾಗರ ಹೆಡಿಹಂಗ ನಾಲ್ವರು ಅಣತಮ್ಮ !
ನಾ ಏನು ಬಲ್ಲೆ ಬಡತನ ।
ನಾ ಏನು ಬಲ್ಲೆ ಬಡತನ-ಅಣ್ಣಯ್ಯ ।
ಮಾಡೀಸಿ ಕೊಡುವನು ಒಡವೇಯ ||೯೮೭||

* * *

ಕಾವೇರಿ ಕಲಕೀದ ನೀರ್ಹ್ಯಾಂಗ ತುಂಬಲಿ ।
ಭೂಮಿ ತೂಕದ ನನ ತಮ್ಮ ।
ಭೂಮಿ ತೂಕದ ನನ ತಮ್ಮ--ಇರುವಾಗ ।
ನಾನ್ಯಾಕ ಬಡತನ ಬಯಸಲಿ ||೯೮೮||

* * *

ಅರವತ್ತು ಅಂಕಣದ ಅರಮನೆಯಲ್ಲಿರುವವಳು ।
ಪುಣಿವಂತ ಗಾತಿ ಚಲುಗಾತಿ ।
ಪುಣಿವಂತ ಗಾತಿ ಚಲುಗಾತಿ-ಅಕ್ಕವ್ವ ।
ಹಣಿಯಾಗ ಮೂಡ್ಯಾಳ ಸಿರಿದೇವಿ ||೯೮೯||

* * *

ಅಕ್ಕನ ಮನಿಯಾಗ ಗಾಜೀನೆರಡು ಮಂಚ ।
ಬಂಗಾರದೆರಡು ತಲೆದಿಂಬು ।
ಬಂಗಾರದೆರಡು ತಲೆದಿಂಬು-ಇಟಗೊಂಡು ।
ಅಕ್ಕ ಬಾಣಂತಿ ಮಲಗ್ಯಾಳ ||೯೯೦||

ನನ್ನ ನಾದೂನಿ ಅವಳೇನು ಕಡಿಮೀಯೆ ।
ನಲವತ್ತು ದೀವಿಗೆ ಬೆಳಗ್ಯಾವು ।
ನಲವತ್ತು ದೀವಿಗೆ ಬೆಳಗ್ಯಾವು-ನನ್ನ ।
ನಾದನೀಯ ಮನಿಮುಂದ ॥೯೯೧॥

* * *

ನಾದೂನಿ ಹಾಳೇದು ಬಾಗಿಲಿಗೆ ಹೋದsರೆ ।
ಮೊಕ ನೋಡಿ ಕಣ್ಣು ತಿರವೂತ ।
ಮೊಕ ನೋಡಿ ಕಣ್ಣು ತಿರುವೂತ-ನುಡಿದಾಳು ।
ಮನೆ ತೊಳೆದು ತವರ ತುಂಬೀದೆ ॥೯೯೨॥

* * *

ಮಂಜು ಮರುಳೆಲ್ಲ ಬ್ಯಾಗಡಿಯು ಕೊಪ್ಪಲ್ಲ ।
ಜಾಲೀಯ ಮರವು ನೆರಳಲ್ಲ ।
ಜಾಲೀಯ ಮರವು ನೆರಳಲ್ಲ-ಹೆಣ್ಣೀಗೆ ।
ನಾದನಿಯ ಮನೆಯು ತರವಲ್ಲ ॥೯೯೩॥

* * *

ಬಲ್ಲದಕ್ಕನ ಮನಿಗೆ ಬಡವಿ ತಂಗೆವ್ವ ಹೊದ್ರ ।
ಬರಿಗೊಡನ ಸಿಂಬಿ ಕೊಟ್ಟsಳು ।
ಬರಿಗೊಡನ ಸಿಂಬಿ ಕೊಟ್ಟsಳು-ತಂಗೀಗೆ ।
ಕರುವೀಗೆ ನೀರು ಕುಡಿಸೆಂದು । ॥೯೯೪॥

* * *

ಕೊಟ್ಟಂತ ಕೊಡನ ನಡುಮನೆಯಲಿಟ್ಟಾಳ ।
ನೊಂದಾಳ ಭಾಳ ಮನದಾಗ ।
ನೊಂದಾಳ ಭಾಳ ಮನದಾಗ-ತಂಗೀಯ ।
ನಡೆದಾಳ ತಮ್ಮsನ ಅರಮನೆಗೆ ॥೯೯೫॥

* * *

ಎಂದೂ ಬಾರದಕ್ಕ ತಾನಾಗಿ ಬಂದಾಳ ।
ಕುಂಡ್ರಾಕ ಕೊಡಿರಿ ಮಣಿಗsಳ ।
ಕುಂಡ್ರಾಕ ಕೊಡಿರಿ ಮಣಿಗsಳ-ಅಕ್ಕವ್ಗ ।
ನೀಡೀರೆ ಸವಿಯಾದ ಹಗಲೂಟ ॥೯೯೬॥

ಬೇಸಿದ ರೊಟ್ಟಿಲ್ಲ ಕಾಸೀದ ತುಪ್ಪಿಲ್ಲ ।
ಏನಿಕ್ಕಲೀ ರಾಯ ಹಗಲೂಟ ।
ಏನಿಕ್ಕಲೀ ರಾಯ ಹಗಲೂಟ-ಬೈಗೀಗೆ ।
ಮಾಡಿ ಬಡಿಸೂವೆ ಬಿಸಿಯೂಟ ||೯೯೭||

* * *

ಎಷ್ಟು ಬೀಸಿದರೂ ಮುಗಿಯಽವು ಈ ಜೋಳ ।
ಬೀಸುತ್ತ ಬೆರಳೆಲ್ಲ ನೊಂದಾವು ।
ಬೀಸುತ್ತ ಬೆರಳೆಲ್ಲ ನೊಂದಾವು--ತಮ್ಮಯ್ಯ ।
ಎಬ್ಬೀಸು ನಿನ್ನ ಮಡದೀಯ ||೯೯೮||

* * *

ಮಡದೀಯ ಎಬಿಸೋಕೆ ಬಸುರಿಯಾಗವ್ಳೆ ।
ಮ್ಯಾಲೆ ದೊಡ್ಡವರ ಮಗಳಕ್ಕ ।
ಮ್ಯಾಲೆ ದೊಡ್ಡವರ ಮಗಳಕ್ಕ--ಮಡದೀಯ ।
ನೀನೆ ಬೀಸಿ ಒಳಗೆ ತೆಗೆದೀಡು ||೯೯೯||

* * *

ದೊಡ್ಡವರ ಮಗಳಾದ್ರೆ ಭೂಮಿಕಾಣಿ ತಂದ್ಲೇನು ।
ಅವಳ್ತಂದ ಗಿಂಡಿ ತಳತೂತ ।
ಅವಳ್ತಂದ ಗಿಂಡಿ ತಳತೂತ--ತಮ್ಮಯ್ಯ ।
ಅವಳ್ತಂದ ಎಮ್ಮೆ ಸಿಡಿಗಾಲು ||೧೦೦೦||

* * *

ಕುಟ್ಟು ಕುಟ್ಟೆಂದರ ಬರಿಧೂಳು ಎಂದಾಳು ।
ಬೀಸೆಂದರ ಮೂರಿ ತಿರುವ್ಯಾಳ ।
ಬೀಸೆಂದರ ಮೂರಿ ತಿರುವ್ಯಾಳ–ತಮ್ಮಯ್ಯ ।
ತಾಳೀದೆ ನಿನ್ನ ಮುಖನೋಡಿ ||೧೦೦೧||

* * *

ತಾಳು ತಾಳಲಿ ಬೇಡ ತಾಳಿಕೊಲ್ಲಲಿ ಬೇಡ ।
ನಾಳೆ ನನ್ನ ಮನೇಲಿರಬೇಡ ।
ನಾಳೆ ನನ್ನ ಮನೇಲಿರಬೇಡ--ಅಕ್ಕವ್ವ ।
ನಿನ್ನೂರಿಗೆ ನಡಿಬೇಗ ||೧೦೦೨||

ಅಲ್ಲಿಂದ ಅಕ್ಕವ್ವ ಉಸ್ಸೆಂದು ಹೊರಟಾಳ ।
ಅಣ್ಣಾನ ಸರಮನಿಗೆ ನಡೆದಾಳ ।
ಅಣ್ಣಾನ ಸರಮನಿಗೆ ನಡೆದಾಳ--ಅವಳು ।
ನೊಂದಾಳ ಬಹಳ ಮನದಾಗ ॥೧೦೩॥

* * *

ಎಂದೂ ಬಾರದ ತಂಗಿ ಇಂದ್ಯಾಕ ಬಂದೆವ್ವ ।
ಕುಂಡರಲಿ ಹಾಕನ ಮಣಿಗನಳ ।
ಕುಂಡರಲಿ ಹಾಕನ ಮಣಿಗನಳ--ತಂಗೆವ್ವ ।
ಹಾಲು ಅನ್ನಗಳ ಉಣಲಿಕ್ಕೆ ॥೧೦೪॥

* * *

ಆದಾ ಅನ್ನನವ ಓದೂವ ಕಂದುಂಡ ।
ಕಾದನ ಹಾಲೀಗೆ ಹೆಪ್ಪೆರೆದೆ ।
ಕಾದನ ಹಾಲೀಗೆ ಹೆಪ್ಪೆರೆದೆ--ರಾಯರೇ ।
ಆಗನಲ್ಯಾವರೆನಗೆ ಹೇಳ್ಬಾರ್ದೆ ॥೧೦೫॥

* * *

ಕಗ್ಗಲ್ಲು ಒನಿಕೆ ಕರಿಯ ಮಲ್ಲಿಗೆ ಸಾಮೆ ।
ಒಬ್ಬಳಿಗೊಂದುಬ್ಬೆ ಸವಿಯಾದು ।
ಒಬ್ಬಳಿಗೊಂದುಬ್ಬೆ ಸವಿಯಾದು--ಅಣ್ಣಯ್ಯ ।
ಎಬ್ಬೀಸು ನಿನ್ನ ಮಡದೀಯ ॥೧೦೬॥

* * *

ಎಬ್ಬಿಸೋದು ಯಾಕೆ ನಿದ್ದೆಗೆಡ್ಸೋದ್ಯಾಕೆ ।
ಎರಡುಬ್ಬೆ ಮಾಡಿ ತಳಿಸೀಡು ।
ಎರಡುಬ್ಬೆ ಮಾಡಿ ತಳಿಸೀಡು--ತಂಗೆವ್ವ ।
ಮಂಡೆ ನೋವೆಂದು ಮಲಗೆವ್ವೆ ॥೧೦೭॥

* * *

ಎರಡುಬ್ಬೆ ಮಾಡಿದರೆ ಕಡಿನುಚ್ಚು ಆದಾವು ।
ಒಂದುಬ್ಬೆ ಮಾಡಿದರೆ ಕುರುಡಕ್ಕಿ ।
ಒಂದುಬ್ಬೆ ಮಾಡಿದರೆ ಕುರುಡಕ್ಕಿ--ಆದಾವು ।
ಸಾಕಣ್ಣ ನಿನ್ನ ಮನಿಗೆಲಸ ॥೧೦೮॥

ನನ್ಮನಿ ಕೆಲಸsವ ನನ್ಮುಂದ ಹೇಳಬ್ಯಾಡ
ನನ್ನ ಮನಿಯಾಗ ಇರಬ್ಯಾಡ
ನನ್ನ ಮನಿಯಾಗ ಇರಬ್ಯಾಡ--ನನತಂಗಿ ।
ನಿನ್ನ ಊರಿಗಿ ನಡಿಬೇಗ ||೧೦೯||

*　*　*

ಕುದುರೇಯ ತರಿಸಣ್ಣ ಜೀನsವ ಬಿಗಿಸಣ್ಣ ।
ನನ್ನ ಊರಿಗೆ ಕಳುಹಣ್ಣ ।
ನನ್ನ ಊರಿಗೆ ಕಳುಹಣ್ಣ-ಕಣ್ಣೀರು ।
ಎಣ್ಣೆ ಹೊಳೆಯಾಗಿ ಹರಿದಾವೋ ||೧೧೦||

*　*　*

ಕುದುರೆ ನಮ್ಮಲ್ಲಿಲ್ಲ ಜೀನು ನಮ್ಮಲ್ಲಿಲ್ಲ ।
ನಿನ್ನ ಊರಿಗೆ ನಡಿ ತಂಗಿ ।
ನಿನ್ನ ಊರಿಗೆ ನಡಿತಂಗಿ–ನೀನೀಗ ।
ನನ್ನ ಮನಿಯಾಗ ಇರಬ್ಯಾಡ ||೧೧೧||

*　*　*

ಮೂಗುತಿ ಮುರಿದರ ಮುರಿದು ಮಾಡಿಸಬಹುದು ।
ಮಡದಿ ಸತ್ತsರ ತರಬಹುದು ।
ಮಡದಿ ಸತ್ತsರ ತರಬಹುದು–ಅಣ್ಣಯ್ಯ ।
ಒಡಹುಟ್ಟಿದವರೆಲ್ಲಿ ಸಿಕ್ಯಾರು ||೧೧೨||

*　*　*

ಆಡುವಾಗ ಇಕ್ಕುವಾಗ ಊರೆಲ್ಲ ನೆಂಟsರು ।
ಅಡವೀಯ ಸೊಪ್ಪು ತಿನುವಾಗ ।
ಅಡವೀಯ ಸೊಪ್ಪು ತಿನುವಾಗ–ನೆಂಟsರು ।
ಇಷ್ಟರು ಗುರುತ ಮರೆತಾರು ||೧೧೩||

*　*　*

ಕಕ್ಕೀಕಾಯಿ ತಿಂದು ಕೈತುಂಬ ನೀರ್ಕುಡಿದು ।
ಕಾಕರುಗಲ್ಲಾಗ ಹರಳೊತ್ತಿ ।
ಕಾಕರುಗಲ್ಲಾಗ ಹರಳೊತ್ತಿ–ಸುಡುವಾಗ ।
ಸಾಕಾಯ್ತು ತವರೀನ ಮನೆ ಮಾರು ||೧೧೪||

ಹೆಣ್ಣು ಮಕ್ಕಳ ದುಃಖ ಹೆತ್ತವ್ವ ಬಲ್ಲಳು ।
ಹುತ್ತದ ಒಳಗೀರೊ ಸರ್ಪನ ।
ಹುತ್ತದ ಒಳಗೀರೋ ಸರ್ಪನ-ಬೇಗೆಯ ।
ನೆತ್ತೀ ಮ್ಯಾಗಿರುವ ಶಿವಬಲ್ಲ ॥೧೧೧೫॥

* * *

ಹಡದವ್ವ ಇರುತನ್ಕ ತವರೀನ ಮನಿ ನಮ್ದು ।
ಹಡದವ್ವ ತೀರಿ ನಿನವೊಂದು ।
ಹಡದವ್ವ ತೀರಿ ದಿನವೊಂದು-ಕಳೆದsರೆ ।
ತವರೀನವರ್‍ಯಾರೊ ನಾವ್ಯಾರೋ ॥೧೧೧೬॥

* * *

ತಾಯಿಲ್ದ ತವರನು ಬಯಸsದಿರು ಮನವೆ ।
ಮೇವಿಲ್ದ ಹೊಲಕೆ ಕರು ಹೋಗಿ ।
ಮೇವಿಲ್ದ ಹೊಲಕ ಕರುಹೋಗಿ-ಅಳುವಂತೆ ।
ತಾಯಿಲ್ದ ತವರಾಗ ಹೆಣ್ಣಗೋಳು ॥೧೧೧೭॥

* * *

ಸಾವೀರ ಕೊಟ್ಟsರೂ ಸೋದರರ ಮನೆಬೇಡ ।
ಸಾವಿರದ ಮ್ಯಾಲ ಸೇರ್‍ಹೊನ್ನು ।
ಸಾವಿರದ ಮ್ಯಾಲ ಸೇರ್‍ಹೊನ್ನು-ಕೊಟ್ಟರೂ ।
ಬಲ್ಲೀದಕ್ಕನ ಮನಿ ಬ್ಯಾಡ ॥೧೧೧೮॥

* * *

ಗಂಜೀಯ ಕುಡಿದರೂ ಗಂಡನ ಮನಿಲೇಸು ।
ಅಂದಾಲದ ಮ್ಯಾಲೆ ಚವರೀಯ ।
ಅಂದಾಲದ ಮ್ಯಾಲೆ ಚವರೀಯ-ಬೀಸಿಕೊಂಡ್ರು ।
ಹಂಗಿನ ತೌರುಮನಿಬ್ಯಾಡ ॥೧೧೧೯॥

* * *

ಅಣ್ಣ ಬಾಳಿದರೇನು ತಮ್ಮ ಬಾಳಿದರೇನು ।
ತನ್ನ ಕೈಹಿಡಿದ ಪುರುಷsನು ।
ತನ್ನ ಕೈಹಿಡಿದ ಪುರಷsನು-ಬಾಳಿದರೆ ।
ಉಣಲುಂಟು ಭಾಗ್ಯ ತಿನಲುಂಟು ॥೧೧೨೦॥

ಬಳಗವು ಹೆಚ್ಚಲಿ ಬಂಧುವು ತಗ್ಗಲಿ ।
ಕೊಳಗದಿ ಹೊನ್ನು ಅಳೆಯಲಿ ।
ಕೊಳಗದಿ ಹೊನ್ನು ಅಳಿಯಲಿ-ತವರೀನ ।
ನಡುಮನಿ ಜ್ಯೋತಿ ಉರಿಯಲಿ ॥೧೦೨೧॥



## ಮಳೆದೇವ

ಮಳಿ ಹೋಯ್ತು ಅಂತ ಮಳೆರಾಯ್ನ ಬೈ ಬ್ಯಾಡ ।
ಒಕ್ಕಲ ಹೊನ್ನ ಸೆರಗಾಗ ।
ಒಕ್ಕಲ ಹೊನ್ನ ಸೆರಗಾಗ-ಕಟಗೊಂಡು ।
ಸಾಲಕ್ಕ ಹೋಗ್ಯಾನ ಮಳೆರಾಯ ॥೧೦೨೨॥

* * *

ಬಿತ್ತಿ ಬಂದಣ್ಣ ಮುತ್ತಿನ ಕಂಭ ಸೇರಿ ।
ಬಿತ್ತಿ ಬಂದೆ ಶಿವನೆ ಮಳೆಯಿಲ್ಲ ।
ಬಿತ್ತಿ ಬಂದೆ ಶಿವನೆ ಮಳೆಯಿಲ್ಲ-ಅಂದಾಗ ।
ಮುತ್ತೀನ ಮಂಜು ಹರಿದಾವು ॥೧೦೨೩॥

* * *

ಅಂಬು ಕೊಡುವವನೆ ಮುತ್ತಿನ್ಹಚ್ಚಡದವನೆ ।
ರಂಭೆ ತೊಡಿಮ್ಯಾಲಿರುವ ।
ರಂಭೆ ತೊಡಿಮ್ಯಾಲಿರುವ-ಮಳೆದೇವ ।
ಅಂಬರದಿಂದ ಕರುಣಿಸು ॥೧೦೨೪॥

* * *

ಕಾರೆಂಬೋ ಕತ್ತಲೆ ಭೋರೆಂಬೋ ಮಳೆರಾಯ ।
ಬೋರಿಟ್ಟು ಬಂದ ಮಳೆರಾಯ ।
ಬೋರಿಟ್ಟು ಬಂದ ಮಳೆರಾಯ-ರಂಭಿ ನಿನ್ನ ।
ಕಂಬೀಯ ಸೆರಗ ಮರಿಮಾಡ ॥೧೦೨೫॥

ಗುಡು ಗುಡು ಗುಟ್ಟಿತು ನಡುಬಾಣ ಮಿಂಚೀತು ।
ಮಂದಾದ್ರಿ ಅಂಬು ದಂಡೀನ ।
ಮಂದಾದ್ರಿ ಅಂಬು ದಂಡೀನ-ಕುದರೀವ್ಯಾಲ ।
ಚಂಡಾಡ್ತ ಹುಯ್ಯೋ ಮಳೆದೇವ ॥೧೦೨೬॥

* * *

ಮೂಡು ಮುಂದಾಗಿ ಹೊಡೆಯಿತು ಮಳೆರಾಯ ।
ಗೊಂಬೆ ತೇರಿಗೆ ಹನಿಬಿದ್ದೋ ।
ಗೊಂಬೆ ತೇರಿಗೆ ಹನಿಬಿದ್ದೋ-ರಂಭೆಯುಟ್ಟ ।
ಪಟ್ಟೆ ಸೀರೆ ಸೆರಿಗ್ಗೆ ಹರಿದಾವೋ ॥೧೦೨೭॥

* * *

ಸ್ವಾತೀಯ ಮಳೆಹುಯ್ದು ಸೀತೇಯ ಕೆರಿತುಂಬಿ ।
ನೇತಾಡುತ್ತೈತಿ ಕುಣಿಗಲು ।
ನೇತಾಡುತ್ತೈತಿ ಕುಣಿಗಲು-ಕುಚ್ಚಿನ ಮೀನು ।
ಮುಂಗೈಯ ನೋಡಿ ನಗತ್ತೈತಿ ॥೧೦೨೮॥

* * *

ಮಳೆರಾಯ್ನ ಹೆಂಡtತಿ ಮಕ್ಕಳೊಂದಿಗಿತ್ತಿ ।
ಮಳೆ ಬಂದರೆಲ್ಲಿ ತಳಿಗ್ಯಾಳೊ ।
ಮಳೆ ಬಂದರೆಲ್ಲಿ ತಳಿಗ್ಯಾಳೊ-ನೆಂದtರ ।
ಸಣ್ಣtನ ಬಾಳಿ ಸುಳಿಯಲ್ಲಿ ॥೧೦೨೯॥

* * *

ತಂಗೀಯ ಮನೆಗ್ಹೋಗಿ ತಂಗtದೆ ಹೋಗ್ತವನೆ ।
ತಂಗೀಸಿ ಕೊಡು ಮಳೆದೇವ ।
ತಂಗೀಸಿ ಕೊಡು ಮಳೆದೇವ-ಅಣ್ಣಯ್ಯ ।
ಗೊಂಬೆ ಹಚ್ಚಡವು ಗೊರೆಯಾದೊ ॥೧೦೩೦॥

* * *

ಊರಿಗೆ ಮಳೆ ಹುಯ್ದು ಏರುಕಟ್ಟೊ ಕಂದಯ್ಯ ।
ಊರ ಮುಂದಿರುವ ಬಸವಣ್ಗ ।
ಊರ ಮುಂದಿರುವ ಬಸವಣ್ಗ-ಕೈಮುಗಿದು ।
ಏರ್ಕಟ್ಟೋ ಮುದ್ದು ಮೊಕದವನೆ ॥೧೦೩೧॥

ಕಂಚು ಮಿಂಚೀತು ಕಾಳಸ್ತ್ರ ಗುಡುಗೀತು ।
ಶಿವಗಂಗ್ಯಾಗ್ಯೋಳು ಹನಿಬಿದ್ದು ।
ಶಿವಗಂಗ್ಯಾಗ್ಯೋಳು ಹನಿಬಿದ್ದು-ಪರ್ವತದ ।
ಗಿರಿಮ್ಯಾಲೆ ಕೋಡಿ ಹರಿಯೀತು ॥೧೦೩೨॥

* * *

ಹೇರು ಕಟ್ಟಲಿ ಯಾವ್‌ಹೇರು ಕಟ್ಟಲಿ ।
ಈರಣ್ಣನೊಬ್ಬ ಉರಿಲ್ಹೋರಿ ।
ಈರಣ್ಣನೊಬ್ಬ ಉರಿಲ್ಹೋರಿ-ಕಟಿಗೊಂಡು ।
ಯಾಲಕ್ಕಿ ಸಾಲು ಹೊಡೆದಾನೋ ॥೧೦೩೩॥

* * *

ಮುತ್ತೀನ ಬಾರುಕೋಲು ಮುಗಿಲು ಬಣ್ಣದ ಕುಂಟಿ ।
ಸಣ್ಣ ಕೊಂಬೀನ ನವರತ್ನ ।
ಸಣ್ಣ ಕೊಂಬೀನ ನವರತ್ನ-ಕಟಿಗೊಂಡು ।
ಜಾಣ ಹರಗಿದನು ದವನಪ ॥೧೦೩೪॥

* * *

ಹತ್ತೇರು ಕಟ್ಟಿ ಸೆಟ್ಟೀ ಬೀದಿಗೆ ಬಂದ ।
ಮುತ್ತು ಚಲ್ಲಯ್ಯ ಹೊಲಕೆಲ್ಲ ।
ಮುತ್ತು ಚಲ್ಲಯ್ಯ ಹೊಲಕೆಲ್ಲ-ಅಣ್ಣಯ್ಯ ।
ಮತ್ತೆ ಧಾನ್ಯವು ಬೆಳಿಯಾಲಿ ॥೧೦೩೫॥



## ಪತಿ—ಪತ್ನಿಯರು

ಹಚ್ಚಡದ ಪದರಾದ ಅಚ್ಚ ಮಲ್ಲಿಗಿ ಹೂವ ।
ಬಿಚ್ಚಿ ನನಮ್ಯಾಲೆ ಒಗೆವಂಥ ।
ಬಿಚ್ಚಿ ನನಮ್ಯಾಲೆ ಒಗೆವಂಥ-ರಾಯರನ ।
ಬಿಟ್ಹ್ಯಾಂಗ ಬರಲೆ ಹಡದವ್ವ ॥೧೦೩೬॥

ಅಡಗೀಯ ಮನಿಯಾಗ ಮಡದೀಯ ಸುಳುವಿಲ್ಲ।
ಅಡಿಗೀ ಬಾಯೀಗಿ ರುಚಿಯಿಲ್ಲ।
ಅಡಿಗೀ ಬಾಯೀಗಿ ರುಚಿಯಿಲ್ಲ–ಹಡೆದವ್ವ।
ಮಡದಿ ತವರೀಗಿ ಹೋಗ್ಯಾಳ ॥೧೩೭॥

* * *

ಊರಿಗಿ ಹೋಗವರ ಮಾರ್‍ಯಾಕ ಬಾಡ್ಯಾವ।
ಗೀರ ಗಂಧ್ಯಾಕ ಬೆವತಾವ।
ಗೀರ ಗಂಧ್ಯಾಕ ಬೆವತಾವ–ಮಡದೀನ।
ಬಿಟ್ಟು ಹೊರಟಾರ ಪರನಾಡ ॥೧೩೮॥

* * *

ಎಂದು ಬರತೇರಿ ನನ್ನ ಗಂಧದ ರತಿಗಾರ।
ರುಮ್ಮಾಲ ಎಲ್ಲ ಪರಿಮಳ।
ರುಮ್ಮಾಲ ಎಲ್ಲ ಪರಿಮಳ-ನನನಲ್ಲ।
ಎಂದ ಬರತೇರಿ ನನಗ್ಹೇಳ ॥೧೩೯॥

ಗಂಧೆಣ್ಣಿ ಹಚಿಕೊಂಡು ಗಂಗ್ಯಾಗ ನಿಂತಾರ।
ಒಂದೊಂದ ಹೇಳಿ ನಗತಾರ।
ಒಂದೊಂದ ಹೇಳಿ ನಗತಾರ–ರಾಯರಿಗೆ।
ಎಂಥ ಸಿರಿಗಂಗಿ ಹಡದಾಳ ॥೧೪೦॥

* * *

ಮಡದೀನ ಬಡದಾನ ಮನದಾಗ ಮರಗ್ಯಾನ।
ಒಳಗ್ಹೋಗಿ ಸೆರಗ ಹಿಡಿಯೂತ।
ಒಳಗ್ಹೋಗಿ ಸೆರಗ ಹಿಡಿಯೂತ–ಕೇಳ್ಯಾನ।
ನಾಹೆಚ್ಚೋ ನಿನ್ನ ತವರ್‍ಹೆಚ್ಚೋ ॥೧೪೧॥

* * *

ಹಾಸೀಗಿ ಹಾಸೆಂದ ಮಲ್ಲೀಗಿ ಮುಡಿಯೆಂದ।
ಬ್ಯಾಸತ್ತರ ಮಡದಿ ಮಲಗೆಂದ।
ಬ್ಯಾಸತ್ತರ ಮಡದಿ ಮಲಗೆಂದ–ನನರಾಯಾ।
ತನ ನೋಡಿ ತವರ ಮರಿಯೆಂದಾ ॥೧೪೨॥

ಹಚ್ಚೀ ಬಟ್ಟಿನ ವ್ಯಾಲ ಹರಿದಾಡು ಕುಂಕುಮ ।
ವಾರೀಗಿ ಪುರುಷ ಇದರೀಗಿ ।
ವಾರೀಗಿ ಪುರುಷ ಇದರೀಗಿ–ಕುಂತಽರ ।
ಹೆಚ್ಚೀನ ತವರ ಮರತೇನ ||೧೦೪೩||

* * *

ಸರದಾರ ನಿಮ್ಮಿಂದ ಸರುವೆಲ್ಲ ಮರತೇನ ।
ಸರದಾಗ ಇರುವ ಗುಳದಾಳಿ ।
ಸರದಾಗ ಇರುವ ಗುಳದಾಳಿ–ನಿಮ್ಮಿಂದ ।
ಸರುವ ಬಳಗೆಲ್ಲ ಮರತೇನ ||೧೦೪೪||

* * *

ಯಾಕವ್ವ ನನ ಜೀವ ಜಾಜೀಲಿ ವಲ್ಲಽದ ।
ಜಾತ್ರಿಗ್ಹೋದವರು ಬರಲಿಲ್ಲ ।
ಜಾತ್ರಿಗ್ಹೋದವರು ಬರಲಿಲ್ಲ–ಇಂದೀನ ।
ರಾತ್ರಿ ಹ್ಯಾಂಗಾರೆ ಕಳಿಯಾಲೆ ||೧೦೪೫||

* * *

ಸಿರಿಗಂಧದ ಚೆಕ್ಕಿ ವಡೆದು ಒತ್ತಲಿ ತುಂಬಿ ।
ತಿರುಗಾಡಿ ನೀರು ಬೆರಸೇನ ।
ತಿರುಗಾಡಿ ನೀರು ಬೆರಸೇನ–ನನ ಮನಿಗಿ ।
ಹಿಡಿ ಹೊನ್ನು ತರುವ ಹಿರಿಯರಿಗೆ ||೧೦೪೬||

* * *

ವಾರೀಗಿ ಪುರುಷರು ಊರೀಗಿ ಹೋದ್ದಽರ ।
ನಾರಿ ನಿನ ಕಣ್ಣು ಒಳ ಹೊರಗ ।
ನಾರಿ ನಿನ ಕಣ್ಣು ಒಳ ಹೊರಗ-ತಿಂಗಳದ ।
ಚಂದ್ರಾಮರ್‍ಯಾಕ ತಡದಾರ ||೧೦೪೭||

ಆರು ಸೇರಿನ ಸರಿಗಿ ಅರಗಿಲ್ಲದ ಕಟ್ಟಾಣಿ ।
ನತ್ತು ಬೇಡಿದರ ನಗುವಂಥ ।
ನತ್ತು ಬೇಡಿದರ ನಗುವಂಥ–ರಾಯರನ ।
ನಿಂತು ಬೇಡೀನ ಶಿವನಲ್ಲಿ ||೧೦೪೮||

ಹಾಸೀಗಿ ಹಾಸೆಂದ್ರು ಮಲ್ಲೀಗಿ ಮೂಸೆಂದ್ರು ।
ನಿಂತು ನೂರೆಲಿಯ ಮಡಿಚೆಂದ್ರು ।
ನಿಂತು ನೂರೆಲಿಯ ಮಡಿಚೆಂದ್ರು-ರಾಯರಿಗೆ ।
ಎಂಥ ಸಿರಿಗಂಗಿ ಹಡೆದಾಳ ||೧೦೪೯||

* * *

ಗಂಡ ಪಂಡಿತ ರಾಯಾ ರಂಡೀಯ ಮಾಡಿದರ ।
ಭಂಡಽ ಮಾಡವರ ಮಗಳಲ್ಲ ।
ಭಂಡಽ ಮಾಡವರ ಮಗಳಲ್ಲ-ಕೊರಳಾನ ।
ಗುಂಡು ಬೇಡಿದರ ಕೊಡುವೇನ ||೧೦೫೦||

* * *

ಎಲ್ಲೆಲ್ಲಿ ನೋಡಿದರ ನಲ್ಲನಂಥವರಿಲ್ಲ ।
ಹಲ್ಲು ನೋಡಿದರ ಹವಳಽವ ।
ಹಲ್ಲು ನೋಡಿದರ ಹವಳಽವ-ನಲ್ಲಽನ ।
ಸೊಲ್ಲು ಕೇಳಿದರ ಸಮಾಧಾನ ||೧೦೫೧||

* * *

ಅರಗಿನಂಥಾನಲ್ಲಾ ತಿರಗಿ ಬಾರದೆ ಹೋದಾ ।
ಅರಗೀಣಿ ಹೋಗಿ ಕರೆತಾರ ।
ಅರಗೀಣಿ ಹೋಗಿ ಕರೆತಾರ--ನಗರಽದ ।
ದರಬಾರದಾಗ ಇರತಾರ ||೧೦೫೨||

* * *

ಹಿಂಡು ಮಂದ್ಯಾಗಿರುವ ಪುಂಡಽ ಊಟಕೆ ಬಂದ್ರು ।
ದುಂಡಕ್ಕಿ ಬಾನ ಕುದಿಯಾವ ।
ದುಂಡಕ್ಕಿ ಬಾನ ಕುದಿಯಾವ-ರಾಜೇಽರ ।
ಪುಂಡಾಟದಾಟ ಹಿಡೀಲಾರೆ ||೧೦೫೩||

* * *

ಕಮಲದ ಹೂ ನಿನ್ನ ಕಾಣಽದೆ ಇರಲಾರೆ ।
ಮಲ್ಲೀಗೆ ಮಾಯ ಬಿಡಲಾರೆ ।
ಮಲ್ಲೀಗೆ ಮಾಯ ಬಿಡಲಾರೆ-ಕೇದಿಗೆ ।
ಗರಿ ನಿನ್ನ ನಗಲಿ ಇರಲಾರೆ ||೧೦೫೪||

ಗಂಡsa ಹೆಂಡರ ಜಗಳ ಗಂಧ ತೀಡಿಧಾಂಗ ।
ನಿಂಗsaಕ ನೀರು ಎರಧಾಂಗ ।
ನಿಂಗsaಕ ನೀರು ಎರಧಾಂಗ-ಹಿರಿಹೊಳಿಯು ।
ಗಂಗವ್ವ ಸಾಗಿ ಹರಿಥಂಗ ||೧೦೫೫||

* * *

ಎರಿಹೆಂಟಿ ಬರಿಗಾಲು ನಡುವೆ ನೆಗ್ಗಲಿ ಮುಳ್ಳು ।
ರಾಯ ನಿಮ್ಮ ಕಳುವಿ ಬರುವಾಗ ।
ರಾಯ ನಿಮ್ಮ ಕಳುವಿ ಬರುವಾಗ-ಹಿಂದೀನ ।
ನೆನಪಾಗಿ ಜೀವ ಹೋದೀತ ||೧೦೫೬||

* * *

ಸರಕಾರಕ್ಹೋಗವರ ಸೆರಗ್ಹಿಡಿದು ತರಿಬೇನ ।
ಸರದಾರ ಕೇಳಿ ನನಮಾತ ।
ಸರದಾರ ಕೇಳಿ ನನಮಾತ-ನನರಾಯ ।
ಸರಗೀಯ ಕೊಂಡಿ ಸಡಿಲ್ಯಾವ ||೧೦೫೭||

* * *

ಅರಸ ಒಳ್ಳೆಯವರಂತ ಉರಸ ಮಾಡಲಿ ಬ್ಯಾಡ ।
ವರುಷದ ಮಾತು ಮನದಾಗ ।
ವರುಷದ ಮಾತು ಮನದಾಗ-ಇಟಗೊಂಡು ।
ಪರಸಿಗ್ಹೋದಲ್ಲಿ ತರುಬ್ಯಾರ ||೧೦೫೮||

* * *

ಯಾಲಕ್ಕಿ ಕಾಯ್ ಸುಲಿದು ಯಾವಡಗಿ ಮಾಡsaಲೀ ।
ಊರಿಗ್ಹೋಗ್ಯಾರ ರಾಯರು ।
ಊರಿಗ್ಹೋಗ್ಯಾರ ರಾಯರು-ಬಾರದೆ ।
ಯಾವಡಗಿ ಮಾಡಿ ಫಲನೇನ ||೧೦೫೯||

* * *

ಕಾಜೀನ ಕಂಬsaಕ ಮೋಜೀಲೇ ನಿಂತಾರ ।
ಊದೀನ ಕಡ್ಡಿಙ್ಗ ಬಳುಕೂವ ।
ಊದೀನ ಕಡ್ಡಿಙ್ಗ ಬಳುಕೂವ-ದೊರಿಗೂಡ ।
ಬದುಕು ಮಾಡೂದ ಬಲು ಚೆಂದ ||೧೦೬೦||

ಸಿಟ್ಟ್ಯ ಸಾ ಆದೇನ ಶ್ರೀಹರಿ ನಿನ ವ್ಯಾಲ।
ಉಚ್ಚಿ ಒಗದೇನ ರುಳಿಸೆರಗಿ ।
ಉಚ್ಚಿ ಒಗದೇನ ರುಳಿಸೆರಗಿ–ಗೋಕುಲದ ।
ಕೃಷ್ಣ ನನ ವ್ಯಾಲ ಮುನಿದೇನ ||೧೦೬೧||

* * *

ಎಲ್ಲಿ ಹೋಗಿದ್ದಿ ನನ್ನ ಮಲ್ಲಿಗೆಂಥ ರಾಯಾ ।
ಎಲ್ಲಾರು ನನ್ನ ಬೈದಾರು।
ಎಲ್ಲಾರು ನನ್ನ ಬೈದಾರು–ಆ ಕತಿಯ ।
ನಿಲ್ಲೀಸಿ ಕೇಳು ನಿನ ಕುದರಿ ||೧೦೬೨||

* * *

ವಾರೀಗಿ ರಾಯರು ಊರಿಗಿ ಹೋದsರ ।
ಸೇರು ಭಂಗಾರ ತಗೆಥಂಗ ।
ಸೇರು ಭಂಗಾರ ತಗೆಥಂಗ–ಮಲ್ಲೀಗಿ ।
ಮುಡಿದು ಅಂಗಳಕ ಒಗೆಥಂಗ ||೧೦೬೩|

* * *

ಹಚ್ಚೀ ಬಟ್ಟಿನ ಕೈಯ ಒತ್ತಿ ಹಿಡಿಯಲಿ ಬ್ಯಾಡ ।
ನೆತ್ತರಿಳಿದಾವು ಬೆರಳೀಗಿ ।
ನೆತ್ತರಿಳಿದಾವು ಬೆರಳೀಗಿ- ನನರಾಯ ।
ಅತ್ತಿ ಬೈದಾಳು ಕೈಬೀಡೋ ||೧೦೬೪||

* * *

ಅತ್ತಿ ಹೂವಿನ ಶೀರಿ ಅಚ್ಚೀರಿನ ಒಂಕಿ।
ಇಚ್ಛೆಯವರಲ್ಲ ಮನಿ ಪುರುಷ ।
ಇಚ್ಛೆಯವರಲ್ಲ ಮನಿ ಪುರುಷ–ರ-ಕೂಡ ।
ಹೆಚ್ಚು ಮಾತಾಡಿ ಫಲವೇನ ||೧೦೬೫||

* * *

ಅರಸರ ದಯದಿಂದ ಅರಿಷೀಣ ಕುಂಕೂಮ ।
ಗೋದ ಮಲ್ಲೀಗಿ ನೆನೆದಂಡಿ ।
ಗೋದ ಮಲ್ಲೀಗಿ ನೆನೆದಂಡಿ–ಕಟ್ಟೊದು ।
ಅರಸ ಮಾರಾಯ್ರ ದಯದಿಂದ ||೧೦೬೬||

ಕಟ್ಟಾಣಿ ಗುಂಡೀಗಿ ಸಿಟ್ಟು ಮಾಡಲಿ ಬ್ಯಾಡ ।
ಬಿಟ್ಟು ಬಂದೀದ ಬಳಗೆಲ್ಲ ।
ಬಿಟ್ಟು ಬಂದೀದ ಬಳಿಗೆಲ್ಲ-ಪತಿ ಪುರುಷ ।
ಕಟ್ಟ್ಯಾರ ತಮ್ಮ ಪದರಾಗ ||೧೦೬೭||

* * *

ಅತ್ತಿ ಸಿಪ್ಪೊಟ್ಟಿಯವರು ಅಸಲ ಪಂಡಿತರಾಯ ।
ಬಿಸಿಲ್ಹತ್ತಿ ಕುದುರಿ ಇಳಿದಾರ ।
ಬಿಸಿಲ್ಹತ್ತಿ ಕುದುರಿ ಇಳಿದಾರ-ಅಣ್ಣಽನ ।
ಎಸಳ ಯಾಲಕ್ಕಿ ಬನದಾಗ ||೧೦೬೮||

ಹೊನ್ನೀನ ಮಳೆಬಂದು ಚಿನ್ನಽದ ಕೆರೆತುಂಬಿ ।
ಕಿನ್ನೂರಿ ಮಾಟದ ಹೊಳಿಬಂದು ।
ಕಿನ್ನೂರಿ ಮಾಟದ ಹೊಳಿಬಂದು-ರಾಯಽರ ।
ಸಣ್ಣಕ್ಕಿ ಹೇರ ತರಬ್ಯಾವ ||೧೦೬೯||

* * *

ಬೆಂದಽ ರಾಮನ ಚಿಕ್ಕಿ ಇಂಬಾಗಿ ಇರಲೆವ್ವ ।
ರಂಭೀಗಿ ರಾಯ ವರನಾಗಿ ।
ರಂಭೀಗಿ ರಾಯ ವರನಾಗಿ-ಇದ್ದಽರ ।
ಭಂಗಾರನ್ಯಾಕ ಇಡಬೇಕ ||೧೦೭೦||

* * *

ಅತ್ತಿ ಅತ್ತಿಕಾಯಿ ಮಾವ ಮಲ್ಲೀಗ್ಹೂವ ।
ಭಂಗಾರ ಗೋಲ ಹಿರಿಭಾವ ।
ಭಂಗಾರ ಗೋಲ ಹಿರಿಭಾವ-ನನ ಮನಿಯ ।
ಅರಿಷೀಣ ಕೆನಿಯು ಅರಸರು ||೧೦೭೧||

* * *

ಸಿಟ್ಟು ಮಾಡುವಿರೇನು ಸಿರಿಯವರು ನನಮ್ಯಾಲೆ ।
ಕಟಿಗೋ ಬ್ಯಾಡ್ರಿ ವೈಮನವ ।
ಕಟಿಗೋ ಬ್ಯಾಡ್ರಿ ವೈಮನವ-ತಾಯ್ತಂದಿ ।
ಕೊಟ್ಟು ಹೋಗ್ಯಾರ ನಿಮ್ಮನಿಗೆ ||೧೦೭೨||

ಬಾಳಿ ಬಾಗ್ಯಾಡ ತಾವ ತೆಂಗು ಜೋಲ್ಯಾಡತಾವ ।
ಮೇಲ್ಯಾಡ ತಾವ ಗಜನಿಂಬಿ ।
ಮೇಲ್ಯಾಡ ತಾವ ಗಜನಿಂಬಿ-ಬನದಾಗ ।
ಪಗಡಿ ಆಡ್ಯಾರ ನನರಾಯ ॥೧೦೭೩॥

* * *

ರಾಯ ಬರತಾರಂತ ರಾತ್ರೀಲಿ ನೀರಿಟ್ಟ ।
ರನ್ನ ಬಚ್ಚಲಕ ಮಣಿಹಾಕಿ ।
ರನ್ನ ಬಚ್ಚಲಕ ಮಣಿಹಾಕಿ-ಕೇಳೇನ ।
ಸಣ್ಣವಳ ಮ್ಯಾಲ ಸಂವತ್ಯಾಕ ॥೧೦೭೪॥

* * *

ಕಾಮು ಕಸ್ತೂರಿ ನಿನ್ನ ಕಾಣದಲೆ ಇರತಾರ ।
ಮಲ್ಲೀಗಿ ನಿನಮಾಯ ಬಿಡಲಾರೆ ।
ಮಲ್ಲೀಗಿ ನಿನಮಾಯ ಬಿಡಲಾರೆ-ಸಾಗರದ ।
ಮುತ್ತs ನಿನ್ನಗಲಿ ಇರಲಾರೆ ॥೧೦೭೫॥

* * *

ಸಾರಿಸಿದ ಮನಿಯಾಗ ಏರಿಸಿದಡಕಲ ।
ವಾರೀಗಿ ರಾಯ ಒಳ ಹೊರಗ ।
ವಾರೀಗಿ ರಾಯ ಒಳ ಹೊರಗ-ಸುಳಿದರ ।
ವಾಲೀಗೆ ವಜ್ರ ಜಡಿಧಾಂಗ ॥೧೦೭೬॥

* * *

ಬಟ್ಟಲ ಗಣ್ಣೀಲಿ ದಿಟ್ಟೀಸಿ ನೋಡ್ಯಾರ ।
ಸಿಟ್ಟ್ಯಾಕೋ ರಾಯ ನನಮ್ಯಾಲ ।
ಸಿಟ್ಟ್ಯಾಕೋ ರಾಯ ನನಮ್ಯಾಲ-ನಾ ಅಂಥ ।
ಹುಟ್ಟಿಸ್ಯಾಡವರ ಮಗಳಲ್ಲ ॥೧೦೭೭॥

* * *

ಹೋಗೂವ ರಾಯsರ ಹೋಲೀಕಿ ನೋಡೇನ ।
ಕಾಲ ಹಿಂಬಡಕ ಕಮಲsವು ।
ಕಾಲ ಹಿಂಬಡಕ ಕಮಲsವು-ಸಂಜೀಯ ।
ಚೆಂದರನಕಿಂತ ಬಲು ಚೆಲುವ ॥೧೦೭೮॥

ಕಾಣದಲೆ ಇರಲಾರೆ ಕನ್ನಡಿ ಮುಖದವರ ।
ಕಾಮನಗಿಂತ ಚೆಲುವರ ।
ಕಾಮನಗಿಂತ ಚೆಲುವರ–ಚೆನ್ನಿಗರ ।
ಕಾಣದರಗಳಿಗೆ ಇರಲಾರೆ ॥೧೦೭೯॥

ರಾಯ ನಿಮಕಿಂತ ಭಾರಿ ಗುಣದವರಿಲ್ಲ ।
ಭಾಳ್ಹೇಳಿಕೊಂಡ ಬಳಗಕ ।
ಭಾಳ್ಹೇಳಿಕೊಂಡ ಬಳಗಕ–ನಿಮ ಸಿಟ್ಟು ।
ತಾಳಿಕೋರಿ ರಾಯ ಕಡೆತನಕ ॥೧೦೮೦॥

* * *

ಹೇಸಿ ನಿನ ಬದುಕೀಗಿ ಆಶೆ ನಾಮಾಡಿಲ್ಲ ।
ರೇಶೀಮಿ ಉಡುವ ಧೊರಿ ನನ್ನ ।
ರೇಶೀಮಿ ಉಡುವ ಧೊರಿ ನನ್ನ–ರಾಯರ ।
ಆಶೆ ಮಾಡೇನ ಅನಗಾಲ ॥೧೦೮೧॥

* * *

ಆಸಾಡ ನೀಗಾಳಿ ಬೀಸ ನನ್ನರ ಮನಿಗೆ ।
ಲೇಸು ಮಾರಾಯರ ಮಂಚಕ ।
ಲೇಸು ಮಾರಾಯರ ಮಂಚಕ--ಸುತ್ತಿರಿಗಿ ।
ಬೀಸು ಸೂವರದ ಸುಳಿಗಾಳಿ ॥೧೦೮೨॥

* * *

ಎಲ್ಲೆಲ್ಲಿ ನೋಡಿದರ ನಲ್ಲನಂಥವರಿಲ್ಲ ।
ದಂಡಿನ್ಯಾಗವರ ದನಿಯಿಲ್ಲ ।
ದಂಡಿನ್ಯಾಗವರ ದನಿಯಿಲ್ಲ–ನಲ್ಲನ ।
ಸೊಲ್ಲ ಕೇಳಿದರ ಸನುಮನಿಕೆ ॥೧೦೮೩॥

* * *

ಅಂಗೀಯ ಮ್ಯಾಲಂಗಿ ಛಂದೇನೋ ನನರಾಯಾ ।
ರಂಭಿ ಮ್ಯಾಲ ರಂಭಿ ಪ್ರತಿ ರಂಭಿ ।
ರಂಭಿ ಮ್ಯಾಲ ರಂಭಿ ಪ್ರತಿ ರಂಭಿ--ಬಂದರ ।
ಛಂದೇನೋ ರಾಯಾ ಮನಿಯಾಗ ॥೧೦೮೪॥

ಹಾಸೀಧಾಸಿಗಿ ಬಿಟ್ಟು ಹಾದೀಗೆ ಮಲಗ್ಯಾರ ।
ಸೂಸ ಗಾಳೀಗೆ ಬಳುಕೂವ ।
ಸೂಸ ಗಾಳೀಗೆ ಬಳುಕೂವ-ರಾಯರಿಗೆ ।
ಏಸು ಬಾರಿ ಕಾಲು ಹಿಡಿಯಾಲಿ ||೧೦೮೫||

* * *

ಭಾಗೇದ ಲಕ್ಕಸವಿ ಬಾಗೀಕ್ಯಾದಗಿಯು ।
ನೇಗೀಲ ಬಂದೆತ್ತು ತುಳಿದಾವು ।
ನೇಗೀಲ ಬಂದೆತ್ತು ತುಳಿದಾವು-ರಾಯರ ।
ತೂಗ ಮಂಚಕ ಇರಬಾರ ||೧೦೮೬||

* * *

ಕಾಜೀನ ಕಂಬಕ್ಕ ಮೋಜೀಲೆ ನಿಂತಾರ ।
ಒಂದೊಂದ ಹೇಳಿ ನಗತಾರ ।
ಒಂದೊಂದ ಹೇಳಿ ನಗತಾರ-ರಾಯರಿಗಿ ।
ಎಂಥ ಸಿರಿಗಂಗಿ ಹಡದಾಳ ||೧೦೮೭||

* * *

ಅತ್ತಿ ನಿಮ್ಹೊಟ್ಟೆಯವರು ಅಸಲ ಪಂಡಿತರಾಯ ।
ಬಿಸಲ್ಹತ್ತಿ ಕುದುರಿ ಇಳಿದಾರ ।
ಬಿಸಲ್ಹತ್ತಿ ಕುದುರಿ ಇಳಿದಾರ-ಅಣ್ಣನ ।
ಎಸಳ ಯಾಲಕ್ಕಿ ಬನದಾಗ ||೧೦೮೮||

* * *

ಸುಣ್ಣ ಇಲ್ಲದ ಗ್ವಾಡಿ ದೇವರಿಲ್ಲದ ಜಗಲಿ ।
ಅರಸರಿಲ್ಲದ ಮನೆತನ ।
ಅರಸರಿಲ್ಲದ ಮನೆತನ-ನಡ್ಸೋದು ।
ಯಾತರ ಸುಖ ಹಡದಪ್ಪ ||೧೦೮೯||

* * *

ಕೂಲಿ ಮಾಡಿದರೇನ ಕೋರಿ ಹೊತ್ತರೇನ ।
ನಮಗ ನಮರಾಯ ಬಡವೇನ ।
ನಮಗ ನಮರಾಯ ಬಡವೇನ--ಬಂಗಾರ ।
ಮಾಲ ಇದ್ಹಾಂಗ ಮನಿಯಾಗ ||೧೦೯೦||

ರಾಜ ಅಂಗಳದಾಗ ರಾಯರ ಸುಳುವಿಲ್ಲ ।
ಪಾಗದಾಗವರ ಕುದುರಿಲ್ಲ ।
ಪಾಗದಾಗವರ ಕುದುರಿಲ್ಲ--ನನಬಾಳಾ ।
ಹೋಗಿ ಬಾ ಅವರ ಸದರೀಗಿ ॥೧೯೧॥

* * *

ಕಡಗದ ನನಕೈಯ ಬಿಡು ನನ್ನ ಮಾರಾಯಾ ।
ಕದನ ಬಂದಾವು ನಮನಿಮಗ ।
ಕದನ ಬಂದಾವು ನಮನಿಮಗ--ವೀಳ್ಯದವ ।
ಮಡಚಾಗ ಕಂಡ ನಿಮ ಮನವ ॥೧೯೨॥

* * *

ಸೊಲ್ಲಾಪುರದ ಸೆಲ್ಲೆ ಅದಕ-ಮುತ್ತಿನ ಗೊಲ್ಲೆ ।
ಬಿಚ್ಚಿ ನನಮ್ಯಾಲೆ ಒಗೆವಂಥ ।
ಬಿಚ್ಚಿ ನನಮ್ಯಾಲೆ ಒಗೆವಂಥ--ರಾಯರನ ।
ಬಿಟ್ಟ್ಯಾಂಗ ಬರಲಿ ಹಡೆದವ್ವ ॥೧೯೩॥

* * *

ಎಲ್ಲಿ ಹೋಗಿದ್ದಿ ರಾಯ ಸೆಲ್ಯಾಕ ಮಾಸೇದ ।
ಅಲ್ಲ್ಯೊಬ್ಬ ಕೂಡ ಸಲಗೀಯ ।
ಅಲ್ಲ್ಯೊಬ್ಬ ಕೂಡ ಸಲಗೀಯ-ನೀವ್ ಮಾಡಿ ।
ಇಲ್ಲೆಂಬುದೇನ ನನಮುಂದ ॥೧೯೪॥

ಹಚ್ಚೇದ ಮಾತೀಗೆ ಹರಿವ ಗಂಗೆರಡಾಗಿ ।
ನಿಚ್ಚಳ ಮನವು ವಿಷವಾಗಿ ।
ನಿಚ್ಚಳ ಮನವು ವಿಷವಾಗಿ--ಒಳಗೊಳಗ ।
ಹಚ್ಚಿದವರ್‍ಯಾರು ಕದನವನು ॥೧೯೫॥

* * *

ಸೇರದ ಗಂಡನ್ನ ಏನೆಂದು ಕರೆಂಯಾಲಿ ।
ಬಾರೋ ಗಂಡಯ್ಯ ಮಲಗೋಣು ।
ಬಾರೋ ಗಂಡಯ್ಯ ಮಲಗೋಣು--ಮಂಚದ್ಮ್ಯಾಲೆ ।
ತಾಳೇ ಹೂವಿನ ತಲೆದಿಂಬು ॥೧೯೬॥

ಸಂಗಾತಿ ನೀ ಬಾರೆ ಮೂಢ ಸೀಮೆಯ ಹೆಣ್ಣೆ ।
ಉಂಗುರವ ತಾರೆ ಬೆರಳೀಗಿ ।
ಉಂಗುರವ ತಾರೆ ಬೆರಳೀಗಿ–ಜಂತನದ ।
ರಂಭೆ ನಿನ್ನ ಹೆರಿಗ ಮರಿಯಽಲಿ ||೧೦೯೭||

* * *

ತೋಳುದ್ದ ತಲೆದಿಂಬು ಮಾರುದ್ದ ಹಾಸೀಗಿ ।
ಮಾಣಿಕದಂಥ ಮಗ ಮುಂದೆ ।
ಮಾಣಿಕದಂಥ ಮಗ ಮುಂದೆ–ಮಲಗಿದರೆ ।
ಮಾರಾಯ್ರು ಗೊಡವಿ ನನಗೇನ ||೧೦೯೮||

* * *

ಗಡುಸಿರಲಿ ಹಾಂಗಿರಲಿ ನನ ಗಂಡ ದೇವರು ।
ನಮ ರಾಯ್ರೇ ನನ ದೇವರು ।
ನಮ ರಾಯ್ರೇ ನನ ದೇವರು–ದಿನದಲ್ಲಿ ।
ದೇವಽರ ನೋಟ ಉರಿ ನೋಟ ||೧೦೯೯||

* * *

ಸಾವು ತನಕ ಬಿಡದು ಸವತಿ ಮಕ್ಕಳ ಜಗಳ ।
ಸರಿ ಮನ್ಯಾಗಿರುವ ನೆಗಿಯೇಣಿ ।
ಸರಿ ಮನ್ಯಾಗಿರುವ ನೆಗಿಯೇಣಿ–ನಿನ ಜಗಳ ।
ಬ್ಯಾರ್ಯಾಗುತನಕ ಬಿಡಲಿಲ್ಲ ||೧೧೦೦||

* * *

ಸವತಿ–ಸವತೆರ ಜಗಳ ಪಟ್ಟೆ ಮಂಚದ ಮ್ಯಾಲ ।
ಹೊನ್ನ ಸರ ಹರಿದು ಬಳಿ ಒಡೆದು ।
ಹೊನ್ನ ಸರ ಹರಿದು ಬಳಿ ಒಡೆದು-ನನ ಸವತಿ ।
ವಾಲಿ ಕಿತ್ಹೋಯ್ತು ಬಿಡ ಸೆರಗ ||೧೧೦೧||

* * *

ಸರದು ನಾಮಲಗಟಿಗೆ ಸರಗೀಯ ಕೋಡೈತ್ತಿ ।
ಕಾಲುಂಗರೊತ್ತಿ ಬಳಿಯೊತ್ತಿ ।
ಕಾಲುಂಗರೊತ್ತಿ ಬಳಿಯೊತ್ತಿ-ರಾಯಽರ ।
ಮೈಯೊತ್ತಿ ನಿದ್ದಿ ಬಾರಽದ ||೧೧೦೨||

ಜಾಡಿ ಜಮಖಾನ್ಯೊತ್ತಿ ಕಂಬಳಿಯ ಕರಿಯೊತ್ತಿ ।
ಉಂಗುರುಡುಗೂಣಿ ಖಡೆಯೊತ್ತಿ ।
ಉಂಗುರುಡು ಗೂಣಿ ಖಡೆಯೊತ್ತಿ-ಸತಿಯಽಳ ।
ನತ್ತ್ಯೊತ್ತಿ ನಿದ್ದಿ ಬಾರಽವ ॥೧೧೦೬॥

ಹಣ್ಣು ಹಾಗಲಕಾಯಿ ಎಣ್ಣ್ಯಾಗ ಕರದೇನ ।
ಉಂಡಾರ ನೋಡ ರುತಿಗಾರ ।
ಉಂಡಾರ ನೋಡ ರುತಿಗಾರ-ನನ ಮ್ಯಾಲೆ ।
ತಂದಾಽರ ನೋಡ ಸವತೀನ ॥೧೧೦೪॥

* * *

ಎಲ್ಲಾರ ಹಟ್ಟ್ಯೇಲಿ ಬೆಲ್ಲಽ ಬೇವಿನಮರವು ।
ಪಲ್ಲಣಿಸಿ ಬೆಳೆವ ಫಣಿಯಾಲ ।
ಪಲ್ಲಣಿಸಿ ಬೆಳೆವ ಫಣಿಯಾಲ-ಮರದಡಿಗೆ ।
ನಲ್ಲ ಕೂತಾನ ಬರಹೇಳ ॥೧೧೦೫॥

* * *

ಏರಿಮ್ಯಾಲ ನಿಂತು ಯಾರ್‍ಯಾರ್‍ನ ನೋಡೀದಿ ।
ದೂರ ಹೋಗ್ಯಾನ ನಿನಗಂಡ ।
ದೂರ ಹೋಗ್ಯಾನ ನಿನಗಂಡ-ಕಂದವ್ವ ।
ಕೀಲು ಹೊಂಬಾಳೆ ತರಲಾಕ ॥೧೧೦೬॥

* * *

ನಲ್ಲನ್ನ ಕರಕೊಂಡು ಮಲ್ಲಿಗೆಗೆ ಹೊರಟಾಳ ।
ಎಲ್ಲಿತ್ತು ಕಾಡ ಕೊನೆ ಮುಳ್ಳು ।
ಎಲ್ಲಿತ್ತು ಕಾಡ ಕೊನೆ ಮುಳ್ಳು-ಮುರಿದಽರ ।
ನಲ್ಲ ಬೆಳತಽನ ನರಳ್ಯಾನ ॥೧೧೦೭॥

* * *

ಕಟ್ಟ್ಯಾಣಿ ಗುಂಡೀಗೆ ಕಲ್ಲಾಕೀದುಂಗೂರ ।
ಸಿಟ್ಟು ಮಾಡಿದರೆ ನಗುವಂಥ ।
ಸಿಟ್ಟು ಮಾಡಿದರೆ ನಗುವಂಥ-ರಾಯರನ ।
ಬಿಟ್ಟ್ಯಾಂಗ ಬರಲೆ ಹಡೆದವ್ವ ॥೧೧೦೮॥

ಮುತ್ತೈದಿ ತನಬೇಡಿ ಮೂರ್ತ್ಯಾಸು ನಾ ನಿಂತೆ ।
ಮುತ್ತೀನ ತುರಾಯ್ದ ಅರಸರ ।
ಮುತ್ತೀನ ತುರಾಯ್ದ ಅರಸರ-ಸಂಗ ಬೇಡಿ ।
ಸುತ್ತೀನ ಶಿವನ ಶಿಖರಽವ ||೧೧೦೯||

* * *

ಮುತ್ತೈದೆತನ ಬೇಡಿ ಮೂರ್ಸುತ್ತು ಬಲಗೊಂಬೆ ।
ಮುತ್ತೀನ ಮೂಗುತಿಯರಸರಿಗೆ ।
ಮುತ್ತೀನ ಮೂಗುತಿಯರಸರಿಗೆ--ಅವಿಷ್ಟಬೇಡಿ ।
ಮುತ್ತೈದ ಸುತ್ತ ಬಲಗೊಂಬೆ ||೧೧೧೦||

* * *

ಅಂಥವರು ಮುನಿದರೆ ಪಂಥವು ನನಗಿತ್ತ ।
ಕುಂತಿ ಅತ್ತೆನ್ನ ಕುವರಽರು ।
ಕುಂತಿ ಅತ್ತೆನ್ನ ಕುವರಽರು--ಮುನಿದಽರ ।
ಸಂತೋಷವಿಲ್ಲ ಮನದಾಗ ||೧೧೧೧||

* * *

ಹೇಸಿಗೆಯ ಬದುಕೀಗೆ ಆಸ್ಥೆಯ ಮಾಡ್ಲಿಲ್ಲ ।
ರೇಶಿಮೆಯ ನುಡುವ ನನಧೊರೆ ।
ರೇಶಿಮೆಯ ನುಡುವ ನನಧೊರೆ--ರಾಯಽರ ।
ಆಸೆ ಮಾಡೇನು ಅನುಗಾಲ ||೧೧೧೨||

* * *

ಸೆರಗಽ ಬಿಡು ಸ್ಯಾವಂತಿಗಿ ಉದಿರ್ಯಾವು ।
ಅಚ್ಚಽ ಮಲ್ಲೀಗಿ ವನರಾಜಾ ।
ಅಚ್ಚಽ ಮಲ್ಲೀಗಿ ವನರಾಜಾ--ಉದಿರ್ಯಾವು ।
ಮೆಚ್ಚಿ ಬಂದ್ಹೆಣ್ಣೆ ಬಿಡು ಸೆರಗ ||೧೧೧೩||

* * *

ವಾರೀಗೆ ರಾಯರು ಊರಿಗ್ಹೋದರೆ ।
ಸೇರು ಭಂಗಾರ ತೆಗೆದ್ಹಾಂಗ ।
ಸೇರು ಭಂಗಾರ ತೆಗೆದ್ಹಾಂಗ--ಮಲ್ಲೀಗೆ ।
ಮುಡಿದು ಅಂಗಳಕ ಒಗೆದ್ಹಾಂಗ ||೧೧೧೪||

ಸಿರಿಗಂಧದ ಚೆಕ್ಕೆ ಒಡೆದು ಹಿತ್ತಲತುಂಬಿ ।
ತಿರುಗಾಡಿ ನೀರ ಬೆರಸೇನ ।
ತಿರುಗಾಡಿ ನೀರ ಬೆರಸೇನ--ನನಮುನಿಗೆ ।
ಹಿಡಿ ಹೊನ್ನು ತರುವ ಹಿರಿಯರಿಗೆ ॥೧೧೧೫॥

* * *

ಹಿಂಡು ಮಂದ್ಯಾಗಿರುವ ಪುಂಡ ಊಟಕೆ ಬಂದ್ರು ।
ದುಂಡಕ್ಕಿ ಬಾನ ಕುದಿಯಾವ ।
ದುಂಡಕ್ಕಿ ಬಾನ ಕುದಿಯಾವ -ರಾಯರ ।
ಪುಂಡಾಟದಾಟ ಹಿಡಿಲಾರೆ ॥೧೧೧೬॥

* * *

ಕಮಲದ ಹೂ ನಿನ್ನ ಕಾಣದೆ ಇರಲಾರೆ ।
ಮಲ್ಲೀಗೆ ಮಾಯ ಬಿಡಲಾರೆ ।
ಮಲ್ಲೀಗೆ ಮಾಯ ಬಿಡಲಾರೆ--ಕ್ಯಾದೀಗಿ ।
ಗರಿ ನಿನ್ನಗಲಿ ನಾ ಇರಲಾರೆ ॥೧೧೧೭॥

* * *

ಅರಗಿನಂಥನಲ್ಲ ತಿರುಗಿ ಬಾರದೆ ಹೋದ ।
ಅರಗೀಣಿ ಹೋಗಿ ಕರೆತಾರ ।
ಅರಗೀಣಿ ಹೋಗಿ ಕರೆತಾರ–ನಗರದ ।
ದರಬಾರದಾಗ ಇರತಾರ ॥೧೧೧೮॥

* * *

ಶೆಟ್ಟಿ ಶೆಟ್ಟರು ಕೂಡಿ ದಿಕ್ಕೆಲ್ಲ ಹುಡುಕಿದರ ।
ಮತ್ತೆಲ್ಲಿ ತಂದ್ಯೋ ಚಲುವೀಯ ।
ಮತ್ತೆಲ್ಲಿ ತಂದ್ಯೋ ಚಲುವೀಯ--ಮಲ್ಲಾಡ ।
ಬಾಳೆ ಬನದಾಗೊಂದರ ಗಿಣಿಯ ॥೧೧೧೯॥



ಹಟ್ಟ್ಯಾಗ ನಿಂತು ಹತ್ತು ಬೆರಳು ನೊಂದಾವು ।
ನೆತ್ತೀಯ ದಂಡೆ ಸರಿದಾವು ।
ನೆತ್ತೀಯ ದಂಡೆ ಸರಿದಾವು-ತಂಗೆವ್ವ ।
ತಡೆದ ಬಾಗೀಲ ಬಿಡು ನಮಗೆ ॥೧೧೩೧॥

* * *

ಆನೆಗಾನೇ ಕೊಡುವೆ ಆನೆ ಮರಿಗಳ ಕೊಡುವೆ ।
ಕಂಠೀಸರ ಕೊಡುವೆ ಕೊರಳೀಗೆ ।
ಕಂಠೀಸರ ಕೊಡುವೆ ಕೊರಳೀಗೆ-ತಂಗೆವ್ವ ।
ತಡೆದ ಬಾಗೀಲ ಬಿಡು ನಮಗೆ ॥೧೧೩೨॥

* * *

ಆನೆಗಳು ನಮಗುಂಟು ಆನೇ ಮರಿಗಳುಂಟು ।
ಕಂಠಿಸರ ಉಂಟು ಕೊರಳೀಗೆ ।
ಕಂಠಿಸರ ಉಂಟು ಕೊರಳೀಗೆ-ಅಣ್ಣಯ್ಯ ।
ತಡೆದ ಬಾಗೀಲ ಬಿಡಲೊಲ್ಲೆ ॥೧೧೩೩॥

*

ಕಲ್ಲಾಕ್ರೈಲೆ ಕಲ್ಲೊಡ್ಡಿ ಹೂವ ಬಿಡಿಸುವ ಜಾಣೆ ।
ತಂಗೆವ್ವ ಬಾಗೀಲ ಬಿಡವಳ್ಳು ।
ತಂಗೆವ್ವ ಬಾಗೀಲ ಬಿಡವಳ್ಳು-ಅವಳೊಂದು ।
ಮಾತೀಗೆ ಬಾಗೀಲ ತಡೆದಾಳ ॥೧೧೩೪॥

* * *

ಹಟ್ಟ್ಯಾಗ ನಿಂತು ಬೆರಳು ನೊಂದಾವು ।
ನೆತ್ತೀಯ ದಂಡಿ ಸರಿದಾವು ।
ನೆತ್ತೀಯ ದಂಡಿ ಸರಿದಾವು-ನಾದುನೀ ।
ತಡೆದ ಬಾಗಿಲು ಬಿಡು ನಮಗ ॥೧೧೩೫॥

* * *

ಅತ್ತಿ ಗತ್ತಿಗೆ ಅಡಕೆ ಜೂಜಾಡ್ಯಾವು ।
ಮುತ್ತಿನಾ ಜೂಜು ಸರಜೂಜು ।
ಮುತ್ತಿನಾ ಜೂಜು ಸರಜೂಜು-ಅತ್ತೀಗೆ ।
ಹೆತ್ತ್ಹೆಣ್ಣ ಜೂಜು ಮಗನೀಗೆ ॥೧೧೩೬॥

ನಾನು ಹೆಣ್ಣಾಡೆದಾಗ ನೀನು ಗಂಡ್ಹಾಡೆದಾಗ ।
ಗಾಜನೂರ ಗದ್ದೆ ಬೆಳೆದಾಗ ।
ಗಾಜನೂರ ಗದ್ದೆ ಬೆಳೆದಾಗ-ನಾದೂನಿ ।
ಮಾಡಿಕೊಳ್ಳೋಣ ಮದುವೇಯ ||೧೧೩೭||

* * *

ಸಿರಿಗೆರೆ ಪರ್ವತಕೆ ಹೋದುದೊಂದುಂಟಾದ್ರೆ ।
ಶಿವನ ದಯದಿಂದ ಮಗಳಾದ್ರೆ ।
ಶಿವನ ದಯದಿಂದ ಮಗಳಾದ್ರೆ-ನಾದೂನಿ ।
ಮಗನೀಗೆ ಧಾರೆ ಎರೆವೇನು ||೧೧೩೮||

* * *

ಊರ ಮುಂದಿರುವ ಹೊನ್ನರಳಿ ಮರವೇ ।
ಅಣ್ಣನ ಮನಿಗೆ ಹೆಣ್ಣೀಗೆ ।
ಅಣ್ಣನ ಮನಿಗೆ ಹೆಣ್ಣೀಗೆ-ಬರತೇನಿ ।
ಹೊಣಿಯಾಗು ನೀನು ನೆರಳಾಗು ||೧೧೩೯||

* * *

ತಂಗೀಯು ಕಳುವಿ ಹಿಂದಿರುಗಿ ಬರುವಾಗ ।
ಅಂದಲದ ಕೊಂಬ ಹಿಡುಕೊಂಡು ।
ಅಂದಲದ ಕೊಂಬ ಹಿಡುಕೊಂಡು-ಕೇಳ್ಯಾಳ ।
ಯಾವಾಗ ಬರತೀಯ ಹಿರಿಯಣ್ಣ ||೧೧೪೦||

* * *

ಹಲಸಿನ್ಹಣ್ಣಾದಾಗ ಹುಣಸೆ ಫಲಬಿಟ್ಟಾಗ ।
ನೀನೊಬ್ಬ ಮಗನ ಪಡೆದಾಗ ।
ನೀನೊಬ್ಬ ಮಗನ ಪಡೆದಾಗ-ತಂಗೆವ್ವ ।
ಮಾಗಾಯಿ ತರುವೆ ಮಗನೀಗೆ ||೧೧೪೧||

* * *

ಮಾಗಾಯಿ ತಂದsರ ನಿನ್ನ ಅಳಿಯನಿಗಾತು ।
ಪ್ರೀತಿಲ್ಲವೇನು ನನಮ್ಯಾಲ ।
ಪ್ರೀತಿಲ್ಲವೇನು ನನಮ್ಯಾಲ-ಅಣ್ಣಯ್ಯ ।
ನನಗೇನು ತರುವೆ ನಿಜಹೇಳು ||೧೧೪೨||

ಹತ್ತು ತಳಕಿನ ಸೀರೆ ಒತ್ತಿಲಿ ಪಟ್ಟೆ ಸೀರೆ ।
ರತ್ನಗಿರಿ ಎಂಬೋ ರವಿಕೇಯು ।
ರತ್ನಗಿರಿ ಎಂಬೋ ರವಿಕೇಯು-ತಕ್ಕೊಂಡು ।
ಮತ್ತೆ ಬರತೇನಿ ಕರಿಯಾಕ ॥೧೧೪೩॥

* * *

ಚಂದಾರ ಗಿರಿಯಾಗ ಮನೆ ನೋಡಿ ಬಂದೀನಿ ।
ಚಂದ್ರಾಮಗಿಂತ ಚಲುವೀಯು ।
ಚಂದ್ರಾಮಗಿಂತ ಚಲುವೀಯು-ನೋಡೀನಿ ।
ಒಪ್ಪೇನೋ ಕಂದ ಮನಸೀಗಿ ॥೧೧೪೪॥

* * *

ಅತ್ತೆ ಮಾವsಗಂಜಿ ಮತ್ತೆ ಹಿರಿಯರಿಗಂಜಿ ।
ನಡೆಯುವ ಸುಗುಣೆ ಚಲುವೀಯು ।
ನಡೆಯುವ ಸುಗುಣೆ ಚಲುವೇಯು-ಮಾವನ ಮಗಳ ।
ತಂದsರೆ ಒಪ್ಪು ಮನಸೀಗೆ ॥೧೧೪೫॥

* * *

ಸೋಮವಾರದ ಪೇಟೆ ಗ್ರಾಮದೇರೀ ವ್ಯಾಲೆ ।
ಹೋಗುವ ಅಣ್ಣಯ್ನ ಸೆರಗ್ಹಿಡಿದು ।
ಹೋಗುವ ಅಣ್ಣಯ್ನ ಸೆರಗ್ಹಿಡಿದು-ಕೇಳ್ಯಾಳ ।
ಹೆಣ್ಣೆ ಬರತೇನಿ ಮಗನೀಗೆ ॥೧೧೪೬॥

* * *

ಗರಡೀಗೆ ಹೋಗವ್ನ ಜಾಣ ಗಂಭೀರನ ।
ಗಂಧsದ ಲೋಡ ತಿರುವವನ ।
ಗಂಧsದ ಲೋಡ ತಿರುವವನ-ಅಣ್ಣಯ್ಯ ।
ಮಗನೀಗೆ ಹೆಣ್ಣು ಕೊಡಬೇಕು ॥೧೧೪೭॥

ಬೀದೀಲೆ ಹೋಗೋನೆ ಬಿಂಕsದ ನಡೆಯುವನೆ ।
ಚಿನ್ನsದ ಹೊದ್ಕೆ ಕೊಡೆಯುವನೆ ।
ಚಿನ್ನsದ ಹೊದ್ಕೆ ಕೊಡೆಯುವನೆ-ಅಣ್ಣಯ್ಯ ।
ಹೆಣ್ಣೀಗೆ ಬರತೇನಿ ಮಗನಿಗೆ ॥೧೧೪೮॥

ಮಾತೀಗೆ ಬರತೇನಿ ಮನೇಲಿರು ಅಣ್ಣಯ್ಯ ।
ಮಾತು ಹೊನ್ನುಳ್ಳೋರೊಡಗೊಂಡು ।
ಮಾತು ಹೊನ್ನುಳ್ಳೋರೊಡಗೊಂಡು-ಬರತೇನಿ ।
ಕನ್ನೆಗೆ ಮಾತು ಕೊಡುವಂತಿ ||೧೧೪||

* * *

ಮಾತು ಕೊಡುವೋಕೆ ನನ್ನಿಚ್ಛೆ ತಂಗೆವ್ವ ।
ನಿಮ್ಮ ತಾಯಿ ತಂದೆಯ ಬೆಸಗೊಳ್ಳೆ ।
ನಿಮ್ಮ ತಾಯಿ ತಂದೆಯ ಬೆಸಗೊಳ್ಳೆ-ತಂಗೆವ್ವ ।
ನಿಮ್ಮತ್ತಿಗೆ ಚೆನ್ನಿಯ ಬೆಸಗೊಳ್ಳೆ ||೧೧೫||

* * *

ಅಣ್ಣನ ಮನೀಗೆ ಹೆಣ್ಣೀಗೆ ನಾ ಹೋದೆ ।
ಸುಣ್ಣದ ಗೋಡೆ ಮರೆಯಲ್ಲಿ ।
ಸುಣ್ಣದ ಗೋಡೆ ಮರೆಯಲ್ಲಿ-ನಿಂತುಕೊಂಡು ।
ಕಣ್ಸನ್ನಿ ಮಾಡ್ಯಾಳು ಪುರುಷನ ।   ||೧೧೬||

* * *

ಕಣ್ಸನ್ನಿ ಮಾಡಾಕ ಅನ್ನಿಗರ ಮಗಳೇನೆ ।
ನಾನಿಮ್ಮ ರಾಯರ ಕಿರಿತಂಗಿ ।
ನಾ ನಿಮ್ಮ ರಾಯರ ಕಿರಿತಂಗಿ-ಅತ್ತೀಗೆ ।
ಸುಮ್ಮನೆ ಹೆಣ್ಣು ಕೊಡಬಾರ ||೧೧೭||

* * *

ಹೆಣ್ಣು ಕೊಡುವೋಕೆ ನನ್ನಿಚ್ಛೇ ನಾದೂನಿ ।
ಚಿನ್ನದ ಹೊದ್ಕೆ ಕೊಡೆಯನ್ನು ।
ಚಿನ್ನದ ಹೊದ್ಕೆ ಕೊಡೆಯನ್ನು-ಹಿಡಿಯೋರ ।
ಅಣ್ಣ ಚೆನ್ನಿಗರ ಬೆಸಗೊಳ್ಳೆ ||೧೧೮||

* * *

ಹನ್ನೆರಡು ಅಂಕಣದ ಗರಡೀಲಿ ಇರುವವರೆ ।
ರತ್ನವ ತೂಗಿ ಬೆವತವರೆ ।
ರತ್ನವ ತೂಗಿ ಬೆವತವರೆ-ಅಣ್ಣಯ್ಯ ।
ಹೆಣ್ಣಿಗೆ ಬಂದೀನಿ ಕೊಡು ಧೊರಿಯೆ ||೧೧೯||

ಹಾಲು ಬಾನ ಉಣ್ಣುವಳು ಹವಳಕೇರಾಡವಳು ।
ಆಚಿ ಓಣ್ಯಾಗ ಪಗಡೀಯು ।
ಆಚಿ ಓಣ್ಯಾಗ ಪಗಡೀಯು–ಆಡುವ ಮಗಳ ।
ದೂರsದ ಸೀಮಿಗೆ ಕೊಡಲಾರೆ ||೧೧೫೫||

* * *

ಹಾಲು ಬಾನುಣ್ಣsಲಿ ಹವಳ ಕೇರಾಡಲಿ ।
ಆಚಿ ಓಣ್ಯಾಗ ಪಗಡೀಯು ।
ಆಚಿ ಓಣ್ಯಾಗ ಪಗಡೀಯು-ಆಡಲೆಣ್ಣ ।
ನಿನ ಮಗಳ ನಮಗ ಕೊಡಬೇಕು ||೧೧೫೬||

* * *

ತುಪ್ಪ ಬಾನುಣ್ಣುವಳು ಮುತ್ತ ಮೊಗದಾಡುವಳು ।
ಹತ್ತಿರದ ಬೀದೀಲಿ ಪಗಡೀಯು ।
ಹತ್ತಿರದ ಬೀದೀಲಿ ಪಗಡೀಯು-ಆಡುವ ಮಗಳ ।
ದೂರsದ ಸೀಮಿಗೆ ಕೊಡಲಾರೆ ||೧೧೫೭||

ತುಪ್ಪ ಬಾನುಣ್ಣಲಿ ಮುತ್ತು ಮೊಗದಾಡಲಿ ।
ಹತ್ತಿರದ ಬೀದೀಲಿ ಪಗಡೀಯು ।
ಹತ್ತಿರದ ಬೀದೀಲಿ ಪಗಡೀಯು-ಆಟsವ ಆಡಲೆಣ್ಣ ।
ನಿನ ಮಗಳ ನಮಗೇ ಕೊಡಬೇಕು ||೧೧೫೮||

* * *

ಹತ್ತರುವೆ ಹಾಸಿದ್ದೆ ಹತ್ತರುವೆ ಹೊಚ್ಚಿದ್ದೆ ।
ಹತ್ವರ್ಷ ನಾನು ಸಲುಹೀದ ।
ಹತ್ವರ್ಷ ನಾನು ಸಲುಹೀವ-ಮಗಳ ।
ನಿನ ಮನೆಗೆ ನಾನು ಕೊಡಲಾರೆ ||೧೧೫೯||

ಆನೆ ಮ್ಯಾಗಿಂದ ಹಣದ ದಾನ ಮಾಡುತ ಬರುವೆ ।
ರಾಯ ನಿನ್ಮಗಳ ತರಬಲ್ಲೆ ।
ರಾಯ ನಿನ್ಮಗಳ ತರಬಲ್ಲೆ-ಅಣ್ಣಯ್ಯ ।
ನ್ಯಾಯsದಿ ಮಗಳ ಕೊಡು ಧೊರಿಯೆ ||೧೧೬೦||

ಒಂಟಿ ವ್ಯಾಗಿಂದ ಹಣವ ವೆಚ್ಚsವ ಮಾಡುತ ಬರುವೆ |
ನೆಂಟ ನಿನ್ಮಗಳ ತರಬಲ್ಲೆ |
ನೆಂಟ ನಿನ್ಮಗಳ ತರಬಲ್ಲೆ–ಅಣ್ಣಯ್ಯ |
ಮಂಟಪದ ಧೊರೆಯೆ ನುಡಿಮಾತ ||೧೧೬೧||

* * *

ಹೆಣ್ಣೆ ಬರುವ ತಂಗಿ ಮೊನ್ನೇ ಬರಬೇಕಿತ್ತ |
ಹೊನ್ನೂರ ಸೀಮೆ ಧೊರಿಬಂದು |
ಹೊನ್ನೂರ ಸೀಮೆ ಧೊರಿಬಂದು--ಮಗಳೀಗೆ |
ಹೊನ್ನ ಕಂಕಣ ತೊಡಿಸ್ಹೋದ ||೧೧೬೨||

*

ಹತ್ತೂರು ಆಳೂವ ಗೌಡನಾಯ್ಕರ ಮಗಳ |
ಮದುವೇಯು ಮಾಡಿ ತರುವೇನು |
ಮದುವೇಯು ಮಾಡಿ ತರುವೇನು-ಅಣ್ಣಯ್ಯ |
ನಿನ್ನೂರ ಮ್ಯಾಲೆ ಬರುವೇನು ||೧೧೬೩||

* * *

ಬಣ್ಣsವ ಉಡಿಸಿ ನಿನ್ನೂರಿಗೆ ಬರುವಾಗ |
ನಿನಗೊಂದು ವೀಳ್ಯsವ ಕೊಡತೇನಿ |
ನಿನಗೊಂದು ವೀಳ್ಯsವ ಕೊಡತೇನಿ-ಅಣ್ಣಯ್ಯ |
ನೀನೋಡಿ ಬಾಯಃ ಬಿಡತೀಯ ||೧೧೬೪||

* * *

ಹೆಣ್ಣು ಕೊಡತಾರೆಂದು ಹೆಮ್ಮೇಲಿ ನಾ ಬಂದೆ |
ಹೆಣ್ಣು ಕೊಡದಿದ್ರ ಚಿಂತಿಲ್ಲ |
ಹೆಣ್ಣು ಕೊಡದಿದ್ರ ಚಿಂತಿಲ್ಲ–ಧೊರೆಯೆ
ಪುಣ್ಯವಂತನಾಗಿ ನೀ ಬಾಳು ||೧೧೬೫||

ಕೂಸು ಕೊಡದಿದ್ದರೆ ಚಿಂತಿಲ್ಲ ಅಣ್ಣಯ್ಯ |
ಭಾಗ್ಯವಂತನಾಗಿ ನೀ ಬಾಳು |
ಭಾಗ್ಯವಂತನಾಗಿ ನೀ ಬಾಳು-ಅಣ್ಣಯ್ಯ |
ಆಶುವಂತನಾಗಿ ನೀ ಬಾಳು ||೧೧೬೬||

ಮಾವನ ಮನಿಮುಂದ ಮಾವಿನ ಮರಹುಟ್ಟಿ ।
ಹೂವಾದರೇನು ಫಲವಿಲ್ಲ ।
ಹೂವಾದರೇನು ಫಲವಿಲ್ಲ-ಅಣ್ಣಯ್ಯ ।
ನಿನಗ ಮಗಳಿದ್ದರೇನು ರುಣವಿಲ್ಲ ||೧೧೬೭||

* * *

ಮನದಾಗ ಮರಗ್ಯಾನ ಕುಮಾರೇರಿ ಹೊರಟಾನ ।
ಹಾದ್ಯಾಗ ತಂಗೀಯ ತಡೆದಾನ ।
ಹಾದ್ಯಾಗ ತಂಗೀಯ ತಡೆದಾನ--ನುಡಿದಾನ ।
ಬಾರಮ್ಮ ಮಗಳ ಕೊಡತೇನಿ ||೧೧೬೮||

## ಅತ್ತೆ ಮನೆಯ ಕಿರುಕುಳ

ಅತ್ತೀಯ ಮನಿಯಾಗ ಅರವತ್ತು ಗಂಗಾಳ ।
ಬೆಳಗತೇನತ್ತಿ ಬೈ ಬ್ಯಾಡ ।
ಬೆಳಗತೇನತ್ತಿ ಬೈ ಬ್ಯಾಡ-ತವರವರು ।
ಸರ ಮುತ್ತು ಮಾಡಿ ಸಲುವ್ಯಾರ ||೧೧೬೯||

* * *

ಗಂಡನ ಈ ಮನೆಯು ಗಂಡು ನಾರಿಯ ಮುಳ್ಳ ।
ಕುಂಡರಗೊಡರ ನಿಲಗೊಡರ ।
ಕುಂಡರಗೊಡರ ನಿಲಗೊಡರ-ಬೇಗೀಗೆ ।
ಕಂದನ ಮೊಲೆಯ ಕೊಡಗೊಡರ ||೧೧೭೦||

* * *

ಸಕ್ಕರಿ ಹೇರಿಕೊಂಡು ಸೊಲಗಕ್ಹೋಗುವ ಜಾಣ ।
ನಮ್ಮಪ್ಪಗ್ಹೇಳೋ ಮರೀಬ್ಯಾಡ ।
ನಮ್ಮಪ್ಪಗ್ಹೇಳೋ ಮರೀಬ್ಯಾಡ-ಅತ್ತೀಮನಿ ।
ಬೆಳದಿಂಗಳು ನನಗ ಬಿಸಿಲಾಯು ||೧೧೭೧||

ಮಾರಾಯರು ಬೈದsರ ಬಾರsವು ಕಣ್ಣೀರು ।
ಮಾರಾಯರ ತಮ್ಮ ಮೈದೂನ ।
ಮಾರಾಯರ ತಮ್ಮ ಮೈದೂನ-ಬೈದರ ।
ಮಾಡಿಲ್ಲದ ಮಳಿಯು ಸುರಿಧಂಗ ॥೧೧೭೨॥

ಹಣ್ಣು ಮೆಣಶಿನ ಕಾಯಿ ಕಣ್ಣೀಗಿ ಕೆಂಪsಗ ।
ಸಣ್ಣಾಕಿ ಏನ ನೆಗೆಣ್ಣಿ ।
ಸಣ್ಣಾಕಿ ಏನ ನೆಗೆಣ್ಣಿ--ಆಕಿಮಾತು ।
ಬೆಣ್ಣ್ಯಾಗ ಮುಳ್ಳು ಮುರಿಧಂಗ ॥೧೧೭೩॥

* * *

ಗಂಡನ ಮನೆಯು ಚಂಡ ಸೀಗೆಯ ಗುತ್ತಿ ।
ಅತ್ತೆಯೆಂಬವಳು ಉರಿಮಾರಿ ।
ಅತ್ತೆಯೆಂಬವಳು ಉರಿಮಾರಿ--ಗಂಡsನ ।
ಕಂಡರೆ ಮೈ ನಡುಗಿ ಬೆವರೀತು ॥೧೧೭೪॥

* * *

ಹುಚ್ಚನಂಥ ಗಂಡ ಹುಲಿಯಂಥ ಮೈದೂನ ।
ನಿಚ್ಚ ಪಂಡಿತಳು ನೆಗೆಣ್ಣಿ ।
ನಿಚ್ಚ ಪಂಡಿತಳು ನೆಗೆಣ್ಣಿ--ಕೈಯಾಗ ।
ಹುಚ್ಚಿ ನಾ ಹ್ಯಾಂಗ ನಡಿಯsಲಿ ॥೧೧೭೫॥

* * *

ಬೆಳಗು ಬಿಡುವಿಲ್ಲ ಬೈಗು ನಿದ್ರೆಯಿಲ್ಲ ।
ಪಡುವ ಹಿಂಸೆಗೆ ಕೊನೆಯಿಲ್ಲ ।
ಪಡುವ ಹಿಂಸೆಗೆ ಕೊನೆಯಿಲ್ಲ-ಹೀಗಿದ್ದು ।
ಭಂಗದ ಕೂಳಲ್ಲೋ ಶಿವರಾಯಾ ॥೧೧೭೬॥

* * *

ಹಡದವ್ವಗ್ಹೇಳಣ್ಣ ಕುಡು ನೀರು ದಕ್ಕsವು ।
ಮುಡಿ ಮಾಸಿ ಮೂರು ದಿನವಾಗಿ ।
ಮುಡಿ ಮಾಸಿ ಮೂರು ದಿನವಾಗಿ-ನನ್ನಣ್ಣ ।
ತಾಯವ್ವಗ್ಹೇಳೋ ಮರಿಬ್ಯಾಡ ॥೧೧೭೭॥

ಏಳಲ ಮಾಡಿದರ ತಾಳsದು ನನಜೀವ ।
ಬಾಳೀಲಿಗಿಂತ ಬಲು ಸುಖಿ ।
ಬಾಳೀಲಿಗಿಂತ ಬಲು ಸುಖಿ–ತಾಯ್ತಂದಿ ।
ಲ್ಯಾವಳ ಮಾಡಿ ಸಲುವ್ಯಾರ ॥೧೧೭೮॥

*   *   *

ಪಾಪೀ ಹೊಟ್ಟ್ಯಾಗ್ಹುಟ್ಟಿ ಪರದೇಶಿ ನಾನಾದಿ ।
ಪಂಚ ಪಾತಕನ ಕೈಹಿಡಿದೆ ।
ಪಂಚ ಪಾತಕನ ಕೈಹಿಡಿದೆ--ಶಿವರಾಯ ।
ರಾಕ್ಷಸೀ ಮನೆಗೆ ಸೊಸೆಯಾದೆ ॥೧೧೭೯॥

*   *   *

ಚಿಂತಾಕು ಇಡಲಿಲ್ಲ ಚಿಂತಿ ಬಿಟ್ಟಿರಲಿಲ್ಲ ।
ಎಂಥಲ್ಲಿ ಕೊಟ್ಟ ಹಡೆದವ್ವ ।
ಎಂಥಲ್ಲಿ ಕೊಟ್ಟ ಹಡೆದವ್ವ–ನಡುಮುsನಿ ।
ಜಂತಿ ಜರಥಂಗ ಜರದೇನ ॥೧೧೮೦॥

*   *   *

ಕರಿಯ ಕಂಬಳಿ ತಂದು ಹೊದಿಯಲಾರದ ಮೇಲೆ ।
ಅದನ್ಯಾಕ ತಂದ್ಯೋ ದರವೇಸಿ ।
ಅದನ್ಯಾಕ ತಂದ್ಯೋ ದರವೇಸಿ–ಕಂಡವರ್ಹೆಣ್ಣ ।
ಮದಿವ್ಯಾಗಿ ಗೋಳ ಹುಯ್ಕೊಂಡಿ ॥೧೧೮೧॥

*   *   *

ಜೋಳsವ ಬೀಸೂತ ಯಾರಿಗೆ ನೆನೆಯುsಲಿ ।
ನನ್ನ ತಂದೆ ತಾಯಿ ತವರನ್ನ ।
ನನ್ನ ತಂದೆ ತಾಯಿ ತವರನ್ನ–ನೆನೆದರ ।
ಅತ್ತಿ ಮನೆನ ಕಷ್ಟ ಪರಿಹಾರ ॥೧೧೮೨॥

*   *   *

ಆಕಳದಂಥ ಅತ್ತಿ ಗೋಕುಲದಂಥ ಮಾವ ।
ಶ್ರೀಕೃಷ್ಣನಂಥ ಪತಿರಾಯ ।
ಶ್ರೀಕೃಷ್ಣನಂಥ ಪತಿರಾಯ–ಇದ್ದsರ ।
ಸಾಕೇದ ತವರ ಮರತೇನ ॥೧೧೮೩॥

ಹಾಲ ಹರವಿಯು ಸುತ್ತ ಯಾಲಕ್ಕಿ ನಾತಾವ ।
ಯಾರುಂಡರವ್ವ ಹಗಲೂಟ ।
ಯಾರುಂಡರವ್ವ ಹಗಲೂಟ-ನನ ಮನಿಯು ।
ಮಾರಾಯರ ತಮ್ಮ ಮೈದೂನ ||೧೧೮೪||

* * *

ಅತ್ತೆ ಮಾಡುವ ಮಾಟ ಯಾರೀಗೆ ಹೇಳಽಲಿ ।
ನಾನಿದ್ರು ಕೂಡ ಭೂಮೀಲಿ ।
ನಾನಿದ್ರು ಕೂಡ ಭೂಮಿಲಿ-ನಾಯಿಯು ।
ಮರಿಯಂಥ ಜಲ್ಮ ನನಗೀಗ ||೧೧೮೫||

* * *

ಮೈದೂನ ಬೈದಽರ ಹೊಯ್ದ ಹೋಳಿಗಿಯಂದ ।
ಕೊಯ್ದ ಮಲ್ಲಿಗಿ ನನೆಯಂದ ।
ಕೊಯ್ದ ಮಲ್ಲಿಗಿ ನನೆಯಂದ-ಮತ್ತ್ಯರ್ದಾಗ ।
ಅತ್ತೀಗಿ ಹೆತ್ತಾಯಿ ಸರಿಯೆಂದ ||೧೧೮೬||

ತವರೂರಿಗ್ಹೋಗಽದೆ ಮೂರ್ಮಾಸ ಸಂದೀತು ।
ತವರೀನ ಚಿಂತೆ ಬಲುಚಿಂತೆ ।
ತವರೀನ ಚಿಂತೆ ಬಲುಚಿಂತೆ-ನನಗೀಗ ।
ತಾಯ್ತಂದೆ ಚಿಂತೆ ಬಲುಚಿಂತೆ ||೧೧೮೭||

* * *

ಚಿಂತೀಯಂದರ ನಾನು ಯಾರೆಪುರೀಗ್ಹೇಳಲಿ ।
ಅತ್ತಿ ಎಂದಽರ ಮುನಿಸ್ಯಾಳು ।
ಅತ್ತಿ ಎಂದಽರ ಮುನಿಸ್ಯಾಳು-ಸಿಡುಕ್ಯಾಳು ।
ಗಂಡ ಎಂದರೆ ಗಡುಸ್ಯಾನು ||೧೧೮೮||

* * *

ಗೋಕಾವಿ ಮುಂದೀನ ಕಾಕೀಯ ಗಿಡಗಳಿರಾ ।
ತಾಯಿ ಹಡದೌವ್ವನ ಬರಹೇಳಿ ।
ತಾಯಿ ಹಡದೌವ್ವನ ಬರಹೇಳಿ-ಅತ್ತಿಮನಿ ।
ಇಗ್ಗಽರ ಭಾಳ ಇರಲಾರೆ ||೧೧೮೯||

ನಮರಾಯ್ರು ಕೂಡ ಅತ್ತೀಯು ಕಡೆಗಾಗಿ ।
ನನಮೇಲೆ ತಪ್ಪು ಹೇಳ್ತಾರೆ ।
ನನಮೇಲೆ ತಪ್ಪು ಹೇಳ್ತಾರೆ–ಪತಿದೇವ್ರು ।
ಯಾರನ್ನ ನೆನೆಯಲಿ ಆವ್ಯಾಲೆ ||೧೧೯೦||

* * *

ಭಾವಯ್ಯ ಮುನಿದರ ಬಲಗಾಲು ಹಿಡಿದೇನ ।
ಭಾವಯ್ಯನ ಮಡದಿ ನೆಗೆಣ್ಣಿ ।
ಭಾವಯ್ಯನ ಮಡದಿ ನೆಗೆಣ್ಣಿ–ಮುನಿದರ ।
ಬಾರಕ್ಕನೆಂದು ಕರದೇನ ||೧೧೯೧||

* *

ಜೋಳ ಬೀಸುವ ಕಲ್ಲೆ ನೀನಾದ್ರು ದಯಮಾಡಿ ।
ನನಮ್ಯಾಲೆ ಕೋಪ ಮಾಡ್ಬೇಡ ।
ನನಮ್ಯಾಲೆ ಕೋಪ ಮಾಡ್ಬೇಡ–ನಂತಾಯಿ ।
ನೀನಾದ್ರೂ ನನ್ನ ಕಾಪಾಡು ||೧೧೯೨||

* * *

ನೆಗೇಣಿ ಮಗ ಬಂದು ನಗುತ ತೊಡೆಯಲಿ ಕೂತ ।
ಇಳಿಯೊ ಕಂದಯ್ಯ ತೆಳಿಯಾಕ ।
ಇಳಿಯೊ ಕಂದಯ್ಯ ತೆಳಿಯಾಕ–ನಿಮ್ಮವ್ವ ।
ಸನುಮನಿಕೆ ಇಲ್ಲ ನನಗೂಡ ||೧೧೯೩||

ಅತ್ತಿ ಬರುವಾ ಹೊತ್ತು ನೆತ್ತಿ ಕಾಧಾಂಗ ।
ಮಾವ ಬರುವ ಹೊತ್ತು ಮಾವಿನ್ಹಂಗ ।
ಮಾವ ಬರುವ ಹೊತ್ತು ಮಾವಿನ್ಹಂಗ–ನನಗೆ ।
ಮಾವ ಅಂದರಾ ಬಲುಪ್ರೀತಿ ||೧೧೯೪||

ಅರಸು ತೂಕದ ನಲ್ಲ ಗಳಿಸೂವ ಪ್ಯೆದೂನ ।
ನಡಿಸಿಕೊಳ್ಳುವತ್ತಿ ಸಿರಿಗಂಗಿ ।
ನಡಿಸಿಕೊಳ್ಳುವತ್ತಿ ಸಿರಿಗಂಗಿ–ಮನಿಯಾಗ ।
ಬದುಕು ಮಾಡುವದು ಅರಿದೇನ ||೧೧೯೫||

ಕನ್ನೇಯು ಬಡಿಬ್ಯಾಡ ಕೈಬಽಳಿ ಒಡೆದಾವು ।
ಸಣ್ಣಂಚಿನ್ವಾಲಿ ಮುರಿದಾವು ।
ಸಣ್ಣಂಚಿನ್ವಾಲಿ ಮುರಿದಾವು-ನನ ಮಗನ ।
ನನ್ನಾಣಿ ಮಡದಿ ಬಡಿಬ್ಯಾಡ ||೧೯೬||

* * *

ಊರ ಮ್ಯಾಗ್ಹಾಸಿ ಬೀಸೂವ ಬಿರುಗಾಳಿ ।
ತೀರಽವ ದುಃಖ ತೋಡುವಕ ।
ತೀರಽವ ದುಃಖ ತೋಡುದಕ-ಹಡದವ್ವ ।
ಮೊರಿ ನೋಡಾಕ ಬರಹೇಳ ||೧೯೭||

* * *

ಹಡೆದವ್ವ ನೀ ನನ್ನ ಹಡೆದೇನು ಸುಡಬೇಕ।
ನಡುಬಿಟ್ಟಲೊಬ್ಬ ಇದಿರಂಡಿ ।
ನಡು ಬಿಟ್ಟಲೊಬ್ಬ ಇದಿರಂಡಿ-ಸೆಟಿಗವ್ವ ।
ಮನಬಲ್ಲ ಬರಿಯು ಬರದಾಳ ||೧೯೮||

* * *

ನೆಗೆಣ್ಣಿ ಮಾತೀನ ಸೆಗಣಿಯು ದಂಟೀನ ।
ಗಾಳೀಗೆ ಬಂದ ರವದೀಯು ।
ಗಾಳೀಗೆ ಬಂದ ರವದೀಯು-ಮಾತೀಗೆ ।
ಮಾರಾಯ ಮನಸ ತೆಗದಾರ ||೧೯೯||

* * *

ಆದಾವ ನಮುಜೋಳ ತೀರಽವ ನಮುಹಾಡು ।
ಸಾಕ ಸಾವಿತ್ರಿ ಕೈಬೀಡ ।
ಸಾಕ ಸಾವಿತ್ರಿ ಕೈಬೀಡ-ನನ ಮನಿಯು
ಗ್ಯಾನದತ್ತೆವ್ವ ಬೈದಾಳ ||೨೦೦||

* * *

ಅಡಗೀಯ ಮನಿಯಾಗ ಅರವತ್ತು ಗಂಗಾಳ ।
ಬೆಳಗತೇನತ್ತಿ ಬೈಬ್ಯಾಡ ।
ಬೆಳಗತೇನತ್ತಿ ಬೈಬ್ಯಾಡ--ತವರವರು ।
ಸರ ಮುತ್ತು ಮಾಡಿಸಲುವ್ಯಾರ ||೨೦೧||

ಸರ ಮುತ್ತುಗಳನೊಯ್ದು ಸಾಲ ಬೂದಿಗೆ ಹಾಕ ।
ಹೊರಬಾರ ಹೆಂಡಿ ಹೆಡಗೀಯ ॥೧೨೦೨॥

* * *

ಹೆಂಡ್ತಿಡಗಿ ಹೊರಲಾಕ ಬಡವರ ಮಗಳೀನ ।
ಮುಂದಿನೂರಾಗ ತವರವರು ।
ಮುಂದಿನೂರಾಗ ತವರವರು-ಕೇಳಿದರ !
ಮುಂಜಾನೆ ತೊತ್ತು ಕಳುವ್ಯಾರ ॥೧೨೦೩॥



## ಸೋದರಿಯನ್ನು ಮದುವೆಗೆ ಕರೆಯಲು ಬಂದಾಗ

ತವರೂರ ಹಾದ್ಯಾಗ ಅಣ್ಣ ಬರುವುದ ಕಂಡೆ ।
ಹೆಗಲ ಮ್ಯಾಲೆ ಕಂಡೆ ಜವುಳೀಯ ।
ಹೆಗಲ ಮ್ಯಾಲೆ ಕಂಡೆ ಜವುಳೀಯ-ಹೊತುಗೊಂಡು ।
ಮುದ್ದು ಮುಖದ ಅಣ್ಣ ಬಂದಾನ ॥೧೨೦೪॥

* * *

ನೆನೆಯಕ್ಕಿ ನೆಲಗಡಲೆ ಗೊನೆಯ ಬಾಳೆಯಹಣ್ಣು ।
ನೆನೆದ್ಹಾಂಗ ಬಂದ ಹಿರಿಯಣ್ಣ ।
ನೆನೆದ್ಹಾಂಗ ಬಂದ ಹಿರಿಯಣ್ಣ-ಬಾಳೀಯ ।
ಸುಳಿಯ್ಹಾಂಗ ತೋಳತಿರುವೂತ ॥೧೨೦೫॥

ಬಂದ ಅಣ್ಣಯ್ಯಾಗ ಗಿಂಡೀಲಿ ಅಗ್ಗಣಿಕೊಟ್ಟು ।
ಕುಳ್ಳಿರಕೆ ಹಾಸಿ ಮಣೆ ಹಾಕಿ ।
ಕುಳ್ಳಿರಕೆ ಹಾಸಿ ಮಣೆ ಹಾಕಿ-ಕೇಳ್ಯಾಳ ।
ಎಲ್ಲಾ ಚೆಂದಹಾರೇನು ತವರಾಗ ॥೧೨೦೬॥

ಎಲ್ಲಾರು ಚಂದಹಾರವ್ವ ಮಲ್ಲೀಗಿ ತುರುಬಿನ ತಂಗಿ ।
ನಾಲ್ವಾರಿಗಿಂತ ಕಿರಿಯ ತಮ್ಮನ ।
ನಾಲ್ವಾರಿಗಿಂತ ಕಿರಿಯ ತಮ್ಮನ-ಮದುವೆ ।
ನೀ ಬೇಗ ಬರಬೇಕು ಮದುವೇಗೆ ॥೧೨೦೭॥

* * *

ಹತ್ತೀಯ ಮುರಿಬೇಕ ಹರಳಿನ್ನು ಬಡಿಬೇಕು ।
ನಾನ್ಹ್ಯಾಂಗ ಬರಲಿ ತವರೀಗೆ ।
ನಾನ್ಹ್ಯಾಂಗ ಬರಲಿ ತವರೀಗೆ-ಅಣ್ಣಯ್ಯ ।
ಮತ್ಹ್ಯಾಂಗ ಬರಲಿ ಮದುವೀಗೆ ॥೧೨೦೮॥

* * *

ಹತ್ತೀಯ ಅರಿಯಾಕ ಹರಳನ್ನು ಬಡಿಯಾಕ ।
ಆಳಾ ಕಳುಹೇನು ಬಾರವ್ವ ।
ಆಳಾ ಕಳುಹೇನು ಬಾರವ್ವ-ನನತಂಗಿ ।
ನೀ ಬರದೆ ನಾನು ಹೋಗಲಾರೆ ॥೧೨೦೯॥

* * *

ಆಲಾದ ಮರದಡಿ ಹೊರಿ ಮೇಯ್ಸೋ ಮೈದೂನಾ ।
ಹೋಗಿ ಬರುವೇನು ತವರೀಗೆ ।
ಹೋಗಿ ಬರುವೇನು ತವರೀಗೆ-ಮೈದೂನಾ ।
ಹೋಗಿ ಬರುವೇನು ಮದುವೆಗೆ ॥೧೨೧೦॥

* * *

ತೌರೊಳ್ಳೇದೆಂದು ತವರಲ್ಲಿ ಇರಬ್ಯಾಡ ।
ತವರೀಗೆ ತವರು ಪ್ರತಿ ತವರು ।
ತವರೀಗೆ ತವರು ಪ್ರತಿ ತವರು-ನಾವೆಲ್ಲ ।
ಬೇಗ ಹಿಂದಿರಿಗು ಅತ್ತಿಗೆಮ್ಮ ॥೧೨೧೧॥

* * *

ಪಟ್ಟೆ ಮಂಚದ ಮ್ಯಾಲ ಮಲಗಿರುವ ರಾಯಾರೇ ।
ಹೋಗಿ ಬರುವೇನು ತವರಿಗೆ ।
ಹೋಗಿ ಬರುವೇನು ತವರಿಗೆ-ನನರಾಯ ।
ಹೋಗಿ ಬರುವೇನು ಮದುವೇಗೆ ॥೧೨೧೨॥

ಚಿನ್ನsದ ಉಡಿದಾರ ಚಿನ್ನsದ ಶಿವದಾರ ।
ಬಾಲಯ್ಗ ಚಿನ್ನದ ಉಡಿಗೆಜ್ಜಿ ।
ಬಾಲಯ್ಗ ಚಿನ್ನsದ ಉಡಿಗೆಜ್ಜಿ-ಎಲೆ ನಾರಿ ।
ಕದ್ದು ಕೊಂಡಾರು ನಿನ್ನ ತವರವರು ॥೧೨೧೩॥

* * *

ಆಯುಷೊಂತರಾಗಿ ಅಷ್ಟು ಬಲ್ಲಿದರಾಗಿ ।
ದೆಸೆವಂತರಾಗಿ ಬದುಕ್ಯಾರ ।
ದೆಸೆವಂತರಾಗಿ ಬದುಕ್ಯಾರ-ನನರಾಯ ।
ಬಾಲನೆತ್ತಿಕೊಂಡು ಹೋಗ್ತೀನಿ ॥೧೨೧೪॥

*

ತವರಿಗ್ಹೋಗುವ ನಾರಿ ಹಿಂದಿರುಗೆಂದು ಬರುವೆ ।
ತಿಂಗಳ ವ್ಯಾಲ ಹದಿನೈದು ।
ತಿಂಗಳ ವ್ಯಾಲ ಹದಿನೈದು-ದಿವಸಕ್ಕ ।
ತಮ್ಮsನ ಕರಕೊಂಡು ಬರತೇನಿ ॥೧೨೧೫॥

* * *

ಹತ್ತೀ ಮರದ ಕೆಳಗ ಕುಳಿತಿದ್ದs ಅತ್ತೀಯ ।
ಬಳಿಹೋಗಿ ಸೊಸಿ ಕೇಳತಾಳ ।
ಬಳಿಹೋಗಿ ಸೊಸಿ ಕೇಳತಾಳ-ಅತ್ತೆವ್ವ ।
ಹೋಗಿ ಬರುವೇನು ತವರೀಗಿ ॥೧೨೧೬॥

* * *

ಹೋಗಿ ಬಾರೇ ನೀನು ಹೊನ್ನೋಲೆ ಕಿವಿಯುವಳೆ ।
ಕೆನ್ನೇಲಿ ಸೂರ್ಯ ಹೊಳೆಯುವಳೆ ।
ಕೆನ್ನೇಲಿ ಸೂರ್ಯ ಹೊಳೆಯುವಳೆ-ಸೊಸೆ ಮುದ್ದಿ ।
ತವಕೊಳ್ಳೇದೆಂದು ಇರಬ್ಯಾಡ ॥೧೨೧೭॥

* * *

ಅಂದಣವನೇರಿ ಬಂದsಳಣ್ಣನ ಮನಿಗೆ ।
ನಿಂದೀರು ತಂಗಿ ನೆರಳಲ್ಲಿ ।
ನಿಂದೀರು ತಂಗಿ ನೆರಳಲ್ಲಿ-ಮನೆಗ್ಹೋಗಿ ।
ರಂಭೆಗೆ ಹೇಳಿ ಬರತೇನಿ ॥೧೨೧೮॥

ಅಂದಕ ಅತ್ತಿಯು ಮಗಳೆ ಚಂದ್ಕ ಮಾವನ ಮಗಳೇ ।
ಅತ್ತsಲ ನಾಡಿಂದ ನನತಂಗಿ ।
ಅತ್ತsಲ ನಾಡಿಂದ ನನತಂಗಿ–ಬಂದಾಳ ।
ನೀನೊಂದು ಮಾತು ಕರಿಹೋಗ ॥೧೨೧೯॥

* * *

ಓ ನನ್ನ ರನ್ನsವೆ ಓ ನನ್ನ ಚಿನ್ನsವೆ ।
ಓ ನನ್ನ ಕೊರಳ ಪದಕsವೆ ।
ಓ ನನ್ನ ಕೊರಳ ಪದಕsವೆ–ಪಟ್ಟದರಾಣಿ ।
ನಾದುನಿಯ ಒಳಗೆ ಕರಿಹೋಗೆ ॥೧೨೨೦॥

* * *

ಅತ್ತೆಯು ಮಗಳೆ ಮುತ್ತಿನ ಚಂಡೇ ।
ದೂರsದ ನಾಡಿಂದ ತಂಗೆವ್ವ ।
ದೂರsದ ನಾಡಿಂದ ತಂಗೆವ್ವ–ಬಂದಾಳ ।
ನೀನೊಂದು ಮಾತು ಕರಿ ಹೋಗ ॥೧೨೨೧॥

* * *

ಎಳೆ ಬಾಳೆ ಸುಳಿ ಬಾಳೆ ಅಪರಂಜಿ ಚಿನ್ನsವೇ ।
ಮೂಡsಲ ನಾಡಿಂದ ತಂಗೆವ್ವ ।
ಮೂಡsಲ ನಾಡಿಂದ ತಂಗೆವ್ವ–ಬಂದಾಳ ।
ನೀನೊಂದು ಮಾತು ಕರಿ ಹೋಗ ॥೧೨೨೨॥

* * *

ಪ್ರೀತೀಲಿ ಕರಿಯಾಕ ಅಕ್ಕಲ್ಲ ತಂಗ್ಯಲ್ಲ ।
ಕುಟ್ಟೇದ ಅಕ್ಕಿ ಮನೇಲಿಲ್ಲ ।
ಕುಟ್ಟೇದ ಅಕ್ಕಿ ಮನೇಲಿಲ್ಲ–ಭತ್ತಿಲ್ಲ ।
ನೀವ್ ತಂದ ಸೌದೆ ಒಳಗಿಲ್ಲ ॥೧೨೨೩॥

* * *

ಹಿಂದೀನ ಕಾಲsದಿ ಅಂದಿದ್ದು ।
ಭಂಗ ಪಡಿಸಿದ್ದು ಬೈದಿದ್ದು ।
ಭಂಗ ಪಡಿಸಿದ್ದು ಬೈದಿದ್ದು–ನಿಮತಂಗಿ ।
ಹಂಗೇನು ಆಚೆ ಇರಹೇಳಿ ॥೧೨೨೪॥

ಅಣ್ಣನ ಮನೆಯೊಳಗೆ ಅಳುಕಿ ಹೋದಳು ತಂಗಿ ।
ತಾಯೀಯ ಸಾವ ನೆನೆ ನೆನೆದು ।
ತಾಯೀಯ ಸಾವ ನೆನೆ ನೆನೆದು–ದುಃಖಿಸುತ ।
ಬಂದಾಳ ಮನಿಯ ಒಳಗಡಿಗೆ ॥೧೨೫॥

* * *

ಅಡುಗೀಯ ಮನಿಯಾಗ ಕಂಡಾಳತ್ತಿಗೇನ ।
ಪ್ರೀತೀಯ ಸೂಸಿ ಹೊರಸೂಸಿ ।
ಪ್ರೀತೀಯ ಸೂಸಿ ಹೊರಸೂಸಿ–ಅತ್ತೀಗೆ ।
ಮನಿಯಾಗ ಎಲ್ಲಾ ಕ್ಷೇಮವೇ ॥೧೨೬॥

* * *

ನಾದೂನಿ ಹೇಳಿದ ಮಾತು ಕೇಳಿದಾಳತ್ತೀಗೆ ।
ಮನದಲ್ಲೆ ನೆಟಗಿ ಮುರಿಯೂತ ।
ಮನದಲ್ಲೆ ನೆಟಗಿ ಮುರಿಯೂತ–ನೀ ಬರಲು ।
ನಮಗಿನ್ನೆಲ್ಲಿ ಕ್ಷೇಮವು ॥೧೨೭॥

* * *

ಬೇಸೀಗೆ ಬಿಸಿಲಲ್ಲಿ ಬಸವಳಿದು ನಾ ಬಂದೆ ।
ಕುಡಿಯಲು ತಂದು ನೀರನ್ನು ।
ಕುಡಿಯಲು ತಂದು ನೀರನ್ನು–ಕೊಡುಅತ್ಗೆ ।
ಬಾಯಾರಿ ಬಹಳ ಬಳಲೇನಿ ॥೧೨೮॥

ಇಂದು ನೀರೂ ಇಲ್ಲ ತಂದ ನೀರು ಇಲ್ಲ ।
ಹಿಂದಕ ಹೊರಡ ಎಲೆ ನಾದೂನಿ ।
ಹಿಂದಕ ಹೊರಡ ಎಲೆ ನಾದೂನಿ–ನಿಮ್ಮಣ್ಣ ।
ನೀರೀಗೆ ತೊತ್ತ ಇಟ್ಟಿಲ್ಲ ॥೧೨೯॥

ನಾವು ಬೇರ್‍ಯೋರಲ್ಲ ಒಂದೇ ಮನೆಯವರು
ಹೊಟ್ಟೆ ಬಹಳ ಹಸಿದೈತಿ
ಹೊಟ್ಟೆ ಬಹಳ ಹಸಿದೈತಿ–ಅತಿಗೆಮ್ಮ ।
ಅನ್ನವ ಮಾಡಿ ಬಡಿಸೇಳೆ ॥೧೩೦॥

ಅನ್ನsವ ಮಾಡಲು ಒಲೆಯು ಇಲ್ಲವೆ ಇಲ್ಲಿ ।
ನಿಮ್ಮಣ್ಣ ಮನೆಯ ಬಿಡುವಾಗ ।
ನಿಮ್ಮಣ್ಣ ಮನೆಯ ಬಿಡುವಾಗ-ಒಲೆಯನ್ನು ।
ಕಿತ್ಕೊತ್ತು ಕೊಂಡು ಹೋಗ್ಯಾರ ॥೧೨೩೧॥

* * *

ಒಲೆಯು ಇಲ್ಲದ ಮ್ಯಾಲ ಅಡಿಗೆ ಮಾಡುವದೆಂತು ।
ನೆರೆಮನೆಗೆ ಪಡಿಯ ಕೊಡುವೇನು ।
ನೆರೆ ಮನೆಗೆ ಪಡಿಯ ಕೊಡುವೇನು-ನಾದೂನಿ ।
ಬಂದ ಹಾದೀಲಿ ಹೊರಡಿನ್ನು ॥೧೨೩೨॥

* * *

ನಿನ್ನ್ಯಾರು ಕರೆದಾರ ಕೆಂಪು ಸೀರೆಯ ಚಲುವೆ ।
ಅಣ್ಣನ ಮನೆಯ ಕಣಜsವು ।
ಅಣ್ಣನ ಮನೆಯ ಕಣಜsವು-ಅರಮನೆಯ ।
ಬೊಕ್ಕಸವೆಂದು ತಿಳಿದೇನು ॥೧೨೩೩॥

* * *

ಅತ್ತಿಗಿ ನುಡಿಕೇಳಿ ದುಃಖವುಕ್ಕುತ ಬಂತು ।
ಕಣ್ಣಲ್ಲಿ ನೀರು ಹರಿಯೀತು ।
ಕಣ್ಣಲ್ಲಿ ನೀರು ಹರಿಯೀತು-ನಾದಿನಿಗೆ ।
ಅತ್ತಿಗೆಯ ಮಾತು ಶೂಲಾಯ್ತು ॥೧೨೩೪॥

* * *

ಎತ್ತನ್ನು ತರಿಸಣ್ಣ ಪಟ್ಟೀಯ ಬಿಗಿಸಣ್ಣ ।
ಥಟ್ಟsನೆ ನನ್ನ ಕಳುಹಣ್ಣ ।
ಥಟ್ಟsನೆ ನನ್ನ ಕಳುಹಣ್ಣ-ಕಣ್ಣೀರು ।
ಸ್ವಾತಿ ಮಳೆಯಾಗಿ ಸುರಿದಾವು ॥೧೨೩೫॥

* * *

ಪಾಪಿ ತವರೀಗೆ ಯಾಕ್ ಬಂದೆ ತಂಗೆವ್ವ ।
ತಾಟಗಿತ್ತಿ ಹಾಳ ಮನಿಯಾಗ ।
ತಾಟಗಿತ್ತಿ ಹಾಳ ಮನಿಯಾಗ-ತಂಗೆವ್ವ ।
ಕ್ವಾಟೀಯ ನೋಡಿ ತಿರುಗವ್ವ ॥೧೨೩೬॥

ಕ್ಯಾಟೀಯ ನೋಡೀದೆ ಕೊತ್ತಳ ನೋಡೀದೆ ।
ನೋಡೀದೆ ಅಣ್ಣನ ಭುಜಬಲವ ।
ನೋಡೀದೆ ಅಣ್ಣನ ಭುಜಬಲವ--ಅಣ್ಣಯ್ಯ ।
ಮಡದಿಗಂಜುವನೆ ಸುಖಿ ಬಾಳೋ ||೧೨೩೭||

* * *

ಯಾಕಳುವೆ ನನ್ನವ್ವ ಬೇಕಾದ್ದು ನಿನಗೀದ ।
ಮೂಗೂರಿಗ್ಹೋಗಿ ಕಳುಹೇನು ।
ಮೂಗೂರಿಗ್ಹೋಗಿ ಕಳುಹೇನು-ತಂಗೆವ್ವ ।
ಹೋಗಿ ಬಾ ನಿನ್ನೂರೀಗಿ ||೧೨೩೮||

* * *

ಕೈತುಂಬಾ ಬಳೆಯಿದೆ ಕಟ್ಟೀದ ಬುತ್ತೀದೆ ।
ಬೀರೂರ್ನ ಸಂತೆ ನೆರವೀದೆ ।
ಬೀರೂರ್ನ ಸಂತೆ ನೆರವೀದೆ–ಅಣ್ಣಯ್ಯ ।
ಹೋಗಿ ಬರತೇನಿ ಊರೀಗಿ ||೧೨೩೯||

* * *

ಉಂಡಬಂದೆ ಊರಿಂದ ಮಿಂದು ಬಂದೆ ಗಂಗಿಂದ ।
ಹುಬ್ಬಳ್ಳಿ ಪೇಟೆ ಬೀದೀಯ ।
ಹುಬ್ಬಳ್ಳಿ ಪೇಟೆ ಬೀದೀಯ–ಬಿಳಿ ಎಲೆಯ ।
ಮೆದ್ದು ಬಂದೀನಿ ಮನೆಯಿಂದ ||೧೨೪೦||

ತಾಯವ್ವ ಹಾಳಂತ ಏಳುಗಾವುದ ಬಂದೆ ।
ತಾಯವ್ವ ಇಲ್ಲ ಸೊಸೆಹಾಳ ।
ತಾಯವ್ವ ಇಲ್ಲ ಸೊಸೆಹಾಳ--ಅದಕಂಡು ।
ಹಾವು ತಿರುಗ್ಹಾಂಗ ತಿರುಗೀದೆ ||೧೨೪೧||

ಹೊರ ಬಾಗಿಲಿಗೆ ಬಂದು ನಿಂತಾಳವಳು ।
ತವರೀನ ಮಮತೆ ತಡೆಯೀತು ।
ತವರೀನ ಮಮತೆ ತಡೆಯೀತು–ಹೆಣ್ಣೀಗೆ ।
ತವರಿಗಿಂತ ಹಿರಿದು ಇರುವೂದೆ ||೧೨೪೨||

ಹೋಗ್ತೀನಿ ಹೊಸ್ತೀಲೆ ಹೋಗ್ತೀನಿ ಬಾಗೀಲೆ ।
ಹೋಗ್ತೀನಿ ಹೊನ್ನ ನಡುಮನೆಯ ।
ಹೋಗ್ತೀನಿ ಹೊನ್ನ ನಡುಮನೆಯ-ತಾಯಿಲ್ದ ।
ತವರೀಗಿ ನಾವು ಬರಬಾರ್ದು ||೧೨೪೩||

* * *

ತಾಯಿಲ್ದ ತವರೀಗಿ ಹೋಗವರು ಥಡ್ಡಽರು ।
ನೀರಿಲ್ದ ಕೆರಿಗೆ ಕರುಹೋಗಿ ।
ನೀರಿಲ್ದ ಕೆರಿಗೆ ಕರುಹೋಗಿ-ಅಳುವಂತೆ ।
ತಾಯಿಲ್ದ ತವರಲ್ಲಿ ಹೆಣ್ಣಗೋಳು ||೧೨೪೪||

* * *

ತಾಯಿ ಇಲ್ಲದ ಮ್ಯಾಲ ಇರಬಾರದೀ ಜನ್ಮ ।
ಹೋಗಬೇಕು ಹೊಳೆಯ ಕರೆಗಾಗಿ ।
ಹೋಗಬೇಕು ಹೊಳೆಯ ಕರೆಗಾಗಿ-ತಾಯವ್ವ ।
ಬೀಳ್ಬೇಕು ಗಂಗೇಯ ಹೆಸರ್ಹೇಳಿ ||೧೨೪೫||

* * *

ಹಡೆದವ್ವ ಇದ್ದಽರ ಉಡಲಾಗಕ್ಕೀ ಹಾಕಿ ।
ಹರದಾರಿ ತನಕ ಬರತಿದ್ಲು ।
ಹರದಾರಿ ತನಕ ಬರತಿದ್ಲು-ಅತ್ತೀಗಿ ।
ಬಾಗೀಲ ಬಿಟ್ಟು ಇಳಿಯುಽಳು ||೧೨೪೬||

* * *

ಹೆತ್ತವ್ವ ಇದ್ದಽರ ನೆತ್ತಿಗೆಣ್ಣಿ ಒತ್ತ್ಯಾಳು ।
ಮತ್ತಷ್ಟು ದೂರ ಕಳುಹ್ಯಾಳು ।
ಮತ್ತಷ್ಟು ದೂರ ಕಳುಹ್ಯಾಳು-ಅತ್ತೀಗಿ ।
ಹಟ್ಟೀ ಕಲ್ಬಿಟ್ಟು ಇಳಿಯುಽಳು ||೧೨೪೭||

* * *

ಅತ್ತಿಗೆ ಬಸುರಾಗ್ಲಿ ಹತ್ತೆಮ್ಮಿ ಕರೆಯುಽಲಿ ।
ಅತ್ತೆಮ್ಮ ಎಂದು ಕೂಗ್ಲಿ ನಿನಮಕ್ಳು ।
ಅತ್ತೆಮ್ಮ ಎಂದು ಕೂಗ್ಲಿ ನಿನಮಕ್ಳು-ಅಣ್ಣಯ್ಯ ।
ಹೆಚ್ಚು ಸುಖಿಯಾಗಿ ನೀ ಬಾಳೋ ||೧೨೪೮||

ಹೋಗೆಂದ ಮಾತೀಗೆ ಹೊರಟೀಯ ತಂಗೆವ್ವ ।
ಮೂರು ಕಾಸೀನ ಮಡದೀಯ ।
ಮೂರು ಕಾಸೀನ ಮಡದೀಯ-ಮಾತೀಗೆ ।
ಹಾಲಿನಂಥ ತವರ ತೊರೀತೀಯಾ ||೧೨೪೯||

* * *

ಹುಟ್ಟೀದ ಮನೆಯನ್ನು ನಾಹೆಂಗ ತೊರದೇನು ।
ನಡುಮನೆ ಜ್ಯೋತಿ ಇರುತನಕ ।
ನಡುಮನೆ ಜ್ಯೋತಿ ಇರುತನಕ-ಅಣ್ಣಯ್ಯ ।
ಅಲ್ಲಿಗಿಲ್ಲಿಗೆ ನಡೆದಾಡು ||೧೨೫೦||

* * *

ಹೆಣ್ಣೀನ ಮಾತು ತಿಳಿದಾವ್ರೋ ಅಣ್ಣಯ್ಯ ।
ನನ್ನಾಣೆ ನೀನು ಹೊಡಿಬ್ಯಾಡ ।
ನನ್ನಾಣೆ ನೀನು ಹೊಡಿಬ್ಯಾಡ -ಅಣ್ಣಯ್ಯ ।
ಹೆಚ್ಚ್ಕೊಳಲಾಗಿ ಬದುಕಪ್ಪ ||೧೨೫೧||

* * *

ಕಟ್ಟೀದ ಬುತ್ತಿಯಿದೆ ಬೀರೂರ ಸಂತೆಯಿದೆ ।
ಹೋಗೋ ಹಾದೀಗೆ ಶಿವನವನೆ ।
ಹೋಗೋ ಹಾದೀಗೆ ಶಿವನವನೆ--ಎನ್ನುತ್ತ ।
ಹೋಗಿ ತಲುಪ್ಯಾಳ ತನ್ನ ಮನೀಗೆ ||೧೨೫೨||

* * *

ಇದು ಏನು ಅತ್ತೀಗೆ ಹೋದಂತೆ ಬಂದಂತೆ ।
ನಿನ್ನ ಮಾಯವು ತಿಳಿಯ್ಯದು ।
ನಿನ್ನ ಮಾಯವು ತಿಳಿಯುದು-ಅತ್ತೀಗೆ ।
ಹೋದ ಕಾರ್ಯವು ಗೆಲಲಿಲ್ವೇ ||೧೨೫೩||

* * *

ನಮ್ಮ ಶಕುನಾವ ನೀವೇನು ಬಲ್ಲೀರಿ ।
ದಾರ್‍ಯಾಗ ಏಳ್ಹೆಡಿ ಎಳೆನಾಗರ ।
ದಾರ್‍ಯಾಗ ಏಳ್ಹೆಡಿ ಎಳೆನಾಗರ-ಕಂಡು ।
ಹಿಂದಿರುಗಿದೆ ನನ್ನರ ಮನೆಗೆ ||೧೨೫೪||

ಯಾಕೆಲೆ ಹೆಣ್ಣೆ ಇಷ್ಟು ಬೇಗನೆ ಬಂದೆ ।
ಕುಂದಿ ಬಂದೈತಿ ಮುಖ ಕಮಲ ।
ಕುಂದಿ ಬಂದೈತಿ ಮುಖ ಕಮಲ-ಎಲೆನಾರಿ ।
ಇಂದೇಕೆ ಎಂದೀನ ಕಳೆಯಿಲ್ಲ ||೧೨೫೫||

* * *

ಹಾದೀಲಿ ಹುಲ್ಲೆ ಕಂಡೆ ಪೊದೆಯಲ್ಲಿ ಸಾರಂಗ ಕಂಡೆ ।
ಏಳ್ಹೆಡೆ ಸರ್ಪ ಎದುರೀಗೆ ।
ಏಳ್ಹೆಡೆ ಸರ್ಪ ಎದುರೀಗೆ–ಬಂದೀತು ।
ನಾನ್ಹೋಗಲಿಲ್ಲ ತವರೀಗೆ ||೧೨೫೬||

* * *

ಯಾಕೆ ಸೊಸೆ ಮುದ್ದೆ ಇಷ್ಟು ಬೇಗನೆ ಬಂದೆ ।
ಹೋದ ಕಾರ್ಯವು ಗೆಲಲಿಲ್ವೆ ।
ಹೋದ ಕಾರ್ಯವು ಗೆಲಲಿಲ್ವೆ--ನನ ಸೊಸಿಯೆ ।
ಮನಸೇನು ಹೇಳೆ ನನಕೂಡ ||೧೨೫೭||

* * *

ಹೋಗುತ ಹುಲಿಕಂಡೆ ಬರುತ ಸಾರಂಗ ಕಂಡೆ ।
ತವರೂರ ಹಾದ್ಯಾಗ ಏಳ್ಹಾವ ।
ತವರೂರ ಹಾದ್ಯಾಗ ಏಳ್ಹಾವ-ಸರ್ಪನ ಕಂಡು ।
ಹಿಂದಿರುಗಿ ಬಂದೆ ಅತ್ತೆವ್ವ ||೧೨೫೮||

* * *

ತಂಗಿ ಹೋದ ಮರುದಿನ ಬಂದೀತು ಛಳಿಜ್ವರ ।
ಮನೆಯ ಮಡದೀಗಿ ತಲೆ ಶೂಲಿ ।
ಮನೆಯ ಮಡದೀಗಿ ತಲೆಶೂಲಿ-ಆದರೆ ।
ದೇವರ ಕೇಳಲು ಹೊರಟಾನೆ ||೧೨೫೯||

* * *

ದೇವ್ರಲ್ಲ ದಿಂಡ್ರಲ್ಲ ದೆವ್ವಲ್ಲ ಭೂತಲ್ಲ ।
ಮನೆಯ ಹೆಣ್ಮಗಳ ಉಸುರಣ್ಣ ।
ಮನೆಯ ಹೆಣ್ಮಗಳ ಉಸುರಣ್ಣ--ಅದಕೇಳಿ ।
ತಂಗೀಯ ಕರಿಯಾಕ ಹೊರಟಾನ ||೧೨೬೦||

ಮದುವೀ ನನ ತಂಗಿ ಕನ್ನಡಿ ಕಳಸ ।
ನೀನು ಬರಬೇಕು ಮದುವೀಗೆ ।
ನೀನು ಬರಬೇಕು ಮದುವೀಗೆ–ತಂಗೆವ್ವ ।
ನೀ ಬರದೆ ನಾನು ಹೋಗ್ಲಾರೆ ॥೧೨೬೧॥

* * *

ಅಪ್ಪ ಕಟ್ಟಿದ ಮನೆ ಅಮ್ಮ ಮಾಡಿದ ಬದುಕು ।
ಬರಬೇಕು ತಂಗಿ ತವರೀಗಿ ।
ಬರಬೇಕು ತಂಗಿ ತವರೀಗಿ--ನೀಬರದೆ ।
ನಾ ಹೋಗಲಾರೆ ತಂಗೆವ್ವ ॥೧೨೬೨॥

* * *

ಒಪ್ಪದಿ ಕರೆದೊಯ್ವ ಅಪ್ಪನಿಲ್ಲದ ಮ್ಯಾಲ ।
ನಾನ್ಹ್ಯಾಂಗ ಬರಲಿ ತವರೀಗೆ ।
ನಾನ್ಹ್ಯಾಂಗ ಬರಲಿ ತವರೀಗೆ–ನನ ಅಣ್ಣ ।
ಮತ್ಹ್ಯಾಂಗ ಬರಲಿ ಮದುವೀಗೆ ॥೧೨೬೩॥

* * *

ಪ್ರೀತಿಲೀ ಕರಿಯುವ ತಾಯಿ ಇಲ್ಲದಮ್ಯಾಲ ।
ಹ್ಯಾಂಗ ಬರಲೆಣ್ಣ ತವರೀಗೆ ।
ಹ್ಯಾಂಗ ಬರಲೆಣ್ಣ ತವರೀಗೆ-ನನ ಅಣ್ಣ ।
ಮತ್ಹ್ಯಾಂಗ ಬರಲಿ ಮದುವೀಗೆ ॥೧೨೬೪॥

* * *

ಬಂದರ ಬಂದೇನು ಹೊಸ್ತೀಲ ದಾಟೇನು ।
ಅಂಗಳದಾಗ ನಾನು ನಿಂತೇನು ।
ಅಂಗಳದಾಗ ನಾನು ನಿಂತೇನು-ಅಣ್ಣಯ್ಯ ।
ತಮ್ಮನಿಗೆ ಧಾರೆ ಎರೆದೇನು ॥೧೨೬೫॥



## ಹಾಸ್ಯ

ಕುಂಬಾರನಿಗ್ಯಾಕೋ ಗೊಂಬಿ ಮಾಟದ ಹೆಣ್ಣು
ತುಂಬೆಂದ ಮಣ್ಣ ತುಳಿಯೆಂದ ।
ತುಂಬೆಂದ ಮಣ್ಣ ತುಳಿಯೆಂದ--ಮನೆ ಮನೆಗೆ
ಹೊತ್ತು ಮಾರೆಂದ ಹೊಸ ಗಡಿಗಿ ॥೧೨೬॥

* * *

ವಾಲೀಕಾರ ನಿನಗ ಒಳ್ಳೆ ಹೆಂಡತಿ ಯಾಕೊ ।
ನೀಹೋದಿ ರಾಜ್ಯ ತಿರುಗೂತ ।
ನೀಹೋದಿ ರಾಜ್ಯ ತಿರುಗೂತ-ನಿನನಾರಿ ।
ಬಾಡ್ಯಾಳೋ ಬಾಳಿ ಸುಳಿಯಾಗಿ ॥೧೨೭॥

* * *

ತಿಂದೋಡಿ ನಿನಗಂಡ ತಿಂದೇನು ಮಾಡೆಂದ ।
ತಿಂದೇಳು ಮನಿಯ ತಿರುಗೆಂದಾ ।
ತಿಂದೇಳು ಮನಿಯ ತಿರುಗೆಂದಾ-ಉಟ್‌ಸೀರಿ ।
ಉಂಗಟಕ ಹಾಕಿ ಹರಿಯಂದಾ ॥೧೨೮॥

* * *

ಗಂಡನ್ನ ನೋಡೀರಿ ಗುಂಡ್ಹೊಟ್ಟಿ ಮರುವನ್ನ ।
ಉಂಡೇಳು ಮನೆಯ ತಿರುಗೂವ ।
ಉಂಡೇಳು ಮನೆಯ ತಿರುಗೂವ-ಗಂಡನ್ನ ।
ಕೊಂಡ್ಹೋದ್ರು ನಿನ್ನೆ ಬರದಲ್ಲಿ ॥೧೨೯॥

* * *

ಕೂಸು ಕುಂಚಿಗೆ ತಿಂತು ಹಾಸೀಗೆ ನೆಲತಿಂತು ।
ಭಾವಯ್ನ ಗಡ್ಡ ಇಲಿ ತಿಂತು ।
ಭಾವಯ್ನ ಗಡ್ಡ ಇಲಿ ತಿಂತು-ಮಿಕ್ಕಿದ್ದು ।
ದೀವಳಿಗಿ ಮುಂದ ಚಿಗಿತಾವು ॥೧೩೦॥

ಅಕ್ಕಽನ ಗಂಡ ಕುಕ್ಕೀ ಕೊರತು ಭಾವಯ್ಯ |
ಕೊಕ್ಕಽರೇ ಮೀಶೆ ಕೊನೆ ಮೀಶೆ |
ಕೊಕ್ಕಽರೇ ಮೀಶೆ ಕೊನೆ ಮೀಶೆ-ಭಾವಯ್ನ |
ಕೊಚ್ಚಿ ಕೊಂಡೋಗೋ ಮಳೆದೇವ ||೧೨೭೧||

* * *

ಹಟ್ಟೀಗೆ ಕುಂಬಂತು ಕುರಿಗಳಿಗೆ ಜ್ವರ ಬಂತು |
ಒಲೆ ಮ್ಯಾಗ್ಳ ನೀರು ಉಗಿ ಬಂತು |
ಒಲೆ ಮ್ಯಾಗ್ಳ ನೀರು ಉಗಿ ಬಂತು-ಭಾವಯ್ನ |
ಗುಂಡ್ಹೊಟ್ಟಿ ಕಂಡು ನಗು ಬಂತು ||೧೨೭೨||

* * *

ಕೋಳೀಯ ಕೂಗೀತು ಏಳು ಅಂಬಿಗರಣ್ಣ |
ಮೀನು ನುಂಗೀತು ಮೊಸಳೇಯ |
ಮೀನು ನುಂಗೀತು ಮೊಸಳೇಯ-ಆಚೇ ಕೇರಿ |
ರಾಣಿ ನುಂಗಿದಳು ಚಲುವನ್ನ ||೧೨೭೩||

* * *

ಗಂಡ ಸತ್ತಽ ಸುದ್ದಿ ತೊಂಡೆಬಾವಲಿ ಕೇಳಿ |
ಕಳ್ಳ ಪುರಗಂಟೆ ಅಳತ್ಹೋದೆ |
ಕಳ್ಳ ಪುರಗಂಟೆ ಅಳತ್ಹೋದೆ-ಮುದ್ದಳ್ಳಿ |
ಹೇರವನ ಕಂಡು ನಗತ್ಹೋದೆ ||೧೨೭೪||

* * *

ಮುದುಕೀಗೆ ಮುದುಕನಿಗೆ ಎಲ್ಲೆಲ್ಲಿ ಮಾತಾಯ್ತು |
ಮುತ್ತುಗದ ಮರದ ಬುಡದಲ್ಲಿ |
ಮುತ್ತುಗದ ಮರದ ಬುಡದಲ್ಲಿ-ಮುದುಕಯ್ಯ |
ಮುದುಕೀಗೆ ಮುತ್ತ ಕೊಡತಿದ್ದಾ ||೧೨೭೫||

* *

ಮುದಕೀಯ ಕರಕೊಂಡು ಮುದಿ ಎತ್ತ ಕಟಗೊಂಡು |
ಗರುಕೀಯ ಮಾಳ ಕೆರಿಯುವನೆ |
ಗರುಕೀಯ ಮಾಳ ಕೆರಿಯುವನೆ--ಮುದುಕಯ್ಯ |
ಮುದುಕಿ ಬಿದಾ ಳ ಡೊಗರಲಿ ||೧೨೭೬||

ಎಲೆಯವನೆ ಅಡಿಕ್ಯವನೆ ಹೊಗೆಯು ಸೊಪ್ಪಿನವನೆ ।
ಹೆಂಡರುಳ್ಳವನೆ ಮನೆಗ್ಹೋಗೊ ।
ಹೆಂಡರುಳ್ಳವನೆ ಮನೆಗ್ಹೋಗೊ--ಆ ಬಾಲಿ ।
ಕಂಡೋರಿಗೆ ಬಾಯ ಬಿಡತಾಳ ॥೧೨೭೭॥

* * *

ನಾಗ ಮಂಗಲಕ್ಹೋಗಿ ನಾನೊಂದು ಹೆಣ್ತಂದೆ ।
ನಾಲ್ಕು ಮಾರುದ್ದ ಮೊಲೆಯವಳ ।
ನಾಲ್ಕು ಮಾರುದ್ದ ಮೊಲೆಯವಳ–ನಾತಂದು ।
ನಾಚ್ಕೆ ಹೋಯಿತು ಕುಲದಲ್ಲಿ ॥೧೨೭೮॥

ಹಾದರಗಿತ್ತಿಗೆ ಹಗಲೊಬ್ಬ ಇರುಳೊಬ್ಬ ।
ಮಂಚದ ಮ್ಯಾಗೊಬ್ಬ ಕೆಳಗೊಬ್ಬ ।
ಮಂಚದ ಮ್ಯಾಗೊಬ್ಬ ಕೆಳಗೊಬ್ಬ–ಬೀದೀಲಿ ।
ಹೊಂಚ್ಹಾಕತಾನ ಹೊರಗೊಬ್ಬ ॥೧೨೭೯॥

* * *

ಮುದ್ದೀಯ ಹಿಟ್ಟೀಗೆ ಮುದಿಗುರಿಯ ಬಾಡೀಗೆ ।
ದಿಡ್ಡಿ ಪುರದೋಳ ಒಲುಮೋಗೆ ।
ದಿಡ್ಡಿ ಪುರದೋಳ ಒಲುಮೋಗೆ--ನನ ಸಿದ್ದ ।
ಕಿದ್ದಂಡೀಲಿ ಬಾಯ ಬಿಟ್ಟಾನೋ ॥೧೨೮೦॥

* * *

ಮಾತಗಿತ್ತಿಯ ಮನೆಗೆ ಯಾತಕ್ಹೋದಿಯೋ ರಾಯಾ ।
ಮಾತು ಮಾತೀಗೆ ಕೊಡುವೋಳ ।
ಮಾತು ಮಾತೀಗೆ ಕೊಡುವೋಳ-ಮನೆಗ್ಹೋಗಿ ।
ಸೋತ್ಯಾಕ ಬಂದೆ ದರವೇಸಿ ॥೧೨೮೧॥

* * *

ಹಗಲು ಹಾರುವನಾದ ಇರುಳು ಬಣಜಿಗನಾದ ।
ಅರಸರ ಮಗನಾಗಿ ತಿರುಗೀದ ।
ಅರಸರ ಮಗನಾಗಿ ತಿರುಗೀದ--ನಮರಾಯ ।
ಹೊಸಪ್ಯಾಟೆಯವರ ಮಗಳೀಗೆ ॥೧೨೮೨॥

ಮೂರು ಹಾಡಿನ ಮೂಳ ಮುಕ್ಕಟ್ಟು ಬರಬೇಡ |
ಮೂಗೀಗೆ ಕವಡಿ ಪೋಣ್ಸೇನು |
ಮೂಗೀಗೆ ಕವಡಿ ಪೋಣ್ಸೇನು–ಎಲಾಮೂಳಾ |
ಊರಾಗ ನಿನ್ನ ಮೆರಸೇನು ||೧೨೮೩||

* * *

ಹಾಡು ಬರತಾವಂತ ಏರೇರಿ ಬರಬೇಡ |
ಏರೀದ ಗರ್ವ ಇಳಿಸೇನು |
ಏರೀದ ಗರ್ವ ಇಳಿಸೇನು-ಗದಗೀನ |
ಅಗಸ್ಯಾಗ ನಿನ್ನ ಹುಗಿಸೇನು ||೧೨೮೪||

* * *

ಗೊನ್ಹಳ್ಳಿ ಅಮ್ಮ ಗೊಂಬೆ ತೇರಿನವಳೆ |
ದಂಡಿಗ್ಹೋದಾ ಮಿಂಡ ಸುಖದಲ್ಲಿ |
ದಂಡಿಗ್ಹೋದಾ ಮಿಂಡ ಸುಖದಲ್ಲಿ-ಬಂದರೆ |
ಗಂಡನಾಹೂತಿ ಕೊಡುವೇನ ||೧೨೮೫||

* * *

ಆನೆ ಬರತಾವಂತ ಆರು ಬಣವೀ ಕೊಂಡ |
ಆನೆಲ್ಲಿ ನಿಮ್ಮ ದಳವೆಲ್ಲಿ |
ಆನೆಲ್ಲಿ ನಿಮ್ಮ ದಳವೆಲ್ಲಿ-ಬೀಗರೆ |
ಬೊಳ್ಹೋರಿ ಮ್ಯಾಲೆ ಬರತಾರ ||೧೨೮೬||

* * *

ಬೀಗತಿ ಒಳ್ಳೀಯವಳಂತ ದೇವರ ಮನಿಕೊಟ್ಟೆ |
ದೇವರ ಕದ್ದಾಳ ಬಗಲಾಗ |
ದೇವರ ಕದ್ದಾಳ ಬಗಲಾಗ-ಅಡಿಗೆ ಮನೆ |
ಹೋಳಿಗಿ ಘಳಿಗಿ ಬಗಲಾಗ ||೧೨೮೭||

* * *

ಬೀಗತಿ ಒಳ್ಳೀಯವಳಂತ ಅಡಗೀಯ ಮನಿಕೊಟ್ಟೆ |
ಬಾನದ ದುರುಡಿ ಬಗಲಾಗ |
ಬಾನದ ದುರುಡಿ ಬಗಲಾಗ-ಅವರಣ್ಣ |
ನೀಡಾಕಿಲ್ಲೆಂದು ಕಸುಗೊಂಡ ||೧೨೮೮||

ಎಲ್ಲಾರೂ ಕಟ್ಟ್ಯಾರ ಮಲ್ಲೀಗ್ಹೂವಿನದಂಡಿ।
ಬೀಗತಿ ಕಟ್ಟ್ಯಾಳ ಹುಲ್ಹೊರೆಯ।
ಬೀಗತಿ ಕಟ್ಟ್ಯಾಳ ಹುಲ್ಹೊರೆಯ-ಅವರಣ್ಣ।
ಕುದುರೇಗಿಲ್ಲೆಂದು ಕಸುಗೊಂಡ ॥೧೨೮॥

* * *

ಎಲ್ಲಾರೂ ಕಟ್ಟ್ಯಾರ ಗುಳ್ಳಿಬಾಳಿ ಮಣಿ।
ಬೀಗತಿ ಕಟ್ಟ್ಯಾಳ ಕೈಪಾಳಿ।
ಬೀಗತಿ ಕಟ್ಟ್ಯಾಳ ಕೈಪಾಳಿ–ಅವರಣ್ಣ।
ಬಳಸಾಕಿಲ್ಲಂತ ಕಸುಗೊಂಡ ॥೧೨೦॥

* * *

ಆಚೀಕ ಹೊಲಗೇರಿ ಇಚೀಕ ಮಾದರಗೇರಿ।
ನಟ್ಟ ನಡಬರಕ ಹರಿಪೂಜಿ।
ನಟ್ಟ ನಡಬರಕ ಹರಿಪೂಜಿ–ಆ ಗಟಿಗೆ।
ನಾಲ್ವತ್ತು ನಾಯಿ ಬೊಗಳ್ಯಾವ ॥೧೨೧॥

* * *

ಒಂದೇ ಅಡಿಕೆ ಒಡೆದು ಒಂಭತ್ತು ಮದುವೇ ಮಾಡಿ।
ಇಂದೀನ ಖರ್ಚು ಬಲು ಖರ್ಚು।
ಇಂದೀನ ಖರ್ಚು ಬಲು ಖರ್ಚು-ಬೀಗರು।
ಕಂಬಽದ ತೆಕ್ಕಿ ಬಿಡವಳ್ರು ॥೧೨೨॥

* * *

ಒಂದು ಎಲೆ ಹರಿದು ಒಂಭತ್ತು ಮದುವೆಮಾಡಿ।
ನಿನ್ನೇಯ ಖರ್ಚು ಬಲು ಖರ್ಚು।
ನಿನ್ನೇಯ ಖರ್ಚು ಬಲು ಖರ್ಚು–ಬೀಗಽರು।
ಹಂದರವ ತೆಕ್ಕಿ ಬಿಡವಳ್ರು ॥೧೨೩॥

* * *

ಹಂದರದಾಗ ಮಂದಿ ಬಂದೆಷ್ಟೊತ್ತಾಯ್ತು।
ಕಂಬಳಿಲ್ಲೇನ ಇವರಲ್ಲಿ।
ಕಂಬಳಿಲ್ಲೇನ ಇವರಲ್ಲಿ-ಬೀಗಽತಿ।
ಕಂಬಽಳಿಗ್ಹೋಗ್ಯಾಳ ಮನಿ ಮನಿ ॥೧೨೪॥

ಹಂದರದಾಗ ಮಂದಿ ಬಂದಿಷ್ಟೊತ್ತಾಯ್ತು ।
ಕುಂಕುಮಿಲ್ಲೇನ ಇವರಲ್ಲಿ ।
ಕುಂಕುಮಿಲ್ಲೇನ ಇವರಲ್ಲಿ–ಬೀಗಸತಿ ।
ಕುಂಕುಮಕ್ಹೋಗ್ಯಾಳ ಅಂಗಡಿಗೆ ॥೧೨೯೫॥



## ವಿಧವೆ–ವೈಧವ್ಯ

ಚಿಕ್ಕs ತಿಲಕದ ಬಟ್ಟು ಇಕ್ಕsದಿರು ಎಲಿ ಹೆಣ್ಣೆ ।
ಚಿಕ್ಕs ಪ್ರಾಯದಲಿ ನಿನಗಂಡ ।
ಚಿಕ್ಕ ಪ್ರಾಯದಲಿ ನಿನಗಂಡ–ಹೋದ್ಮ್ಯಾಗ ।
ಚಿಕ್ಕಿ ಬಟ್ಟಿಟ್ಟ ಫಲವೇನು ॥೧೨೯೬॥

* * *

ಗಂಡ ಸತ್ತರಿನ್ನು ಗಂಧ ಕುಂಕುಮವ್ಯಾಕ ।
ಬಂಗಾರವ್ಯಾಕ ಬಳಿಯಾಕ ।
ಬಂಗಾರವ್ಯಾಕ ಬಳಿಯಾಗ–ಕೊರಳೀನ ।
ಸಿಂಗಾರ ಶಿವನೆ ಕಸುಗೊಂಡಾ ॥೧೨೯೭॥

* * *

ಅತ್ತsರೆ ಬಿಡದಲ್ಲ ಮುತ್ತೀನ ಕಣ್ಣೀರು ।
ಚಿಕ್ಕಂದಿನಲ್ಲಿ ಹಣೆಯಲ್ಲಿ ।
ಚಿಕ್ಕಂದಿನಲ್ಲಿ ಹಣೆಯಲ್ಲಿ–ಬರೆದಾ ಬರೆಹ ।
ದುಃಖ ಮಾಡಿದರೆ ಬಿಡದಲ್ಲ ॥೧೨೯೮॥

* * *

ಕಂಮsತೆತ್ತಲಿಲ್ಲ ಕೈಬೀಸಿ ನಡಿಲಿಲ್ಲ ।
ಗಂಡನs ಪುಣ್ಯ ಉಣಲಿಲ್ಲ ।
ಗಂಡನs ಪುಣ್ಯ ಉಣಲಿಲ್ಲ–ಶಿವರಾಯ ।
ರಂಡಿತನಕ್ಹೀಂಗ ಗುರಿಯಾಗಿ ॥೧೨೯೯॥

ದೂರೀಗೊದಗುವ ಹೆಣ್ಣ ಜನುಮ ಹೊರುವುದಕಿಂತ ।
ಹಾದೀನಾಯಾಗೂದು ಕಡುಲೇಸು ।
ಹಾದೀನಾಯಾಗೂದು ಕಡುಲೇಸು--ಎಲೆಜೀವ ।
ಹೆಣ್ಣಾಗಿ ಬಾಳ ಹೊರಿಬ್ಯಾಡ ||೧೩೦೦||

* * *

ಹಣೆಯಲ್ಲಿ ಬರೆದುದಕೆ ವೊದಲುಂಡ ಸಾಲಕ್ಕೆ ।
ಬ್ರಹ್ಮ ನೀ ಬರೆದ ಬರಹಕ್ಕೆ ।
ಬ್ರಹ್ಮ ನೀ ಬರೆದ ಬರಹಕ್ಕೆ-ನಾನೀಗ ।
ಹಗರಣವಾದೆ ಜನರೀಗೇ । ||೧೩೦೧||

* * *

ಒಪ್ಪೀನ ಸಿಂಗಾರ ಮುಡಿಗ್ಯಾಕ ಹೂವೆಸಳು ।
ಎಂಟೆಂಟು ದಿನಕ್ಯಾಕ ಸಂತಿ ।
ಎಂಟೆಂಟು ದಿನಕ್ಯಾಕ ಸಂತಿ-ಎಲೆಹೆಣ್ಣೆ ।
ಹುಡುಗರ ಬಾಳು ಹರಿದಾವು ||೧೩೦೨||

* * *

ಹೆಣ್ಣೀನ ಜನ್ಮವು ಸುಣ್ಣಾಗಿ ಕುದಿಯಲಿ ।
ಗಾಣದ್ದಿಂಡ್ಯಾಗಿ ನುರಿಯಲಿ ।
ಗಾಣದ್ದಿಂಡ್ಯಾಗಿ ನುರಿಯಲಿ-ಶಿವರಾಯ ।
ದೀಪದೆಣ್ಣ್ಯಾಗಿ ಉರಿಯಲಿ ||೧೩೦೩||



## ಸೂಳೆಯ ಸಹವಾಸ

ತಂಬಿಟ್ಟೆ ಗುಪ್ಪುಂಟೆ ತವರೀಗೆ ಮುಪ್ಪುಂಟೆ ।
ಡೊಂಬನಾ ಮನೆಗೆ ಕದವುಂಟೆ ।
ಡೊಂಬಳಾ ಮನೆಗೆ ಕದವುಂಟೆ-ಸೂಳೇಯ ।
ನಂಬಿದವಗುಂಟೆ ಸಂಸಾರ ||೧೩೦೪||

ನಾದುನಿಯು ತರವಲ್ಲ ಬೇಗಡಿಯು ಕೊಪ್ಪಲ್ಲ ।
ಜಾಲೀಯ ಮರವು ನೆರಳಲ್ಲ ।
ಜಾಲೀಯ ಮರವು ನೆರಳಲ್ಲ–ಸೂಳೀಯ ।
ಕೂಡಿದವನ ಬಾಳು ಅನುವಿಲ್ಲ ||೧೩೦೫||

* * *

ಸೂಳೀಗೆ ಹೋದವನು ಏನಾದ ಎಂತಾದ ।
ಕಾಡು ನಾಯಾದ ಕಪಿಯಾದ ।
ಕಾಡು ನಾಯಾದ ಕಪಿಯಾದ--ಆ ಮುಸುವ ।
ಸೂಳೀಯ ಕಾಲಿಗೆ ಕೆರವಾದ ||೧೩೦೬||

* * *

ನಿದ್ರೆಗೆ ಮುದ್ದುಂಟೆ ವಜ್ರಕ್ಕೆ ಬೆಲೆಯುಂಟೆ ।
ಬುದ್ಧಿವಂತರಿಗೆ ಸಮರುಂಟೆ ।
ಬುದ್ಧಿವಂತರಿಗೆ ಸಮರುಂಟೆ–ಸೂಳೀಗೆ ।
ಹೋದವನಿಗುಂಟೆ ಮನೆವಾರ್ತೆ ||೧೩೦೭||

* * *

ಮಂಜು ಮರುಳಲ್ಲ ಮರಳು ಸಕ್ಕರೆಯಲ್ಲ ।
ಮಡಗಿದ್ದ ಸೂಳೆ ಸ್ಥಿರವಲ್ಲ ।
ಮಡಗಿದ್ದ ಸೂಳೆ ಸ್ಥಿರವಲ್ಲ–ತಮ್ಮಯ್ಯ ।
ಮನೆಗೆ ತಂದಿರಿಸು ಮಡದೀಯ ||೧೩೦೮||

* * *

ಗಂಡುಳ್ಳ ಗರತೀಯ ಸಂಗವ್ಯಾತ ಕಣ್ಣಯ್ಯ ।
ಅವಳಂಗ ಬ್ಯಾರೆ ಗುಣ ಬ್ಯಾರೆ ।
ಅವಳಂಗ ಬ್ಯಾರೆ ಗುಣ ಬ್ಯಾರೆ–ಅಡಕೀಯ ।
ಹೊಂಬಾಳೆ ಬ್ಯಾರೆ ಸುಳಿ ಬ್ಯಾರೆ ||೧೩೦೯||

* * *

ಸೂಳೀಗೆ ಹೋಗವನು ಸೂರಡಲಿ ನಿಲ್ಲುವನು ।
ಬೆಳಗಾಗುವುದ ಅರಿಯsದ ।
ಬೆಳಗಾಗುವುದ ಅರಿಯsದ–ಹುಡುಗನಿಗೆ ।
ಓಣ್ಯೋಣಿ ಗುಂಟ ಕೆರದೇಟು ||೧೩೧೦||

ಬೇಡರ ಅಂಗಡಿ ಬಿಡಿಮುತ್ತಿನ ಚಾವಡಿ ।
ಬೇಡ ನನ ತಮ್ಮ ಘನಮೋಡಿ ।
ಬೇಡ ನನ ತಮ್ಮ ಘನಮೋಡಿ-ಸೂಳೇರ್ಸಂಗ ।
ಬಾಳುವ ಮಕ್ಕಳಿಗೆ ಥರವಲ್ಲ ॥೧೩೧೧॥

* * *

ಜಾಗರದ ನವಿಲ್ಹಾಂಗ ಬಾಗುತ್ತ ಬಳುಕುತ್ತ ।
ಬಾಲೆಯರ ಕಂಡು ಭ್ರಮಿಸದು ।
ಬಾಲೆಯರ ಕಂಡು ಭ್ರಮಿಸದು-ನನತಮ್ಮ ।
ಬಾಲರ ಪಡೆದು ಸುಖಿಯಾಗು ॥೧೩೧೨॥

* * *

ಹೆಣ್ಣಿಂದ ರಾವಣ ಮಣ್ಣು ಕೂಡಿದನಯ್ಯ ।
ಅನ್ನಿಗರ ಹೆಣ್ಣು ಬಯಸದೆ ।
ಅನ್ನಿಗರ ಹೆಣ್ಣು ಬಯಸದೆ-ತಮ್ಮಯ್ಯ ।
ನಿನ್ನ ಹೆಣ್ಣೊಡನೆ ಸುಖಿಯಾಗು ॥೧೩೧೩॥

* * *

ಸೂಳೀಯ ಮನಿಯಾಗ ಸೂರೆಲ್ಲ ಮಲ್ಲೀಗಿ ।
ಜಾಣ ನಾ ಹೋಗಿ ಮಲಗೂವೆ ।
ಜಾಣ ನಾ ಹೋಗಿ ಮಲಗೂವೆ-ಮಂಚದಮ್ಯಾಲ ।
ತಾಳೆ ಹೂವೀನ ತಲೆದಿಂಬು ॥೧೩೧೪॥

* * *

ಸಂತೆ ಸೂಳೆಯ ನಂಬಿ ಮನೆಯ ಹೆಂಡತಿ ಬಿಟ್ಟ ।
ಬಾಗಿಲಲಿ ಬೆಳೆವ ಬದನೆಕಾಯಿ ।
ಬಾಗಿಲಲಿ ಬೆಳೆವ ಬದನೆಕಾಯಿ-ಗೆ ನಂಬಿ ।
ಕರೆವೆಮ್ಮೆ ಬಿಟ್ಟ ಕುಲಗೇಡಿ ॥೧೩೧೫॥

* * *

ಒಕ್ಕೀದ ಅಣ್ಣಯ್ಯ ಸೊಕ್ಕಿ ಸೂಳೆಗೆ ಹೋದ ।
ಒಕ್ಕೀದ ಕಾಳು ಅಳಕೊಟ್ಟು ।
ಒಕ್ಕೀದ ಕಾಳು ಅಳಕೊಟ್ಟು-ಸೂಳೀಗೆ ।
ದುಃಖ ಮಾಡತಾನ ಕಣದಾಗ ॥೧೩೧೬॥

ಕಿಕ್ಕೇರಿ ತಿರುಗುತ್ತ ನಮ್ಮೂರ್ಗೆ ಬರಲಿಲ್ಲ ।
ಕದ್ದು ಹೋಗ್ಯಾನ ಸೂಳೀಗೆ ।
ಕದ್ದು ಹೋಗ್ಯಾನ ಸೂಳೀಗೆ- ನನಗೆಣೆಯ ।
ಬೆಟ್ಟದಾ ಬುಡಕ ಹೋಗ್ಯಾನ ॥೧೩೧೭॥

* * *

ಸೂಳೆಗ್ಹೋದವನ ಸುಡು ಅವನ ಜನ್ಮವ ।
ನಾಳೆ ನೋಡವನ ಬವಣೀಯ ।
ನಾಳೆ ನೋಡವನ ಬವಣೀಯ-ಅಕ್ಕವ್ವ ।
ತೇರೀನ ಬೀದ್ಯಾಗ ಉಗಿವಾಗ ॥೧೩೧೮॥

* * *

ಗಾಳಿ ಗಾಳಿ ಕೇಳೆ ಬನ್ನಿ ಮಾಂದಾಳಿ ಕೇಳೆ ।
ಸೂಳ್ಯಾರೋಣೀಯ ಸುಡಬೇಕು ।
ಸೂಳ್ಯಾರೋಣೀಯ ಸುಡಬೇಕು-ಗಾಳಿಯೆ ।
ಜಾಣರ ಓಣ್ಯಾಗ ಇರಬೇಕು ॥೧೩೧೯॥

* * *

ಸೂಳೆಗಿಕ್ಕುವ ಅನ್ನ ನಾರಿಗಿಕ್ಕೆಲೊ ತಮ್ಮ ।
ನಾಳೆ ನಿನ್ನೊಡನೆ ಬರುವಳು ।
ನಾಳೆ ನಿನ್ನೊಡನೆ ಬರುವಳು-ನಮ್ಮೂರ ।
ಭೂಮೀಗೆ ಹಾಕಿದರ ಬೆಳೆವೂದು ॥೧೩೨೦॥

* * *

ಎಲ್ಲೀಗೆ ಹೋಗಿದ್ದೆ ಯಾಹೂವ ಮುಡಿದಿದ್ದೆ ।
ಯಾರ ತೋಳ್ನ್ಯಾಗ ಮಲಗಿದ್ದೆ ।
ಯಾರ ತೋಳ್ನ್ಯಾಗ ಮಲಗಿದ್ದೆ-ನನಕಂದ ।
ವಲ್ಲಿ ಸೆರಗೆಲ್ಲ ಪರಿಮಳ ॥೧೩೨೧॥

* * *

ಇಲ್ಲನನ ಹಡೆದವ್ವ ಸುಳ್ಳ ಆಡದಿರು ।
ಕಲ್ಯಾಣಿಗ್ಹೋಗಿ ಮುಖತೊಳೆದು ।
ಕಲ್ಯಾಣಿಗ್ಹೋಗಿ ಮುಖತೊಳೆದು-ಬರುವಾಗ ।
ಮಾವಯ್ನ ಮಗಳು ಬಂದಳು ॥೧೩೨೨॥

ಮಾವಯ್ನ ಮಗಳ ಮರಿದುಂಡ ತೋಳ್ನ್ಯಾಗ ।
ಒಂದರ ಗಳಿಗೆ ಒರಗಿದ್ದೆ ।
ಒಂದರ ಗಳಿಗೆ ಒರಗಿದ್ದೆ–ಹಡೆದವ್ವ ।
ನೀ ಒಪ್ಪಿ ತಂದ ಮಡದೀಯ ||೧೩೨೪||

* * *

ಠಾಕು ಟೀಕಿನ ಕಟ್ಟು ಅದಕೆ ಚಿನ್ನದ ಕಟ್ಟು ।
ಸಾಕೋ ಅಣ್ಣಯ್ಯ ದವಲತ್ತು।
ಸಾಕೋ ಅಣ್ಣಯ್ಯ ದವಲತ್ತು–ನಿನಸೂಳೆ ।
ಬೇಕಾದ್ರೆ ಮನೆಗೆ ಬರುವ್ಹೋಳು ||೧೩೨೫||

* * *

ಬೇಡರ ಅಂಗಡಿ ಬಿಡಿ ಮುತ್ತು ಜಾವಡಿ ।
ಬೇಡ ಕಂದಯ್ಯ ದೊರೆಮೋಡಿ ।
ಬೇಡ ಕಂದಯ್ಯ ದೊರೆ ಮೋಡಿ- ಸೂಳೇರ್ಸಂಗ ।
ಬಾಳೋ ಮಕ್ಕಳಿಗೆ ತರವಲ್ಲ ||೧೩೨೬||

* * *

ಸೂಳೇರಿಗ್ಹೋಗವಗ ಹೇಳವ್ವ ಬುದ್ಧೀಯ ।
ಕೇಳಾವನಲ್ಲ ನಿನಮಗಾ ।
ಕೇಳಾವನಲ್ಲ ನಿನಮಗಾ–ಹಡೆದವ್ವ ।
ಸೂಳೆರಾಡೂವ ಗಿಲಿಕೇಯ ||೧೩೨೭||

* * *

ಈಟೇಟ ಮೊಲೆಯವಳೆ ಚೀಟಿನ ಕುಪ್ಪಸದವಳೆ ।
ಈಚಲ ಪ್ಯಾಟ್ಯಾಗ ಇರುವವಳೆ ।
ಈಚಲ ಪ್ಯಾಟ್ಯಾಗ ಇರುವವಳೆ- ಬೀದಿ ಹೆಣ್ಣೆ ।
ಗೆಣೆಯ ಬರತಾನ ಎದುರೀಗೆ ||೧೩೨೮||

* * *

ಕಾಗೀನ ಸೀರಿಯವಳೆ ಕಡೆಸಿಡಿದ ಮನೆಯವಳೆ ।
ಹುಡುಗ ಬರತಾನ ಕರಕೋಳ ।
ಹುಡುಗ ಬರತಾನ ಕರಕೋಳ--ಎಲೆಹೆಣ್ಣೆ ।
ಹೆಂಡ ತರತಾನ ಸುರಕೋಳ ||೧೩೨೯||

## ನಾರಿ ಮುನಿದಾಗ

ಆರ್‍ಯಾಣ ದಡವ್ಯಾಗ ಯಾರಾಣಿ ಕೊಡಲೆವ್ವ ।
ಸೂರ್ಯನಿನ್ನಾಣಿ ಶಿವನಾಣಿ ।
ಸೂರ್ಯನಿನ್ನಾಣಿ ಶಿವನಾಣಿ-ಕೊಟ್ಟೇನ ।
ಆರ್‍ಯಾಣಗೆದ್ದು ಬರುವೇನ ॥೧೨೯॥

* * *

ಅಂಜೀಕಿ ತೋರಿದರ ಅಂಜವರ ಮಗಳಲ್ಲ ।
ಮಂಜಾನದಾಗ ಹುಲಿಕರಡಿ ।
ಮಂಜಾನದಾಗ ಹುಲಿಕರಡಿ-ತೋರಿದರ ।
ಅಂಜಿ ತಿರಗವರ ಸೊಸಿಯಲ್ಲ ॥೧೩೦॥

* * *

ಹೊಂದೀಕ್ಯಲ್ಲದ ಮಾತ ಹೊಂದೀಸ್ಯಾಡಲಿ ಬ್ಯಾಡ ।
ಬಂಧಾನ ನಾನು ಬಡಲಾರೆ ।
ಬಂಧಾನ ನಾನು ಬಡಲಾರೆ-ಕಣ್ಣೀರು ।
ತಟ್ಟಲಿ ಅವರ ಶಿಶುವೀಗೆ ॥೧೩೧॥

* * *

ಮನವೊಂದು ಮಾಣೀಕ ಏನಂದ ಘಾತಕ ।
ನಾನೊಂದ ನನ್ನ ಮನನೊಂದ ।
ನಾನೊಂದ ನನ್ನ ಮನನೊಂದ-ಕೈಯಾನ ।
ಬಿಳಿಯೆಲಿ ಬಾಡಿ ರುಚಿಹಾರಿ ॥೧೩೨॥

* * *

ಆಸರಕಿ ಆಳದಿಟ್ಟ ಬ್ಯಾಸರಕಿ ಬಳದಿಟ್ಟ ।
ಚಿಂತಿ ಕಾಲಾಗ ತುಳಿದಿಟ್ಟ ।
ಚಿಂತಿ ಕಾಲಾಗ ತುಳಿದಿಟ್ಟ-ಈ ದೇಹ
ಶೀಲ ಮಾಡಿಟ್ಟ ಜನದಾಗ ॥೧೩೩॥

ಕಾಚೀನ ಕರದೆಷ್ಟ ಅಡಗೀಯ ವಗರೆಷ್ಟ ।
ಸೀರ ಬಳ್ಳೊಳ್ಳಿ ಸಿದಿಯೆಷ್ಟ ।
ಸೀರ ಬಳ್ಳೊಳ್ಳಿ, ಸಿದಿಯೆಷ್ಟ-ನನಗೂಡ ।
ಮಾತಾಡವರ ಬಿಗುವೆಷ್ಟ ॥೧೩೩೪॥

* * *

ಸರಗೀಯ ಕೊಂಡ್ಹಾಂಗ ಸರದಿತ್ತ ನನಮನವು ।
ಸರಿಬಾರದವರು ಇದರೀಗಿ ।
ಸರಿ ಬಾರದವರು ಇದರೀಗಿ-ಬಂದsರ ।
ಧರಿ ಮೋಜಿನ ಮನವ ನೆಲನೋಡಿ ॥೧೩೩೫॥

* * *

ಯಾರೀಗಿ ಯಾರಿಲ್ಲ ಈ ಮನಕ ಧೀರಿಲ್ಲ ।
ಆರ್ಯಾಣದಾಗ ಪರದೇಶಿ ।
ಆರ್ಯಾಣದಾಗ ಪರದೇಶಿ-ಸತ್ತsರ ।
ಯಾರೀಗಿ ದುಃಖ ಹಡೆದವ್ವ ॥೧೩೩೬॥

* * *

ಮಾತೀಗಿ ಬಾರದ್ದು ಯಾತsಕ ನೆಸಿಯsಲಿ ।
ಜಾತ ಮಲ್ಲಿಗಿ ನನ ಮನವ ।
ಜಾತ ಮಲ್ಲಿಗಿ ನನ ಮನವ-ಬಾಯಾನ ।
ಜಾಚೇಲಿ ಮಾಡಿ ಉಗಳೇನ ॥೧೩೩೭॥

* * *

ನದಿಯ ದಂಡೀ ಮ್ಯಾಗ ಎಳೆಯ ಸವತೀಕಾಯಿ ।
ಕಡಿಯಂದsರ್ಹ್ಯಾಂಗ ಕಡಿಯsಲೆ ।
ಕಡಿಯಂದsರ್ಹ್ಯಾಂಗ ಕಡಿಯsಲಿ-ಆ ಬಾಲೀನ ।
ಮರಿಯಂದರ್ಹ್ಯಾಂಗ ಮರಿಯsಲೆ ॥೧೩೩೮॥

* * *

ತಂದಿ ನನ ಹಡದಪನ ಕುಂದೀನ ಮಗಳಲ್ಲ ।
ಮುಂದ್ಯಾಗ ನಿಂತು ನಗಲಿಲ್ಲ ।
ಮುಂದ್ಯಾಗ ನಿಂತು ನಗಲಿಲ್ಲ-ನನ್ನೂರ ।
ಬಳಗsಕ ಮಾತು ತರಲಿಲ ॥೧೩೩೯॥

ಕಪ್ಪಾದ ಹೆಣ್ಣಿಂಮ ಎತ್ತ್ಯಾಡದಿರುಕಂಡ್ಯ ।
ಕಪ್ಪಾದ ಹಸುವು ಕರೆದರೆ ।
ಕಪ್ಪಾದ ಹಸುವು ಕರೆದರೆ-ಆ ಹಾಲು ।
ಒಪ್ಪುವದು ಹರನ ಪೂಜೀಗೆ ||೧೩೪೦||

* * *

ಹೊಟ್ಟೆಯ ಈಕಿಚ್ಚು ಮುಟ್ಟಲಾರದ ಬೇಗೆ ।
ಉಟ್ಟ ಸೀರೆಯು ಉರಿದ್ಹೋದೊ ।
ಉಟ್ಟ ಸೀರೆಯು ಉರಿದ್ಹೋದೊ-ಕಿಚ್ಹೋಗಿ ।
ತಟ್ಟಲಿ ಬ್ರಹ್ಮನ ಮಡದೀಗೆ ||೧೩೪೧||

* * *

ಒಬ್ಬಳ ನಗಸೀದ ಒಬ್ಬಳ ಅಳಸೀದ ।
ಇಬ್ಬಂದಿಕಾರ ಯಮರಾಯ್ನ ।
ಇಬ್ಬಂದಿಕಾರ ಯಮರಾಯ್ನ-ಮಗ್ಗಲಿಗೆ ।
ನೆಗ್ಗಿಲು ಮುಳ್ಳು ಸುರಿಯಾಲಿ ||೧೩೪೨||

* * *

ಹೆಣ್ಣಿನ ಕಿಚ್ಚಟ್ಟೆ ಬನ್ನೀಯ ಮರ ಉರಿದೊ ।
ರಾಮಾರ ಮಡದಿ ಸೀತವ್ನ ।
ರಾಮಾರ ಮಡದಿ ಸೀತವ್ನ-ಕಿಚ್ಚಟ್ಟೆ ।
ರಾವಣನ ಪಟ್ಣ ಉರಿದಾವು ||೧೩೪೩||

ಹೆಣ್ಣೀನ ಕಿಚ್ಹೋಗಿ ಸನ್ಯಾಸಿ ಮಠಬೆಂದೊ ।
ಕನ್ನೆ ರಾಮಾರ ಕದಬೆಂದೊ ।
ಕನ್ನೆ ರಾಮಾರ ಕದ ಬೆಂದೊ-ಹಾರವರ ।
ಪಂಚಾಂಗ ಬೆಂದು ಹೊಗೆಯಾದೊ ||೧೩೪೪||



## ಗೆಣೆಯ ಗೆಣತಿ

ನೀರಿಗ್ಹೋಗೋ ಹೆಣ್ಣೆ ನಿಲ್ಲೆ ನಾ ಬರುತೀನಿ ।
ನಿನ್ನಾಣೆ ನಿನ್ನ ಕೊಡದಾಣೆ ।
ನಿನ್ನಾಣೆ ನಿನ್ನ ಕೊಡದಾಣೆ–ಕತ್ತೀನ ।
ಬಣ್ಣದs ಸರದಾಣೆ ಬರುತೇನಿ ||೧೩೪೫||

*

ಚಿನ್ನದ ಚೀಲಕ್ಕೆ ರನ್ನದ ಬಾಯ್ದಾರ ।
ನಿನ್ನೊಂದಿಗಾಡಿ ನನಗೆಣೆಯ ।
ನಿನ್ನೊಂದಿಗಾಡಿ ನನಗೆಣೆಯ–ನಾನು।
ನೆನ್ನಿಂದ ನೀರು ತರಲಿಲ್ಲ ||೧೩೪೬||

* * *

ಹಾದೀಯ ಮನೆಯವಳೆ ಗೋಧೀಯ ನೆರಿಯವಳೆ ।
ನನನೋಡಿ ಮಾರಿ ತಿರುವವಳೆ ।
ನನನೋಡಿ ಮಾರಿ ತಿರುವವಳೆ–ನನಗೆಣತಿ ।
ನಾನು ಮಾಡಿದ ತಪ್ಪೇನೆ ||೧೩೪೭||

* * *

ಬರುವೆನು ಜಾಣ ಬರುವ ದಾರೀಕಾಯೋ ।
ಬತ್ತೀದ ಬಾಯಿಗೆಳ ನೀರು ।
ಬತ್ತೀದ ಬಾಯಿಗೆಳ ನೀರು–ನಿಂಬೆಹಣ್ಣ ।
ತರುವೇನು ಜಾಣ ತಡಮಾಡ್ಹೋ ||೧೩೪೮||

* * *

ಆಚೆ ಕೆರೆಯಲಿ ನೀನು ಈಚೆ ಕೆರೆಯಲಿ ನಾನು ।
ಭಾಷೆ ತಾರ್ಹೆಣ್ಣೆ ಬಲಗೈಲಿ ।
ಭಾಷೆ ತಾರ್ಹೆಣ್ಣೆ ಬಲಗೈಲಿ–ಎಲೆಹೆಣ್ಣೆ ।
ಭಾಷೆ ತಪ್ಪಂಥ ಮಗನಲ್ಲ ||೧೩೪೯||

ಯಾಕೋ ಕಾಣೆ ನನ್ನ ಎಡ ಭುಜವು ಜುಮ್ಮೆಂತು ।
ಯಾಕೆನ್ನ ಗೆಣೆಯ ನೆನದಾನೊ
ಯಾಕೆನ್ನ ಗೆಣೆಯ ನೆನದಾನೊ-ಸಲ್ಲ
ಕಲ್ಲ್ಕ್ಯಂಥ ಎದೆಯು ಕರಗೀತು ||೧೩೫೦||

* * *

ನೀರಿಗೆ ಹೋಗವಳೆ ನೀಲsದುಂಗುರದವಳೆ ।
ವೈಯಾರಿ ಸಣ್ಣ ಧನಿಯವಳೆ ।
ವೈಯಾರಿ ಸಣ್ಣ ಧನಿಯವಳೆ-ನನಗೆಣತಿ ।
ವೈಯಾರ ಬಿಟ್ಟು ತೆರಹೇಳೇ । ||೧೩೫೧||

* * *

ದಂಡೀನ ಹಾದ್ಯಾಗ ಗೊಂಡೇವ ಮಾರವಳೆ ।
ಕೊಂಡು ಕೊಂಡೇನು ಬೆಲೆ ಹೇಳೆ ।
ಕೊಂಡು ಕೊಂಡೇನು ಬೆಲೆ ಹೇಳೆ-ಎಲೆ ಹುಡಗಿ
ತಂದು ಕೊಂಡೇನು ತೆರಹೇಳೆ ||೧೩೫೨||

* * *

ಆಚೇಯ ಕರೆಯವನೆ ಬೇಟೆ ವಸ್ತ್ರದವನೆ ।
ಪಾರಿವಾಳಧಂಗ ಸುಳಿಯವನೆ ।
ಪಾರಿವಾಳಧಂಗ ಸುಳಿಯವನೆ-ನನಗೆಣೆಯ ।
ದೂರು ಬರತsದ ನಿನಮ್ಯಾಲ ||೧೩೫೩||

* * *

ದೂರು ಬಂದರೆ ಬರಲಿ ವೈಯಾರ ನಿನಗಿರಲಿ ।
ರಾಣಿ ನಿನ್ನ ಮುಖ ಕಳೆಯಿರಲಿ ।
ರಾಣಿ ನಿನ್ನ ಮುಖ ಕಳೆಯಿರಲಿ-ಎಲೆ ಹೆಣ್ಣೆ ।
ನೂರು ಬಿದ್ದರೂ ನನಗಿರಲಿ ||೧೩೫೪||

* *

ಕನ್ನಂಬಾಡೀಲಿರುವ ಚನ್ನ ಗೋಪಾಲಯ್ಯ ।
ಕನ್ನೆಣ್ಣು ನನಗ ಒಲಿದsರ ।
ಕನ್ನೆಣ್ಣು ನನಗ ಒಲಿದsರ-ಕನ್ನಂಬಾಡಿ ।
ಕನ್ನಡಿಗೆ ಮುತ್ತ ಬಿಗಿಸೇನು ||೧೩೫೫||

ಕಾಗಲವಾಡ್ಯಾಗಿರುವ ಬಾಗೀಲ ಹನುಮಂತ ।
ನೀಟನ್ನ ಹೆಣ್ಣು ಒಲಿದsರ ।
ನೀಟನ್ನ ಹೆಣ್ಣು ಒಲಿದsರ-ಹನುಮಂತ ।
ಮುತ್ತು ಬಾಗಿಲಿಗೆ ಹೆಣಿಸೇನು ||೧೩೫೬||

* * *

ನಿಂಬೀಯ ಹಣ್ಣಿನ್ಹಾಂಗ ತುಂಬಿದs ವೈಬಾಲಿ ।
ಕಾಣsದೆ ನಿನ್ನ ಕೊರಗೇನು ।
ಕಾಣsದೆ ನಿನ್ನ ಕೊರಗೇನು-ಗೆಣೆಕಾರ್ತಿ ।
ಕಾಣಲಿನ್ಹ್ಯಾಂಗ ಮನೆದೂರ ||೧೩೫೭||

* * *

ಹಂಬsಲ ಬಿಟ್ಟು ತಿಂಗಳ ಮೇಲಾಯ್ತು ।
ಕಣ್ಣಿಗೆ ನಿದ್ದಿ ಕವಿಯಾದೋ ।
ಕಣ್ಣಿಗೆ ನಿದ್ದಿ ಕವಿಯಾದೋ-ಗೆಣೆಕಾರ್ತಿ ।
ಮೊಕ ತೋರು ಬಂದು ಸ್ವಪ್ನಾಗೆ ||೧೩೫೮||

* * *

ಚಿಕ್ಕತ್ತಿ ಮಗಳೆ ಚಿನ್ನದುಂಗುರದವಳೆ ।
ಸುತ್ತೇಳು ಪೌಳಿ ಮನೆಯವಳೆ ।
ಸುತ್ತೇಳು ಪೌಳಿ ಮನೆಯವಳೆ-ನನಚಲುವೆ ।
ಸುತ್ತಿ ಬರತೇನಿ ದನಿತೋರೆ ||೧೩೫೯||

* * *

ಕೋಟೀಯ ಮನೆಯವಳೆ ಕೋಗೀಲೆ ಧನಿಯವಳೆ ।
ರಾಟೆ ವಾಲೇಯ ಕಿವಿಯವಳೆ ।
ರಾಟೆ ವಾಲೇಯ ಕಿವಿಯವಳೆ-ಎಲೆ ಹೆಣ್ಣೆ ।
ದಾಟಿ ಬರಲಾರೆ ದನಿ ತೋರೆ ||೧೩೬೦||

* * *

ಪಂಜರದ ಗಿಣಿ ನಾನು ಬರಲಾರೆ ತಾವಿಲ್ಲ ।
ದನಿ ತೋರಲಾರೆ ತೆರಣಿಲ್ಲ ।
ದನಿ ತೋರಲಾರೆ ತೆರಣಿಲ್ಲ-ನನಗೆಣೆಯ ।
ಗಿಣಿಯಾಗಿ ಬಾರೋ ಹೊಸ್ತಲಿಗೆ ||೧೩೬೧||

ಅಡ್ಡ ಗುಡ್ಡವ ದಾಟಿ ಕದ್ದು ಕಣಿವೆಯ ದಾಟಿ ।
ಬಿದ್ದೋಡಿ ಬಂದೆ ನಿನಗಾಗಿ ।
ಬಿದ್ದೋಡಿ ಬಂದೆ ನಿನಗಾಗಿ–ನನಗೆಣತಿ ।
ಕಬ್ಬಿನಂಥವಳೆ ದನಿದೋರೆ ||೧೩೬೨||

* * *

ಧನಿ ಹೆಂಗ ತೋರsಲಿ ಕದ ಹೆಂಗ ತೆಗೆಯsಲಿ ।
ಮಗ್ಗಲಲ್ಲವನೆ ಮನೆ ಪುರುಷ ।
ಮಗ್ಗಲಲ್ಲವನೆ ಮನೆ ಪುರುಷ–ಎಲೆ ಗೆಣೆಯ ।
ಮೊಗ್ಗಾಗಿ ಬಾರೋ ತುರುಬೀಗೆ ||೧೩೬೩||

ಕಾರೆಂಬೋ ಕತ್ತsಲೆ ಭೋರೆಂಬೊ ಮಳೆನೋಡ ।
ಏನು ಹಿಡಿದಿತ್ತೊ ಬರುವ್ಹೋಕೆ ।
ಏನು ಹಿಡಿದಿತ್ತೊ ಬರುವ್ಹೋ–ನನಗೆಣೆಯ ।
ರಾಣಿಲ್ಲವೇನೋ ಮನಿಯಾಗ ||೧೩೬೪||

* * *

ರಾಣಿ ಇದ್ದರೇನೆ ಪ್ರಾಣಕಾಂತೆ ನೀಕೇಳೆ ।
ನೀನೆ ಪಂಜರದ ಅರಗಿಳಿ ।
ನೀನೆ ಪಂಜರದ ಅರಗಿಳಿ–ಗೆಣೆಕಾರ್ತಿ ।
ಮರತ್ಹೆಂಗ ಇರಲೆ ನಾನಿನ್ನ ||೧೩೬೫||

* * *

ಊರಿಗೆ ಮುಂದಾಗಿ ಗಂಗೆಗೆ ಹಿಂದಾಗಿ ।
ಸೂಯೆಂದು ಮಡಿಯ ಒಗೆಯುವನೆ ।
ಸೂಯೆಂದು ಮಡಿಯ ಒಗೆಯುವನೆ–ಮಡಿವಾಳ ।
ಊರೊಳಗೇನಯ್ಯ ಹೊಸ ಸುದ್ದಿ ||೧೩೬೬||

* * *

ಹರದ ಹೊಸಳ್ಳಿ ಪುರದ ಏರಿಯ ಮ್ಯಾಲ ।
ಮಾವನೂರ ರಂಗ ಸತ್ಹೋದ ।
ಮಾವನೂರ ರಂಗ ಸತ್ಹೋದ–ಸುದ್ದೀಯ ।
ತಿಳಿದೇನು ಹೊಳೆಯ ನೀರಲ್ಲಿ ||೧೩೬೭||

ಮಾವ್ನೂರ ರಂಗ ಸತ್ಹೋದ ಸುದ್ದಿ ಕೇಳಿ ।
ಹೊತ್ತಿದ್ದ ಕೊಡವ ಕೆಳಗ್ಹಾಕಿ ।
ಹೊತ್ತಿದ್ದ ಕೊಡವ ಕೆಳಗ್ಹಾಕಿ-ಆ ಬಾಲಿ ।
ದುಃಖ ಮಾಡ್ಯಾಳ ಹೊಳಿಯಾಗ ||೧೩೬೮||

* * *

ಹೊತ್ತಿದ್ದ ಕೊಡವನ್ನು ಧೊಪ್ಪಽನೆ ಎತ್ಹ್ಯಾಕಿ ।
ಇಚ್ಛೆ ಬಂದಂಗ ಅಳತಾಳ ।
ಇಚ್ಛೆ ಬಂದಂಗ ಅಳತಾಳ-ಆ ಬಾಲಿ ।
ಹಾಡ್ಹ್ಯಾಡಿಕೊಂಡು ಅಳತಾಳ ||೧೩೬೯||

* * *

ಚಿನ್ನದ ಕೊಡವಲ್ಲ ರನ್ನದ ಕೊಡವಲ್ಲ ।
ಮಣ್ಣೀನ ಕೊಡಕ್ಯಾಕ ಕಡು ದುಃಖ ।
ಮಣ್ಣೀನ ಕೊಡಕ್ಯಾಕ ಕಡುದುಃಖ-ಮಾದವ್ವ ।
ಪುರುಷಽಗ ಹೇಳು ತರತಾನ ||೧೩೭೦||

* * *

ಕೊಡ ಕೊಡ ಎಂದಽರ ಈ ಸೀಮಿ ಕೊಡವಲ್ಲ ।
ಚನ್ನ ರಾಯ ಪಟ್ಣಽದ ಜಿಗಿ ಜೋಡಿ ।
ಚನ್ನ ರಾಯ ಪಟ್ಣದ ಜಿಗಿ ಜೋಡಿ-ಕೊಡವ ।
ಹತ್ವರ್ಷದಿಂದ ಬಳಸಿದ್ದೆ ||೧೩೭೧||

ಅತ್ತಿ ಕಾಣದ್ಹಂಗ ಮಾವ ನೋಡದ್ಹಂಗ ।
ಒಪ್ಪದಲಿ ನಾನು ಬಳಸಿದ್ದ ।
ಒಪ್ಪದಲಿ ನಾನು ಬಳಸಿದ್ದ-ಕೊಡವು ।
ನುಚ್ಚಾಯ್ತು ನೀರ ಹೊಳಿಯಾಗ ||೧೩೭೨||

* * *

ಹಳ್ಳಿಕಾರರ ಹುಡುಗ ಇರುಳೆದ್ದು ಬರುವಾಗ ।
ಬೆಳ್ಳಿಯುಂಗುರದ ಬೆಳಕೀಗೆ ।
ಬೆಳ್ಳಿಯುಂಗುರದ ಬೆಳಕೀಗೆ-ಬರುವಾಗ ।
ಬೆಳ್ಳಕ್ಕಿ ಹಿಂಡು ಬೆದರ್ಯಾವೋ ||೧೩೭೩||

ಕೂಡಿದರೆ ಕೊಡ್ಬೇಕು ಕುಪ್ಪಳಿ ಹುಡುಗನ್ನ ।
ಕುಪ್ಪಳಿಸಿ ಕುದುರೆ ಹಾರ್ಸವನ ।
ಕುಪ್ಪಳಿಸಿ ಕುದುರೆ ಹಾರ್ಸವನ-ಕೂಡಿದರೆ ।
ಕೊಪ್ಪು ಬಂಗಾರ ಇಡಸ್ಯಾನು ||೩೭೪||

* * *

ಜಾಣsನ ಕೂಡ್ಯಾಡಿ ಗಂಡಿ ಕೀಳೋದ ಕಲ್ತೆ ।
ಉಬ್ಬಿನಲ್ಲಿ ಮರೆತೆ ಹವಳsವ ।
ಉಬ್ಬಿನಲ್ಲಿ ಮರೆತೆ ಹವಳs-ವಜಾಣsನ ।
ಮಗ್ಗಲಲ್ಲಿ ಮರತೆ ಚವರೀಯು ||೧೩೭೫||

* * *

ಕಾಕು ಹಾಕುತ ಬಂದ ಕಡೆಯು ಬಾಗಿಲ ಗೆಣಿಯು ।
ಉದ್ಧೂರ ಸೀಮೆ ದೊರಿ ಮsಗ ।
ಉದ್ಧೂರ ಸೀಮೆ ದೊರಿಮsಗ-ಹಾಕೀದ ।
ಕಾಕು ಬಾಗಿಲಗೆ ಕದವಾದೋ ||೧೩೭೬||

* * *

ಚಿನ್ನsದ ಚೀಲಕ್ಕ ರನ್ನsದ ಬಾಯ್ದಾರ ।
ನಿನ್ನಂಥವ್ನೊಬ್ಬ ಗೆಣೆಕಾರ ।
ನಿನ್ನಂಥವ್ನೊಬ್ಬ ಗೆಣೆಕಾರ-ನೊಂದಿಗಾಡಿ ।
ನೆನ್ನಿಂದ ನೀರು ತರಲಿಲ್ಲ ||೧೩೭೭||

* * *

ನಿನ್ನೊಂದಿಗಾಡಿ ತಾತೀಯ ನಾಮರೆತೆ ।
ಹಾಸಿಗೇಲಿ ಮರೆತೆ ಹವಳsವ ।
ಹಾಸಿಗೇಲಿ ಮರೆತೆ ಹವಳsವ-ನನಗೆಣೆಯ ।
ಮಾತಿನ್ಯಾಗ ಮರೆತೆ ಮನೆಯುವನ ||೧೩೭೮||

* * *

ಸಂಗಾತಿ ನಾನು ಸಂಜೀ ನೀರಿಗ್ಹೋದೆ ।
ಸಿಂಗ ನಲ್ಲೂರ ಹೊಸಕೇರಿ ।
ಸಿಂಗ ನಲ್ಲೂರ ಹೊಸಕೇರಿ–ಏರಿಮ್ಯಾಲೆ ।
ಸಂಗಾತಿ ಸೆರಗ ಹಿಡಿದಾನೋ ||೧೩೭೯||

ಕಬ್ಬೀನ ಹೊಲದವನೆ ಗುಬ್ಬಿಯ ಛಲದವನೆ ।
ಕೊಬ್ಬುಗಾರ ಹುಡುಗ ಕುಂಬಳ್ಳಿ ।
ಕೊಬ್ಬುಗಾರ ಹುಡುಗ ಕುಂಬಳ್ಳಿ–ಹುಡುಗನು ।
ಉಬ್ಬಿನಲಿ ಹುಲಿಗೆ ತಿವಿದಾನೋ ॥೧೩೮೦॥

* * *

ಚಳ್ಳೀನ ಹೂವಿನ್ಹಾಂಗ ಚೂಕಾಡಿ ಹುಡುಗ ।
ಥೆಳ್ಳಗಿದ್ದರೇನು ಮನೆಗಾರ ।
ಥೆಳ್ಳಗಿದ್ದರೇನು ಮನೆಗಾರ–ಹಾಕಿದ್ನಾಕು ।
ಮುಂಗಾರು ಸಿಡಿಲು ಹೊಡೆಧಂಗ ॥೧೩೮೧॥

* * *

ಹಾರೋರ ಕೇರೀಯ ಗಾರೆ ಜಗಲೀ ವ್ಯಾಲಿ ।
ಭಾರಿ ಕಿನ್ನರಿ ನುಡಿಸವನೆ ।
ಭಾರಿ ಕಿನ್ನರಿ ನುಡಿಸವನೆ--ನನಕೂಡು ।
ಬೇಗ ಬಿಟ್ಟಾವು ಚಳಿಜ್ವರಾ ॥೧೩೮೨॥

* * *

ನಿಟ್ಟೂರು ಸಂತೆ ತಟ್ಟನೆ ಹರಿದಾವು ।
ಸೆಟ್ಟಿನೀನಂದು ಬರುವಾಗ ।
ಸೆಟ್ಟಿನೀನಂದು ಬರುವಾಗ–ಕೆಂಧೂಳ ।
ದಟ್ಟೀಯ ವ್ಯಾಲಿ ಕವಿದಾವು ॥೧೩೮೩॥

* * *

ಕಾಣದೆ ಇರಲಾರೆ ಕಾಸಿ ಕಜೂರರಸವ ।
ಬಾಣ ಶೂರನ ಗೆಣಿಯಾನ ।
ಬಾಣ ಶೂರನ ಗೆಣಿಯಾನ–ಮುಖವನ್ನು ।
ಕಾಣದರ ಘಳಿಗೆ ಇರಲಾರೆ ॥೧೩೮೪॥

* * *

ದಂಡೀನ ದಾರ್ಯಾಗ ಗೊಂಡೇವ ಮಾರವಳೆ ।
ಕೊಂಡು ಕೊಂಡೇನು ಬೆಲೆ ಹೇಳೆ ।
ಕೊಂಡುಕೊಂಡೇನು ಬೆಲೆ ಹೇಳ–ಎಲೆ ಹುಡುಗಿ ।
ತಂದು ಕೊಂಡೇನು ತೆರ ಹೇಳೆ ॥೧೩೮೫॥

ಆಚೆ ಕೇರಿಯವಳೆ ಕಾಚಕ್ಕಿ ನೆರೆಯವಳೆ ।
ಕ್ಯಾಕ್ಯಾಕಿ ನನ್ನ ಕರೆಯವಳೆ ।
ಕ್ಯಾಕ್ಯಾಕಿ ನನ್ನ ಕರೆಯವಳೆ–ಎಲೆ ಹೆಣ್ಣೆ ।
ಪ್ರೀತಿ ಬಿತ್ತಲ್ಲ ನಿನವ್ಯಾಲ ॥೧೩೮೬॥

* * *

ಕೋಳಿ ಕೂಗೀತು ಕುಂಬಳದ ಹೂವೀಗೆ ।
ಬೆಟ್ಟ ಕೂಗೀತು ಬಿದಿರೀಗೆ ।
ಬೆಟ್ಟ ಕೂಗೀತು ಬಿದಿರೀಗೆ-ಎಲೆ ಬಾಲಿ ।
ನೀನು ಕೂಗೀದೆ ನನಗಾಗಿ ॥೧೩೮೭॥

* * *

ಕ್ಯಾಟೀ ತೆಲೀವ್ಯಾಲಿ ನಿಂತು ನೋಡವಳ್ಯಾರ ।
ಕುಕನೂರ ಸೀರೆ ನೆರಿಯುವಳೆ ।
ಕುಕನೂರ ಸೀರೆ ನೆರಿಯವಳೆ–ಎಲೆ ಹುಡುಗಿ ।
ಕೂತು ನೋಡೆನ್ನ ಕುಣಿತವ ॥೧೩೮೮॥

* * *

ನಡುವೀಗೆ ಒಡ್ಯಾಣ ನಡುವೀಗೆ ಚಿನ್ನದಗೊಂಡೆ ।
ನಡುಬೀದಿಯೊಳಗೆ ನಲಿಯವಳೆ ।
ನಡುಬೀದಿಯೊಳಗೆ ನಲಿಯವಳೆ-ಎಲೆಹೆಣ್ಣೆ ।
ನೋಡಿ ನಿನ್ನ ಬೆಡಗ ಬೆರಗಾದೆ ॥೧೩೮೯॥

* * *

ಪಗಡೇಯ ಬಿಟ್ಟಣ್ಣ ತಂಗೆವ್ನ ಹೇಳೀದ ।
ಕರುಬಿಟ್ಟು ಹಾಲ ಕರಕೊಳ್ಳೆ ।
ಕರುಬಿಟ್ಟು ಹಾಲಕರಕೊಳ್ಳೆ-ತಂಗೆವ್ವ ।
ತೆರವಿಲ್ದ ಹೆಣ್ಗೆ ಹೊಯ್ತೀನಿ ॥೧೩೯೦॥

* * *

ಅತ್ತಾಗಿನ ಸೀಮ್ಯೊಳು ಗುತ್ತಿ ಮಲೆನಾಡವಳು ।
ಒಪ್ಪೇನೆ ತಂಗೀ ಮನಸೀಗೆ ।
ಒಪ್ಪೇನೆ ತಂಗೀ ಮನಸೀಗೆ–ಈ ಹೆಣ್ಣ ।
ತೆರವಿಲ್ದೆ ನಾನು ತಂದೇನಿ ॥೧೩೯೧॥

ಕುಟ್ಟೇದ ಅಕ್ಕ್ಯಾಗ ಕುಸುಮುಽವ ತೆಗೆಯುವಳ ।
ನೆಲ್ಲೀ ಕಾಯೊಳಗ ಒಳನಾರ ।
ನೆಲ್ಲೀ ಕಾಯೊಳಗ ಒಳನಾರ- ತೆಗೆಯುವಳ ।
ಎಲ್ಲಿ ತಂದ್ಯೆಣ್ಣ ಚಲುವೀಯು ॥೧೩೯೨॥

* * *

ಸಂತಿಗ್ಹೋಗುಣು ಬಾರೆ ಸಣ್ಣ ನಾಮುದ ಹೆಣ್ಣೆ ।
ಸಂಜ್ಯಾದ ತಾವ ತಂಗೂನು
ಸಂಜ್ಯಾದ ತಾವ ತಂಗೂನು–ಎಲೆಹೆಣ್ಣೆ ।
ಸಣ್ಣ ನಾಮೆಲ್ಲ ಬೆವರೀತು ॥೧೩೯೩॥

ಎದು ಜೋರೆಯು ಮೇಲೆ ಯಾಲಕ್ಕಿ ತೂರವಳೆ ।
ಗಾಳಿ ಬಂದುರೆ ಬಳು ಕೋಳೆ ।
ಗಾಳಿ ಬಂದುರೆ ಬಳು ಕೋಳೆ–ಎಲೆ ಹುಡುಗಿ ।
ಸೈಕಾಣೆ ನಿನ್ನ ಗೆಣೆತಾನ ॥೧೩೯೪॥

* * *

ಹಸನಾದ ಹೆಣ್ಣೆ ಮೊಸಳೆ ತೋಟಕೆ ಬಾರೆ ।
ರಸಮೆಟ್ಟೆದೆಲೆಯು ಕೊಯಿಸೇನು ।
ರಸಮೆಟ್ಟೆದೆಲೆಯು ಕೊಯಿಸೇನು- ಎಲೆ ಹೆಣ್ಣೆ ।
ಹಸನಾದ ನಗೆಯು ನಗಿಸೇನು ॥೧೩೯೫॥

* * *

ಕಲ್ಮ್ಯಾಲೆ ಕಲ್ಹೊಡ್ಡಿ ಮಲ್ಲೀಗೆ ಕೊಯ್ಯುವಳೆ ।
ನಿಲ್ಲೆಲೆ ಹೇಳೋ ಮಾತುಂಟು ।
ನಿಲ್ಲೆಲೆ ಹೇಳೋ ಮಾತುಂಟು-ನೀಕೊಯ್ದ ।
ಸಣ್ಣಽ ಮಲ್ಲಿಗಿ ಸರಿಪಾಲು ॥೧೩೯೬॥

* * *

ಹಲಸೀನ ಮರದಾಗ ಕಲ್ಲು ಇಟ್ಟವರ್ಯಾರು ।
ಗುಂಪು ನೋಡಿಟ್ಟೆ ಗುಲಗಂಜಿ ।
ಗುಂಪು ನೋಡಿಟ್ಟೆ ಗುಲಗಂಜಿ–ಎಲೆ ಹೆಣ್ಣೆ ।
ಕೆಂಪು ನೋಡಿಟ್ಟೆ ತಿಲಕುವ ॥೧೩೯೭॥

ಬತ್ತ ಕುಟ್ಟೋಣು ಬಾರ ಇಟ್ಟೊಂಡುಣ್ಣೂನು ಬಾರ ।
ಹಿತ್ತಿಲಲ್ಲಿರುವ ಗಜನಿಂಬೆ ।
ಹಿತ್ತಿಲಲ್ಲಿರುವ ಗಜನಿಂಬೆ-ಹಣ್ಣಲ್ಲಿ ।
ಇಟ್ಟಾಡು ಬಾರೆ ಗೆಣೆಕಾರ್ತಿ ||೧೩೯೮||

* * *

ಹೊಳೆಯು ಸಾಲಿನಲ್ಲಿ ಹೊಂಗೆ ತೋಪಿನಲ್ಲಿ ।
ಆಲ ಜಾಲsದ ನೆರಳಲ್ಲಿ ।
ಆಲ ಜಾಲsದ ನೆರಳಲ್ಲಿ-ಬಾಲೆಯರು ।
ಓಡಾಡಿ ದವನ ಧರಿಸ್ಯಾರೋ ||೧೩೯೯||

* * *

ಆಯಿತ್ಯಾರ ಸಂತ್ಯಾಗ ಅಗ್ಸೇನ ತಗ್ಗೇನ ।
ಬಗ್ಗಿ ಸಣ್ಣಕ್ಕಿ ಅಳಿಯುವಳೆ ।
ಬಗ್ಗಿ ಸಣ್ಣಕ್ಕಿ ಅಳಿಯುವಳೆ-ಮಡುಲಲ್ಲಿ ।
ಹುಬ್ಬು ಹಾಕ್ಯಾವ ಚಿಗುರೆಲೆ ||೧೪೦೦||

* * *

ಮಾವೀನ ಮರದಲ್ಲಿ ಮರಳು ಗುಂಡೀ ತೋಡ್ದೆ ।
ನೀರೊಳ್ಳೇದ್ಹೆಣ್ಣೆ ಕುಡಿಯಾಕ ।
ನೀರೊಳ್ಳೇದ್ಹೆಣ್ಣೆ ಕುಡಿಯಾಕ-ಮಲ್ಲೀಗಿ ।
ಹೂವೊಳ್ಳೇದ್ಹೆಣ್ಣೆ ಮುಡಿಯಾಕ ||೧೪೦೧||

* * *

ಸೆರಗs ಬಿಡುಗೆಳತಿ ಸ್ಯಾವಂತಿಗಿ ಉದಿರ್ಯಾವು ।
ಅಚ್ಚs ಮಲ್ಲಿಗೀ ವನರಾಜಾ ।
ಅಚ್ಚs ಮಲ್ಲೀಗೀ ವನರಾಜಾ-ಉದಿರ್ಯಾವು ।
ಮೆಚ್ಚಿ ಬಂದ್ಹೆಣ್ಣೆ ಬಿಡು ಸೆರಗ ||೧೪೦೨||

* * *

ಯಾರ ಮಗಳವ್ವ ನೀ ಎರಳಿ ನೋಟದ ಗೊಂಬಿ ।
ಸುರುಳಿಗೂದಲ ಸುಳಿಹಲ್ಲು ।
ಸುರುಳಿಗೂದಲ ಸುಳಿಹಲ್ಲು-ನನಗೆಳತಿ ।
ಸುಗುಣಿ ನೀನ್ಯಾರ ಮಗಳವ್ವ ||೧೪೦೩||

ಅಡ್ಡ ಗುಡ್ಡsದ ಚಂದ ದೊಡ್ಡಾರಳಿ ಮರಚಂದ |
ಗಿಡ್ಡಿನಿನ ಕೈಗೆ ಬಳಿ ಚಂದ |
ಗಿಡ್ಡಿನಿನ ಕೈಗೆ ಬಳಿ ಚಂದ-ಎಲೆ ಹೆಣ್ಣೆ |
ಒಡ್ಯಾಣ ಚಂದ ನಡುವೀಗೆ ||೧೪೦೪||

* * *

ಅಡಿಕೆ ತೋಟಕೆ ಗಿಲ್ಕಿ ಮಂಚದ ಬೀಗ |
ನಾನುಂಟು ಅಡಕೆದಸಿಯಾಗಿ |
ನಾನುಂಟು ಅಡಕೆದಸಿಯಾಗಿ--ಎಲೆ ಬಾಲೆ |
ನೀನುಂಟು ಬಾಳೆ ಸುಳಿಯಾಗಿ ||೧೪೦೫||

* * *

ಬಣ್ಣsದ ಶ್ಯಾಲಿನವಳೆ ಬೆಳ್ಳೀಯ ಬಳೆಯವಳೆ |
ದುಂಡು ಮಲ್ಲಿಗೆ ಮುಡಿಯುವಳೆ |
ದುಂಡು ಮಲ್ಲಿಗೆ ಮುಡಿಯುವಳೆ--ಎಲೆ ಹುಡುಗಿ |
ನಿನ್ನಂಥ ಬಾಲಿ ನನಗಿಲ್ವೆ ||೧೪೦೬||

* * *

ಮಲೆಯಾಳದ ಹೆಣ್ಣೆ ಮಂಡೆಗೆ ತೆಂಗಿನೆಣ್ಣೆ |
ಕೊಂಬು ಬಾಚಣಿಗೆ ಮುಡುಲಲ್ಲಿ |
ಕೊಂಬು ಬಾಚಣಿಗೆ ಮುಡುಲಲ್ಲಿ--ಕಟಗೊಂಡು |
ಮಲಿಯಾಳದ ಮಾತ ತಿಳಿದ್ಹೇಳಿ ||೧೪೦೭||

ಹಾಡು ಹಾಡೋದ ಬಲ್ಲಿ ಹಾಡು ಮಗುಚೋದ ಬಲ್ಲಿ |
ಕಾಡವರೆ ಕಾಯಿ ಕೊಯ್‌ಬಲ್ಲಿ |
ಕಾಡವರೆ ಕಾಯಿ ಕೊಯ್‌ಬಲ್ಲಿ–ನಿಮ್ಮೂರ |
ಕೋರ‍್ಹುಡುಗರ ನಾವು ತರಬಲ್ಲೊ ||೧೪೦೮||

* * *

ಕನಸಿನಲಿ ಕಂಡೆ ಮನಸಿಗೊಪ್ಪಿದವನ |
ಮೆಣಸಿನ ಕಾಯಿ ಗುಣದವನ |
ಮೆಣಸಿನ ಕಾಯಿ ಗುಣದವನ--ನಾಕಂಡು |
ಮಳಸಿಗೊಪ್ಪಿಸಿದರೆ ನಿಲುಭಾರ ||೧೪೦೯||

ಮಲೆಯಾಳಕ್ಹೋಗ್ತೀನಿ ಹೂಕೊಡು ಮಾಲರಸಿ ।
ನಮ್ಮ ನಾಡೆಲ್ಲ ಪರನಾಡು ।
ನಮ್ಮ ನಾಡೆಲ್ಲ ಪರನಾಡು--ಹೋಗ್ತೀನಿ ।
ಹೂ ಕೊಡು ತಾಯಿ ಬಲದಲ್ಲಿ ॥೧೩೧೦॥

* * *

ಸಣ್ಣ ನಾಮದ ರಂಗ ಸುಣ್ಣಕ್ಕ ಬರತಾನೆ ।
ಸನ್ನೆ ಬಲ್ಡಣ್ಣೆ ಒಳಗೀರೆ ।
ಸನ್ನೆ ಬಲ್ಡಣ್ಣೆ ಒಳಗೀರೆ--ರಂಗಯ್ಯ ।
ಸುಣ್ಣಕ್ಕೆ ಬರುವ ಬಗೆ ಬ್ಯಾರೆ ॥೧೩೧೧॥

* * *

ಬಾಳೆ ಹಣ್ಣಿಗೆ ಬಂದೆ ಜೇನುತುಪ್ಪಕೆ ಬಂದೆ ।
ಬಾಯಾರಿ ಬಂದೆ ನಿನ ಮನಿಗೆ ।
ಬಾಯಾರಿ ಬಂದೆ ನಿನ ಮನಿಗೆ-ಎಲೆ ಹೆಣ್ಣೆ ।
ಬೇಗ ತೀರ್ಥವ ಕೊಡಬಾರೆ ॥೧೩೧೨॥

* * *

ಹತ್ತೂರು ತಿರುಗಿ ಎತ್ತು ಕೊಳ್ಳೋಕೆ ಬಂದೆ ।
ಶಕ್ರನಿಲ್ಲೀಗೆ ತಳುಗೀದ ।
ಶಕ್ರ ನಿಲ್ಲೀಗೆ ತಳುಗೀದ-ಎಲೆಹೆಣ್ಣೆ ।
ತಾವೆಲ್ಲಿ ತೋರೆ ತಂಗಾಕ ॥೧೩೧೩॥

* * *

ನಿಂಬೆಹಣ್ಣಿಗೆ ಬಂದೆ ತುಂಬೆ ಹೂವಿಗೆ ಬಂದೆ ।
ಹಂಬಲಿಸಿ ಬಂದೆ ನಿನ ಮನಿಗೆ ।
ಹಂಬಲಿಸಿ ಬಂದೆ ನಿನ ಮನಿಗೆ-ಎಲೆಹೆಣ್ಣೆ ।
ತಾಣೆಲ್ಲಿ ತೋರೆ ತಂಗಾಕ ॥೧೩೧೪॥

* * *

ಕುಂಬಾರ ಓಣ್ಯಾಗ ಕುಂಬಲಕಾಯಿ ಗಿಡಹುಟ್ಟಿ ।
ಕುಂಬಾರ ಹುಡುಗಿ ಬಲು ಚಲುವಿ ।
ಕುಂಬಾರ ಹುಡುಗಿ ಬಲು ಚಲುವಿ-ಆದರ ।
ಗುಂಬ ತಟ್ಟೂದ ಬಿಡವಳ್ಳು ॥೧೩೧೫॥

ಕೆಂಪನ್ನ ಹೆಣ್ಣ ಕೆರೆಗುಂಟೆ ಬಾರದಿರು ।
ಪಂಥ ಎತ್ತ್ಯಾರ ದೊರೆಮಕ್ಳು ।
ಪಂಥ ಎತ್ತ್ಯಾರ ದೊರೆಮಕ್ಳು-ಎಲೆ ಹೆಣ್ಣೆ ।
ಸಂಪನ್ನರ್ಹೆಣ್ಣ ಒಳಗೀರು ||೧೪೧೬||

* *

ಹೆಬ್ಬೊಬ್ಬೆ ಮರೆಯಲ್ಲಿ ಬಗ್ಗಿ ನೋಡವಳ್ಯಾರ ।
ಗುಬ್ಬಕ್ಕಿಯಂಥ ಮೊಲೆಯವಳೆ ।
ಗುಬ್ಬಕ್ಕಿಯಂಥ ಮೊಲೆಯವಳ್ನೆ--ನಾ ಕಂಡು ।
ಗೊಬ್ರಾ ಹೇರಾಕ ಮನಸಿಲ್ಲ ||೧೬೧೭||

* * *

ಹೆಬ್ಬೊಬ್ಬೆ ಗುಂಟ ತಬ್ಲಾಡವಳ್ಯಾರ ।
ತಬ್ಲಾಡು ನಿನಗ ತರವಲ್ಲ ।
ತಬ್ಲಾಡು ನಿನಗ ತರವಲ್ಲ-ಎಲೆ ಹೆಣ್ಣೆ ।
ತಬ್ಯಾಡು ಬಾರೆ ಗುಡ್ಡಲ್ಲಿ ||೧೪೧೮||

* * *

ಪಿಲ್ಲಿ ಕಾಲಿನವಳೆ ಪಿರಿಯ ಪಟ್ಟಣದವಳೆ ।
ಕಲ್ಲಮ್ಯಾಲ ಕಾಲ್ತೊಳಿಯುವಳೆ ।
ಕಲ್ಲಮ್ಯಾಲ ಕಾಲ್ತೊಳಿಯುವಳೆ-ಎಲೆ ಹೆಣ್ಣೆ ।
ಪಿಲ್ಲೀಯ ಸರಕೆ ಜೆಲೆಹೇಳೆ ||೧೪೧೯||

* * *

ಉಪ್ಪಾರ ಹೆಣ್ಣೆ ನೀ ತುರುಬು ನೆಟ್ಟಗಮಾಡು ।
ಗಾಡಿಕಾರಣ್ಣ ಮಣೆಗಾರ ।
ಗಾಡಿಕಾರಣ್ಣ ಮಣೆಗಾರ-ಬರ್ತೀನಿ ।
ಜಾಡಿ ಜಮ್ಖಾನ ಒದರ್ಹಾಸು । ||೧೪೨೦||

* * *

ಗಂಡsನ ಮನ್ಯಾಗಿರುವ ಕಂಡೀರೇ ಬಾಲೀಯ ।
ದಂಡೆ ಮಾರುದ್ದ ಸೆರಗುಂಟು ।
ದಂಡೆ ಮಾರುದ್ದ ಸೆರಗಂಟು-ಹೊದುಕೊಂಡು ।
ಗಿಂಡೀಲೆ ಫಾಲು ಕರಿಯವಳ ||೧೪೨೧||

ಆಕಳಿಕೆ ಹೆಚ್ಚಾತು ತೂಕಡಿಕೆ ಘನವಾಯ್ತು ।
ಯಾವ ಗೆಣಿಕಾರ್ತಿ ನೆನಿಸ್ಯಾಳ ।
ಯಾವ ಗೆಣಿಕಾರ್ತಿ ನೆನಿಸ್ಯಾಳ–ಆಚೆಕೇರಿ ।
ಪಾರಿವಾಳದ್ಹಟ್ಟಿ ಮನೆಯವಳು ॥೧೪೨೨॥

* * *

ಆತ ಭೂವಾದ ಮರ ಭೂತ ಹೊನ್ನೇಮರ ।
ರಾತಾಗಿ ಬೆಳೆದ ಮೆಣಸೀಯು ।
ರಾತಾಗಿ ಬೆಳೆದ ಮೆಣಸೀಯ–ಮೆಳೆಯಲ್ಲಿ ।
ಮೋಸ ಮಾಡಿದಳು ಗೆಣೆಕಾರ್ತಿ ॥೧೪೨೩॥

* * *

ನಾಗರು ಮರಿಯಾಗೆ ನಾಕಲ್ಲು ಸುಲಿಯುವಳೆ ।
ನಾಕಂಡ್ರೆ ನಿನ್ನ ಬಿಡವಲ್ಲೆ ।
ನಾಕಂಡ್ರೆ ನಿನ್ನ ಬಿಡವಲ್ಲೆ–ಮೇಲ್ಕೋಟೆ ।
ಸಣ್ಣನಾಮದ ಚೆಲುವೀಯು ॥೧೪೨೪॥

* * *

ಹಾಲಂಡೆ ತಕ್ಕೊಂಡು ಹಾಲ ಕರೆಯಲು ಹೋದೆ ।
ಯಾಕೆ ಸಿರಿ ಕಾಲಿಯೊರಗಿದೆ ।
ಯಾಕೆ ಸಿರಿಕಾಲಿಯೊರಗಿದೆ–ನಿನ್ನೊಡೆಯರು ।
ಹಾಲಿಲ್ಲದುಣ್ಣರು ಹಗಲೂಟ ॥೧೪೨೫॥

* * *

ದಂಡೀನ ಹಾದೀಲಿ ದನಬರುವ ಓಣೀಲಿ ।
ಎಲೆಗೆ ನೀರುಂಟೆ ಎಲೆಜಾಣೆ ।
ಎಲೆಗೆ ನೀರುಂಟೆ ಎಲೆಜಾಣೆ–ನಿನ್‌ಮಂಡೆ ।
ಎಳೆ ನಾಗರ ತೆಕ್ಕೆ ಮುಡಿದ್ಹಂಗೆ ॥೧೪೨೬॥



## ಗೆಳತಿ

ಗೆಳತಿ ಮಾಡಿದ ಕುಬಸಾ ತಿಳಿನೀರಾಗೊಗದೇನ
ಬಿಳಿ ಉಸುಬಿನ್ಯಾಗ ಹರಿವೇನ ।
ಬಿಳಿ ಉಸುಬಿನ್ಯಾಗ ಹರಿವೇನ–ಮಲ್ಲಾಡ ।
ಗಿಣಿ ಬಂದು ಮಗ್ಗಿ ತಗದಾವ ||೧೪೨೭|

* * *

ಮನಿಯ ಮುಂದಿನ ಗೆಳತಿ ದನಿಯ ಕೊಡಿಸಬಾರ ।
ದನಿ ಸುದ್ದ ನಿನ್ನ ಗುಣ ಸುದ್ದ ।
ದನಿ ಸುದ್ದ ನಿನ್ನ ಗುಣ ಸುದ್ದ–ಗೆಳತೆವ್ವ ।
ಗುಣಕ ಕಟ್ಟೇನಿ ಗೆಳೆತನ ||೧೪೨೮|

* * *

ಎಳ್ಳು ಹೂವಿನ ಸೀರಿ ಕೊರಳಾಗ ಚಿತ್ತಾಕ ।
ಇರುಳ ಬಂದೆತ್ತ ಇಳಿದಾಳ ।
ಇರುಳ ಬಂದೆತ್ತ ಇಳಿದಾಳ–ನನಗೆಳತಿ ।
ಅರಳೀಲಿ ಮಗನ ಹೆಸರೇನ ||೧೪೨೯||

* * *

ಮೂಗುತಿ ಮುಂಭಾರ ತುರುಬೀನ ಹಿಂಭಾರ ।
ಸೇರೀನ ಒಂಕಿ ಕೈಭಾರ ।
ಸೇರೀನ ಒಂಕಿ ಕೈಭಾರ–ನನಗೆಳತಿ ।
ನಾ ಕೊಟ್ಟ ಸೀರಿ ನಿಲಿಭಾರ ||೧೪೩೦||

* * *

ಗೆಳತೀಯ ಕೂದಲು ಚೊಗಚೀಯ ಕಾಯ್ಹಾಂಗ ।
ನಿಗುಚಿ ಬೈತಲಿ ತೆಗದಾಳ ।
ನಿಗುಚಿ ಬೈತಲಿ ತೆಗದಾಳ–ನನಗೆಳತಿ ।
ಗೆಳತ್ಯಾರ ಬಳಗದಾಗ ಚಲುವಿ ||೧೪೩೧||

ಮಟ ಮಟ ಮಧ್ಯಾಣ ತಿಟಿ ತಿಟಿ ಕುಪ್ಪಸ ।
ವರತ್ಯಾನ ನೀರು ಒನ ಒನದು ।
ವರತ್ಯಾನ ನೀರು ಒನ ಒನದು-ತುಂಬೂವ ।
ದ್ರೌಪದಿ ಚೆಲುವಿ ನನಗೆಳತಿ ||೧೪೩೨||

* * *

ಸೇದು ಭಾವೀಮ್ಯಾಲ ಸೀರಿ ಸೆಳೆಯುವರ್‍ಯಾರ ।
ಕಾಡೀಗಿ ಗಣ್ಣ ನಡು ಸಣ್ಣ ।
ಕಾಡೀಗಿ ಗಣ್ಣ ನಡು ಸಣ್ಣ-ನನಗೆಳತಿ ।
ರಾಯ ಕರದಾನ ಮನಿಗ್ಹೋಗ ||೧೪೩೩||

* * *

ಗೆಣತಿ ಹಡದಾಳಂತ ನಗತ ಬಾಗೀಣೊಯ್ದು ।
ಜರತಾರಿಯಂಗಿ ಮುಯ್ಯೊಯ್ದು ।
ಜರತಾರಿಯಂಗಿ ಮುಯ್ಯೊಯ್ದು-ಗೆಳತೆವ್ವ ।
ಜನಕೊಪ್ಪು ಮಗನ ಹಡದಾಳ ||೧೪೩೪||

* * *

ಪಟ್ಟಣಕ ಬಂದಾವ ಬಟ್ಟ ಬಾರಿಯ ಹಣ್ಣ ।
ಊರಿಗ್ಹೋಗಣ್ಣ ಇವು ಒಯ್ಯೋ ।
ಊರಿಗ್ಹೋಗಣ್ಣ ಇವು ಒಯ್ಯೋ-ಆ ಊರ ।
ಕಟ್ಟಿಮನಿ ಗೆಳತಿ ಬಸುರ್‍ಹಾಳ ||೧೪೩೫||

* * *

ನಾನು ನನ್ಗೆಳತಿ ಕೂಡಿ ನೀರೀಗಿ ಹೋದರ ।
ಕುಲವs ಕೇಳ್ಯಾರ ಬಹು ಮಂದಿ ।
ಕುಲವs ಕೇಳ್ಯಾರ ಬಹು ಮಂದಿ-ಕೇಳಿದರ ।
ಕುಲವೆರಡು ನಮ್ಮ ಮನವೊಂದು ||೧೪೩೬||

* * *

ಯಾರ ಮಗಳವ್ವ ನೀ ಎರಳಿ ನೋಟದ ಗೊಂಬಿ ।
ಸುರುಳಿ ಗೂದಲ ಸುಳಿಹಲ್ಲ ।
ಸುರುಳಿ ಗೂದಲ ಸುಲಿಹಲ್ಲ-ನನಗೆಳತಿ ।
ಸುಗುಣಿ ನೀನ್ಯಾರ ಮಗಳವ್ವ ||೧೪೩೭||

ದೊಡ್ಡವರ ಮಗಳವ್ವ ಎದ್ದೇನ ಗೆಳತೆವ್ವ
ತಿದ್ದಾತ ಬಳಿಯ ತಿರುವೂತ ।
ತಿದ್ದಾತ ಬಳಿಯ ತಿರುವೂತ–ನಿಮ್ಮತ್ತಿ ।
ಮದ್ದಾನೆ ಎಂದು ಕರೆದಾಳ ॥೧೪೩೮॥

* * *

ನೀರಿಗ್ಹೋಗುವ ಜಾಣಿ ನಿಲ್ಲ ನಾ ಬರತೇನಿ ।
ನಿನ್ನಾಣಿ ನಿನ್ನ ಕೊಡದಾಣಿ ।
ನಿನ್ನಾಣಿ ನಿನ್ನ ಕೊಡದಾಣಿ–ಕೈಯಾನ ।
ಬಳಿಯಾಣಿ ನೀರ ಹೊಳಿಯಾಣಿ ॥೧೪೩೯॥

ನಾರಿ ಕಣ್ಣಿನ ನೀರ ಬಾರಿ ಬೀಜsದ್ಹಾಂಗ ।
ಬೋರ್ಯಾಡತಾವ ಎದಿಮ್ಯಾಲ ।
ಬೋರ್ಯಾಡತಾವ ಎದಿಮ್ಯಾಲ–ನನಗೆಳತಿ ।
ದೂರಿಲ್ಲ ಹೋಗ ನಿನ ತವರ ॥೧೪೪೦॥

* * *

ಎಳ್ಳು ಹೂವಿನ ಸೀರಿ ಬೆಳ್ಳಿ ಕಾಲುಂಗsರ ।
ಹಳ್ಳsದ ನೀರು ತರತಾಳ ।
ಹಳ್ಳsದ ನೀರು ತರತಾಳ–ನನಗೆಳತಿ ।
ಹಳ್ಳಿ ಗೌಡsರ ಹಿರಿಮಗಳ ॥೧೪೪೧॥

* * *

ಕೂಡೀದ ಕುಡಿಹುಬ್ಬ ತೀಡೀದ ಬೈತsಲ ।
ಕಾಡೀಗಿಗಣ್ಣ ರಸಗೆಂಪ ।
ಕಾಡೀಗಿಗಣ್ಣ ರಸಗೆಂಪ--ನನಗೆಳತಿ ।
ಹೊಳಿಯ ಹಾದ್ಯಾಗ ಕೂಡ್ಯಾಳ ॥೧೪೪೨॥

ಹೊಳಿಸಾಲ ಹರದೀಗಿ ಒಳತುಟಿಗಿ ಜಾಜೀಲಿ ।
ತಾಂಬರದ ಕೊಡವು ಬಗಲಾಗ ।
ತಾಂಬರದ ಕೊಡವು ಬಗಲಾಗ–ನನಗೆಳತಿ ।
ಸಾಕೇನ ಗರತಿ--ಸವಿನೀರ ॥೧೪೪೩॥

ಸಂಗಾತಿ ಬಾರೆ ಸಾದು ನಿಂಬೆ ಹಣ್ಣೆ ।
ಉಂಗೂರ ಬಾರ ಬೆರಳೀಗೆ ।
ಉಂಗೂರ ಬಾರ ಬೆರಳೀಗೆ–ತೋಟದ ।
ಹೊಂಬಾಳೆ ಬಾರ ಕಳಶಕ್ಕೆ ॥೧೪೪೪॥

* * *

ಆಚೀಕೇರಿಲಿ ಅಲ್ಲೊಬ್ಬ ಸಂಗಾತಿ ।
ಮಾತಾಡೇನೆಂದರ ಮನಿದೂರ ।
ಮಾತಾಡೇನೆಂದರ ಮನಿದೂರ–ಸಂಗಾತಿ ।
ಸಂಜೀಗೆ ಬಾ ಗೆಳತಿ ಕನಸೀಗೆ ॥೧೪೪೫॥

* * *

ಅಂಗಡ್ಯಂಗಡಿಗಿಂತ ಗಂಧದಂಗಡಿ ಚಂದ ।
ಬಂಗಾರದಂತ ಬಳೆ ಚಂದ ।
ಬಂಗಾರದಂತ ಬಳೆಚಂದ–ಆದರೂ ।
ಗೆಳತಿ ಕರಿಯೂವ ದನಿಚಂದ ॥೧೪೪೬॥

* * *

ಸಂಗಾತಿ ಸಂಪನ್ನೆ ಹೆಸರು ನಾಗರ ಕನ್ನೆ ।
ಕುಶಲ ನೋಡವಳ ಕುಡಿಹುಬ್ಬ ।
ಕುಶಲ ನೋಡವಳ ಕುಡಿಹುಬ್ಬ–ಕಣ್ಣಿನಭಾವ ।
ಹೊಸಮನಿಗೆ ರೇಖೆ ತೆಗೆದಂತೆ ॥೧೪೪೭॥

* * *

ನನ್ನ ಸಂಗಾತಿ ನನಕಿಂತ ಗುಣವಂತಿ ।
ಚನ್ನ ಪಟ್ಟಣದ ಸೆಟ್ಟಾತಿ ।
ಚನ್ನ ಪಟ್ಟಣದ ಸೆಟ್ಟಾತಿ–ಸಂಗಾತಿ ।
ನನಕಂಡು ಕುದುರೆ ಇಳಿದಾಳ ॥೧೪೪೮॥

* * *

ಸಂಗಾತೀ ಗಂಡನ್ನ ಕಂಡೆನೇರಿಯ ಮ್ಯಾಲ ।
ನಿಂಬೆ ಮಾದಳದ ಹಿರಿಯುವಳ ।
ನಿಂಬೆ ಮಾದವಳ ಹಿರಿಯುವಳ–ಗಂಡನ್ನ ।
ಕಂಡೆ ತಾವರಿಯ ಕೊಳದಲಿ ॥೧೪೪೯॥

ನನ್ನ ಸಂಗಾತಿ ನನಗಿಂತ ಚೆಲುಗಾತಿ ।
ಪುಣ್ಯವಂತ ಗಾತ ಪುರುಷಽರ ।
ಪುಣ್ಯವಂತ ಗಾತ ಪುರುಷಽರ-ಮಂಚದ್ಮ್ಯಾಲಿ ।
ನನ್ನ ಚಿಂತ್ಯಾಗ ಮಲಿಗ್ಯಾಳ ||೧೪೫೦||

* * *

ಸಂಗಾತಿ ಹೆಣ್ಣು ಜಂಬು ನೇರಳೆಹಣ್ಣು
ಮುಂಗೈಯ ಹಿಡಿದು ನಗಿಸವಳು ।
ಮುಂಗೈಯ ಹಿಡಿದು ನಗಿಸವಳು-ಮುಖಭಾವ ।
ಮುಂಗಾರಿ ಮಿಂಚು ಹೊಳಿಧಾಂಗ ||೧೪೫೧||

* * *

ಮಟಮಟ ಮದ್ಯಾಣ ತಿಟಿತಿಟಿ ಕುಪ್ಪಸ ।
ವರತ್ಯಾನ ನೀರು ಒನಒನದು ।
ವರತ್ಯಾನ ನೀರು ಒನಒನದು-ತುಂಬೂವ ।
ದ್ರೌಪದಿ ಚಲುವೆ ನನ ಗೆಳತಿ ||೧೪೫೨||

* * *

ಎಳ್ಳು ಹೂವಿನ ಸೀರೆ ಬೆಳ್ಳಿ ಕಾಲುಂಗಽರ ।
ಹಳ್ಳಽದ ನೀರು ತರತಾಳ ।
ಹಳ್ಳಽದ ನೀರು ತರತಾಳ-ನನಗೆಳತಿ ।
ಹಳ್ಳಿ ಗೌಡಽರ ಹಿರಿ ಮಗಳು ||೧೪೫೩||



## ಹರಕೆ

ಸಂತೋಷವಾಗಲಿ ಸಾಲುದಂಡಿಗೆ ಬರಲಿ ।
ಕಂಚಿನಡ್ಡಣಿಗೆ ಎರಡಾಗಲಿ ।
ಕಂಚಿನಡ್ಡಣಿಗೆ ಎರಡಾಗಲಿ-ಅಣ್ಣಯ್ಯ ।
ಪಂಕ್ತೀಲಿ ಉಣುವಂಥ ಮಗನಾಗಲಿ ||೧೪೫೪||

ಒಂದು ಸಾವಿರವಾಗಲಿ ನಂದನ ಬನವಾಗಲಿ ।
ತಂಗಿಗೆ ತವರು ಮನೆಯಾಗಲಿ ।
ತಂಗಿಗೆ ತವರು ಮನೆಯಾಗಲಿ--ಅಣ್ಣಯ್ಯ ।
ಒಂದು ಸಾವಿರಕೆ ಧೊರೆಯಾಗು ॥೧೪೫೫॥

* * *

ಆರು ಸಾವಿರವಾಗಲಿ ಬಾಳೆಯ ಬನವಾಗಲಿ ।
ಭಾವೇರಿಗೆ ತವರು ಮನೆಯಾಗಲಿ ।
ಭಾವೇರಿಗೆ ತವರು ಮನೆಯಾಗಲಿ--ಅಣ್ಣಯ್ಯ ।
ಆರು ಸಾವಿರಕೆ ಅರಸಾಗು ॥೧೪೫೬॥

ಬಾಳೆ ಪಟ್ಟೆಯ ಬಣ್ಣ ಸೀಗೆಮೊಗ್ಗಿನ ಕುಬುಸ ।
ಬೆಳಗಾಂವಿ ಚರಿಗಿ ಬಲಗೈಲೆ ।
ಬೆಳಗಾಂವಿ ಚರಿಗಿ ಬಲಗೈಲಿ-ಹಿಡಕೊಂಡು ।
ನಾಗರಕ ತನಿಯ ಎರದಾಳ ॥೧೪೫೭॥

ಹಸುಮಗಳೆ ನೀಲವ್ವ ಬಸವಗ ಶರಣೆನ್ನು ।
ನಸಲಿ ಮಾರಗದ ಒಡಿಯಾಗ ।
ನಸಲಿ ಮಾರಗದ ಒಡಿಯಾಗ-ಶರಣುಮಾಡಿ ।
ಹಸಗಿ ಬಾಗನ್ನಿ ಗರುಡsವ ॥೧೪೫೮॥

* * *

ನಾಗರಕೆ ತನಿಯs ಏನೆಂದು ಎರೆದಾಳ ।
ನಾಗಪ್ಪನಂಥ ಮಗಬೇಕು ।
ನಾಗಪ್ಪನಂಥ ಮಗಬೇಕು-ನಮ್ಮನಿಗೆ ।
ನಾಗಕನ್ಯೆಯಂಥ ಸೊಸೆಬೇಕು ॥೧೪೫೯॥

* * *

ಹಕ್ಕಿ ಹಸಿಗೊಯ್ಯ ಕೋಗಿಲ ಪತ್ತಲೊಯ್ಯ ।
ಅಕ್ಕ ನಾಗವ್ವ ಕತಿ ನಡಿಸ ।
ಅಕ್ಕ ನಾಗವ್ವ ಕತಿನಡಿಸ--ಈ ಸೋಬಾನ ।
ನಾಗನೂರವರ ಮನಿಯಾಗ ॥೧೪೬೦॥

ಮಾಳಿಗೇ ಮನಿಬೇಕು ಜೋಳೀಗೆ ಹಣಬೇಕು ।
ಜಾನಕೀಯಂಥ ಸೊಸಿಬೇಕು ।
ಜಾನಕೀಯಂಥ ಸೊಸಿಬೇಕು-ನಮಗೀಗ ।
ರಾಮದೇವರಂಥ ಮಗಬೇಕು ॥೧೪೬೧॥

* * *

ಹಂದರದ ವ್ಯಾಗೆಲ್ಲ ಜೋಡೆರಡು ಗಿಣಿಕೂತು ।
ಕಂಗನಲ್ಲಾಡಿ ನಗಶಾವ ।
ಕಂಗನಲ್ಲಾಡಿ ನಗತಾವ-ಅವು ಮಾತಾಡ್ಯಾವ ।
ತಂಗಿ ಮೈದುನಗ ವರನೆಂದ ॥೧೪೬೨॥

* * *

ಇಟ್ಟು ಹಾಡನೆಲ್ಲ ಒತ್ತಿ ಭರಣಿಯ ತುಂಬಿ ।
ವಜ್ಜರದ ಕೀಲಿ ಜಡದೇವ ।
ವಜ್ಜರದ ಕೀಲಿ ಜಡದೇವ-ಈನಮ್ ಹಾಡ ।
ಸೋಬನಿದ್ದಲ್ಲಿ ತಗದೇವ ॥೧೪೬೩॥

* * *

ಮಕ್ಕಳು ಮನೆತುಂಬ ಕೊಪ್ಪರಿ ಕಿವಿತುಂಬ ।
ಲಕ್ಷಣದ ತಾಳಿ ಕೊರಳ್ತುಂಬ ।
ಲಕ್ಷಣದ ತಾಳಿ ಕೊರಳ್ತುಂಬ-ಉಳ್ಳಂಥ ।
ಮುತ್ತೈದಿ ದಯದಿ ಸುಖಿಯಾಗು ॥೧೪೬೪॥



ಮಕ್ಕಳ ತಾಯವ್ವ ಕೆಟ್ಟನೆನ್ನಲು ಬೇಡ ।
ಪಕ್ಷಿ ಜಾತ್ಯಾಗ ಗರುಡನು ।
ಪಕ್ಷಿ ಜಾತ್ಯಾಗ ಗರುಡನು-ಹುಟ್ಟೂತ ।
ತನ್ ತಾಯೀ ಸೆರೆಯ ಬಿಡಿಸ್ಯಾನ ॥೧೪೬೫॥

ಹಣೆಯ ಬರಹದ ಗೆರೆಯು ಹರೆದರು ತಪ್ಪsದು ।
ಹರಿಚಂದ್ರರಾಯ ಸುಡುಗಾಡ ।
ಹರಿಚಂದ್ರರಾಯ ಸುಡುಗಾಡ-ಸೇರಿದರ ।
ಇದಿ ಅವನ ಬೆನ್ನ ಬಿಡಲಿಲ್ಲ ||೧೪೬೬||

* * *

ಜನಕ ರಾಯನ ಮಗಳು ಬನಕ ತೊಟ್ಟಿಲಕಟ್ಟಿ ।
ಲವ-ಕುಶರನ್ನು ತೂಗ್ಯಾಳ ।
ಲವ-ಕುಶರನ್ನು ತೂಗ್ಯಾಳ-ಸೀತಾದೇವಿ ।
ನಗುತ ವನವಾಸ ಕಳೆದಾಳ ||೧೪೬೭||

* * *

ಅಡವಿ ಆರ್‍ಯಾಣದಾಗ ಹಡೆದಾಳ ಸೀತವ್ವ ।
ತೊಡಿಯ ತೊಳಿಯಾಕ ನೀರಿಲ್ಲ ।
ತೊಡಿಯ ತೊಳಿಯಾಕ ನೀರಿಲ್ಲ--ಹನುಮಂತ ।
ಸೇತ ಗಟ್ಟ್ಯಾನ ಸಮುದ್‌ರಕ ||೧೪೬೮||

* *

ಸೀತಾದೇವಿಯಷ್ಟು ಸಿರಿಯ ನುಂಡವರಿಲ್ಲ ।
ದ್ರೌಪದಿಯಷ್ಟು ಹರಲೀಯ ।
ದ್ರೌಪದಿಯಷ್ಟು ಹರಲೀಯ-ಹೊತ್ತವರು ।
ಈ ಲೋಕದಾಗ ಯಾರಿಲ್ಲ ||೧೪೬೯||

* * *

ಸೀತಾನ ಅಭಿಮಾನ ಬಾಲ ಹನುಮನು ಕಾಯ್ದ ।
ದ್ರೌಪದಿಯ ಮಾನ ಹರಿ ಕಾಯ್ದ ।
ದ್ರೌಪದಿಯ ಮಾನ ಹರಿಕಾಯ್ದ--ಪದ್ಮವ್ವ ।
ನೀಕಾಯೇ ನನ್ನ ಅಭಿಮಾನ ||೧೪೭೦||

*

ದ್ರೌಪದಿಯ ಸೀರಿ ದುಸ್ಸಾಸ ಸೆಳವಾಗ ।
ವಿಸವಾಸದಣ್ಣsಗ ನೆನದಾಳ ।
ವಿಸವಾಸದಣ್ಣsಗ ನೆನದಾಳ-ಶ್ರೀಕೃಷ್ಣ ।
ಮ್ಯಾಯದ ಸೀರಿ ಮರಿ ಮಾಡಿ ||೧೪೭೧||

ರಾವಣನ ರಥದಾಗ ಅಡ್ಡ ಹಾರವನ್ಯಾರ |
ಅಂಜನಾದೇವಿ ಮಗ ಹನುಮ |
ಅಂಜನಾದೇವಿ ಮಗ ಹನುಮ--ಬಿಟ್ಬಾಣ |
ದಂಡ ಸುತ್ಹಾಕಿ ಬಡದಾವ ||೧೪೭೨||

* * *

ರಾಮ ಬಿಟ್ಟಾ ಬಾಣ ರಾಜ್ಯಕ ಮುಟ್ಟ್ಯಾವ |
ರಾಮ ಸೀತೆಯರು ವನವಾಸ |
ರಾಮ ಸೀತೆಯರು ವನವಾಸ--ಕ್ಹೊಂಟರ |
ಹುಡುಕೂತ ಹೊಂಟ ಹನುಮಂತ ||೧೪೭೩||

ಆರು ಕಾಲಿನ ರಥವ ಏರಿ ಹೊಂಟವನ್ಯಾರ |
ಸೂರ್ಯನಂಥಾ ಅರ್ಜುನ |
ಸೂರ್ಯನಂಥಾ ಅರ್ಜುನ--ನ ಕೈಯಾನ |
ಸಾರಥ್ಯಾಗ್ಯಾನ ಶ್ರೀಕೃಷ್ಣ ||೧೪೭೪||

## ಯಮರಾಯ

ಜವರಾಯ ಬಂದರೆ ಬರಿ ಕೈಲಿ ಬರಲಿಲ್ಲ |
ಕುಡುಗೋಲು ಕೊಡಲ್ಯೊಂದು ಹೆಗಲೇರಿ ||
ಒಳ್ಳೊಳ್ಳೆ ಮರಗಳ ಕಡಿಯಲು ಬಂದ |
ಫಲಬಿಟ್ಟ ಮರಗಳ ಕಡಿಯಲು ಬಂದ ||೧೪೭೫||

* * *

ಎಂದೂ ಬಾರದ ಜವರಾಯಾ ಇಂದ್ಯಾಕ ಬಂದೀರಿ |
ಕೊಳ್ಳಯ್ಯ ನೀರ ಕುಡಿ ನೀರ ||
ಕುಡಿಯೋಕೆ ಬಂದಿಲ್ಲ ಕೊಡ್ರೋಕೆ ಬಂದಿಲ್ಲ |
ಗಂಡನ ಮಡದಿ ನಡಿ ಮುಂದೆ ||೧೪೭೬||

ಮನೆ ಮುಂದೆ ಚಪ್ಪರ ಹಬ್ಬದ ಸಡಗರ ।
ಬಿಟ್ಟ್ಯಾಂಗ ಬರಲೊ ಜವರಾಯಾ ॥
ಹಬ್ಬ ಮಾಡುವಂಥ ಪುರಚಲುವೆ ಬರುತಾಳೆ ।
ಗಂಡನ ಮಡದಿ ನಡಿ ಮುಂದೆ ॥೧೪೭೭॥

* * *

ಮಳಿ ಮಳಿಗೆ ಹಚ್ಚಡ ಮಳಿಗೆ ಮುಂಡಾಸಿನ ।
ಗಂಡನ್ನ ಬಿಟ್ಟು ಹ್ಯಾಂಗ ಬರಲಿ ಜವರಾಯಾ ॥
ಗಂಡಗೆ ತಕ್ಕಂಥ ದುಂಡೀರು ಬರುತಾರೆ ।
ಗಂಡನ ಮಡದಿ ನಡಿ ಮುಂದೆ ॥೧೪೭೮॥

* * *

ಹಾಲು ಬಾನಾ ಉಂಡು ತೋಳ ಮೇಲಾಡುವ ।
ಬಾಲನ ಬಿಟ್ಟು ಬರಲ್ಯಾಂಗ ಜವರಾಯಾ ॥
ಬಾಲಗ ತಕ್ಕಂಥ ಬಾಲೇರು ಬರುತಾರೆ ।
ಗಂಡನ ಮಡದಿ ನಡಿ ಮುಂದೆ ॥೧೪೭೯॥

*

ಕಾಳು ಕಡಿ ಮಾರಿ ಕಟ್ಟಾಣಿ ಮಾಡಿಸಿದ್ದೆ ।
ಕಟ್ಟ್ಯಾಣ್ಯೊಂದರ ಘಳಿಗಿ ಇಡಲಿಲ್ಲ ।
ಕಟ್ಟ್ಯಾಣೊಂದರ ಘಳಿಗಿ ಇಡಲಿಲ್ಲ-ಜವರಾಯಾ ।
ಕೆಟ್ಟೋಡಿ ಹೋಗೋ ಸಡಗರವೇ ॥೧೪೮೦॥

* * *

ಉಪ್ಪು ಸೊಪ್ಪು ಮಾರಿ ಉಪ್ಪರಿಗೆ ಕಟ್ಟಿಸಿದ್ದೆ ।
ಉಪ್ಪರಿಗೆ ಭೋಗ ಕಾಣಲಿಲ್ಲ ।
ಉಪ್ಪರಿಗೆ ಭೋಗ ಕಾಣಲಿಲ್ಲ-ಜವರಾಯಾ ।
ಉತ್ತರಿಸಿ ಹೇಳೋ ಸಡಗರವೇ ॥೧೪೮೧॥

* * *

ಆಚೇ ಕೇರೇ ಲೀಗ ರಂಡೇರು ಮುಂಡೇರು ।
ಅವರ್ನ್ಯಾರ ಕರಕೊಂಡು ಹೋಗಬಾರದೇ ॥
ರಂಡೇರು ಮುಂಡೇರು ಎಂದಿದ್ರು ನಮ್ಮೋರು ।
ಗಂಡನ ಮಡದಿ ನಡಿ ಮುಂದೆ ॥೧೪೮೨॥

# ನಾಗರ ಪಂಚಮಿ

ನಾಗರ ಪಂಚಮಿ ನಾಡಹೆಣ್ಣಿಗೆ ಹಬ್ಬ ।
ನಾಗಪ್ಪಗ್ಹಾಲ ಎರಿಯೋಣು ।
ನಾಗಪ್ಪಗ್ಹಾಲ ಎರಿಯೋಣು-ನನಗೆಣತಿ ।
ನಾಗರ ಹೆಡಿಯ್ಹಾಂಗ ಆಡೂಣು ||೧೪೮೩||

* *

ಗುರುದೇವ ನಿಮಪಾಲ ಹರ ಹರಿಸಿ ನಿಮಪಾಲ ।
ಶರಣರಿಗೆ ಹಾಲ ಹಿರಿಯರಿಗೆ ।
ಶರಣರಿಗೆ ಹಾಲ ಹಿರಿಯರಿಗೆ-ಎರಿಯೋಣ ।
ಕಿರಿಯರಿಗೆ ಹಾಡಿ ಹರಿಸೋಣು ||೧೪೮೪||

* * *

ಅಳ್ಳಿಟ್ಟು ತಂಬಿಟ್ಟು ಮಾಡಿಟ್ಟೆ ಎಳ್ಳುಂಡಿ ।
ದಳ್ಳುರಿ ಕಣ್ಣ ಹರಿಯುವನ ।
ದಳ್ಳುರಿ ಕಣ್ಣ ಹರಿಯುವನ-ಕೊರಳಾನ ।
ನಾಗ ನಿನಗೆಡಿಯೊ ಕೈಮುಗಿದು ||೧೪೮೫||

ವಾರೀಗಿ ಗೆಳತೇರ ಕೇರೀಯ ಕೆಳದೇರ ।
ಸೇರಿ ಒಂದೆಡೆ ಕೂಡೋಣ ।
ಸೇರಿ ಒಂದೆಡೆ ಕೂಡೋಣ-ಜೋಕಾಲಿ ।
ತೂರಿ ಜೀಕುವ ಆಡೋಣ ||೧೪೮೬||

* * *

ಚಂದ್ರ ಕಾಳಿಯ ಸೀರಿ ಚಂದ್ರ ಕುಪ್ಪಸತೊಟ್ಟು ।
ಬಂದ ಹಬದಾಗ ನಲಿಯೂಣ ।
ಬಂದ ಹಬದಾಗ ನಲಿಯೂಣ-ನಕ್ಕಾಡಿ ।
ಒಂದಾಗಿ ಇದ್ದು ಅಗಲೂನು ||೧೪೮೭||

ಸಾಕಾಗುತನಕ ಜೋಕಾಲಿ ಜೀಕೂನ ।
ನಾಗರ ಮಿಡಿಯಾಗಿ ಸುಳಿಯೂನ ।
ನಾಗರ ಮಿಡಿಯಾಗಿ ಸುಳಿಯೂನ–ವರ ವರುಷ ।
ನಾಗರ ಪಂಚಮಿಗೆ ಕೂಡೋಣ ॥೧೪೮೮॥

* * *

ಗಂಡನ ಮನಿಯೆನ್ನ ಕಂಡ ಬಾಳುವೆ ಮಾಡಿ ।
ಉಂಡು ಓಡ್ಯಾಡಿ ಆಡೋಣ ।
ಉಂಡು ಓಡ್ಯಾಡಿ ಆಡೋಣ–ಮನೆಮಾತ ।
ಹಿಂಡಿನ್ಯಾಗಾಡಿ ಮರಿಯೋಣ ॥೧೪೮೯॥

* * *

ಪಂಚಮಿ ಬರಲೆವ್ವ ಮಂಚಃಕಟ್ಟಲಿ ಮನೆಗೆ ।
ಕೆಂಚಿಗೆಳತೇರು ಕೂಡಃಲಿ ।
ಕೆಂಚಿಗೆಳತೇರು ಕೂಡಃಲಿ–ನಮಜೀಕ ।
ಮಿಂಚಿ ಮುಗಲೀಗೆ ಏರಃಲಿ ॥೧೪೯೦॥

## ಕಾವಲಿಯ ಹಾಡು

ಕಾಲಾನು ಕಾಲಕ್ಕೆ ಬಂದೀತು ದೀವಳಿಗೆ ।
ನಾನು ಸಂಪುಳಿಗೆ ಕದರಿದ್ದೆ ।
ನಾನು ಸಂಪುಳಿಗೆ ಕದರಿದ್ದೆ–ಅತ್ತೀಗೆ ।
ಹೊನ್ನು ಕಾವಲಿಯ ಕೊಡುಬಾರೆ ॥೧೪೯೧॥

* * *

ಹೊನ್ನು ಕಾವಲಿಯ ನಿನ್ಯೊಬ್ಳು ಕೊಂಡ್ಹೋಗಿ ।
ಎಣ್ಣೆ ಸವರಃದೆ ಸಿಡಿಸ್ಯಾಳ ।
ಎಣ್ಣೆ ಸವರಃದ ಸಿಡಿಸ್ಯಾಳ–ನಾದೂನಿ ।
ಹೊನ್ನ ಕಾವಲಿಯ ಕೊಡಲಾರೆ ॥೧೪೯೨॥

ಎಣ್ಣೇಯು ಹಚ್ಚೇನು ಬಣ್ಣsವ ಹಚ್ಚೇನು ।
ಸಣ್ಣ ಅರಿವೇಲಿ ಒರಿಸೇನು ।
ಸಣ್ಣ ಅರಿವೇಲಿ ಒರಿಸೇನು-ಅತ್ತೀಗೆ ।
ಹೊನ್ನ ಕಾವಲಿಯು ಕೊಡುಬಾರೆ ||೧೪೯೩||

* * *

ಎಣ್ಣೇನೂ ಹಚ್‌ಬ್ಯಾಡ ಬೆಣ್ಣೇನೂ ಹಚ್‌ಬ್ಯಾಡ ।
ಸಣ್ಣsವ ಅರಿವೇಲಿ ಒರಿಸ್ಬ್ಯಾಡ ।
ಸಣ್ಣsವ ಅರಿವೇಲಿ ಒರಿಸ್ಬ್ಯಾಡ-ನಾದೂನಿ ।
ಹೊನ್ನ ಕಾವಲಿಯ ಕೊಡಲಾರೆ ||೧೪೯೪||

* * *

ಚಂದ್ರಗಾವಿಪಾಗ ಚುಂಗುಬಿಟ್ಟು ಸುತ್ತವನೆ ।
ಸುತ್ತಿನುಂಗರದ ಸುಗುಣsನೆ ।
ಸುತ್ತಿನುಂಗರದ ಸುಗುಣsನೆ-ಅಣ್ಣಯ್ಯ ।
ಅತ್ತೀಗೆ ಕಾವಲಿಯ ಕೊಡವಳ್ಳು ||೧೪೯೫||

* * *

ಕೊಟ್ಟsರೆ ಕೊಡಲೇಳೆ ಬಿಟ್ಟsರೆ ಬಿಡಲೇಳೆ ।
ಬಿಚ್ಚಾಣಿ ಕೆಲಸ ಬಡಗಾರ ।
ಬಿಚ್ಚಾಣಿ ಕೆಲಸ ಬಡಗಾರ-ಬೀದೀಲಿ ।
ಕೆತ್ತಿ ಮಾರ್‍ಯಾರ ಹೊಸಕಲ್ಲ ||೧೪೯೬||

* * *

ಹೊಸಕಲ್ಲು ತಕ್ಕೊಂಡು ಹಸ್ನಾಗಿ ದೋಸೆ ಹುಯ್ದು ।
ಕಡಲೆ ತೊವ್ವೆಮಾಡಿ ತುಪ್ಪ ಹಾಕಿ ।
ಕಡಲೆ ತೊವ್ವೆಮಾಡಿ ತುಪ್ಪ ಹಾಕಿ-ತಂಗೆವ್ವ ।
ಕೊಡದೊಳಗಿಕ್ಕ ಹದಿನಾರು ||೧೪೯೭||

* * *

ದೊಡ್ಡವರ ಸೊಸೆಯೇ ದೊಡ್ಡ ತುರುಬಿನವಳೆ ।
ಬಂದ್ಹೋಗತ್ತೀಗೆ ಮನಿತನಕ ।
ಬಂದ್ಹೋಗತ್ತೀಗೆ ಮನಿತನಕ-ನಮ್ಮನಿಯು ।
ಹೊಸಗಲ್ಲ ದೋಸೆ ಹಸನಾದ್ದು ||೧೪೯೮||

ಚಿಕ್ಕಣ್ಣನಾಣೆ ಚಿನ್ನದುಂಗುರದಾಣೆ ।
ದೊಡ್ಡಣ್ಣನಾಣೆ ದೊರೆಯಾಣೆ ।
ದೊಡ್ಡಣ್ಣನಾಣೆ ದೊರೆಯಾಣೆ-ನಾದೂನಿ ।
ನಿನ್ನಾಣಿ ನನಗ ಹಸಿವಿಲ್ಲ ||೧೪೯೯||

## ಮಾರಮ್ಮ

ಹಳ್ಳಽ ಕೊಳ್ಳದ ನೀರು ಬೆಳ್ಳೀಯ ತಂಬಿಗಿ ।
ಅಲ್ಲಿ ಮಾರವ್ವ ಶಿವಪೂಜಿ ।
ಅಲ್ಲಿ ಮಾರವ್ವ ಶಿವಪೂಜಿ-ನಡಿವಾಗ ।
ಕಲ್ಲಣದ ಗಂಟಿ ನುಡಿದಾವು ||೧೫೦೦||

* * *

ಆರಽತಿ ಹೊರಟಾವು ಕೀರೂತಿ ಉಳ್ಳೋಳಿಗೆ ।
ಕೇರಿ ಕೇರ್ಯಾಗ ಮೆರೆಯೋಳಿಗೆ ।
ಕೇರಿ ಕೇರ್ಯಾಗ ಮೆರೆಯೋಳಿಗೆ-ಮಾರೆವ್ವ ।
ಆರಽತಿ ಹೊರಟಾವು ಐನೂರು ||೧೫೦೧||

* * *

ಎರಡು ಕೈಗೆ ಎರಡು ಮುರುಡೀಯ ಸರಪಣಿ ।
ಗರಡೀ ಮನೆಗೆ ಹೋಗಿ ಬರುವಾಗ ।
ಗರಡೀ ಮನೆಗೆ ಹೋಗಿ ಬರುವಾಗ-ಮಾರವ್ವ ।
ಗರುಡಾಳ ಸ್ವಾಮಿ ತಡೆದಾವು ||೧೫೦೨||

* * *

ಎತ್ತಿನ ಕೊಂಬಿನಮ್ಯಾಲೆ ಮುತ್ತಿನ ಲಗ್ಗೆ ಹೂಡಿ ।
ಹತ್ತಿ ನೋಡ್ಯಾಳ ತೌರಽವ ।
ಹತ್ತಿ ನೋಡ್ಯಾಳ ತೌರಽವ-ಮಾರವ್ವ ।
ಸುತ್ತಲಿನ ಪರಸಿ ಬರಲೆಂದು ||೧೫೦೩||

ಅಮ್ಮನ ಗುಡಿಸುತ್ತ ಗವ್ಮಾನದೇನೀರೆ ।
ಗಂಡು ಭೂತಾಳಿ ಗಜನಿಂಬೆ ।
ಗಂಡು ಭೂತಾಳಿ ಗಜನಿಂಬೆ--ಗಮನಕ್ಕೆ ।
ಗೂಡು ಕಟ್ಟ್ಯಾವ ಅರಗೀಳಿ ॥೧೫೦೪॥

* * *

ಬೀದೀಲಿ ಆಡೋದು ಬಲ್ಲರೇ ಹಾವಲ್ಲ ।
ತಾಯಿ ಮಾರವ್ನ ತೊಡಿಮ್ಯಾಲೆ ।
ತಾಯಿ ಮಾರವ್ನ ತೊಡಿಮ್ಯಾಲೆ–ಆಡೋದು ।
ಏಳ್ಹೆಡೆ ಸರ್ಪನ ಎಳೆನಾಗ ॥೧೫೦೫॥

* * *

ದೊಡ್ಡಮ್ಮನ ಗುಡಿ ಮುಂದೆ ಕಬ್ಬೀಣ ಮಯ್ಯಾಲೆ ।
ಕಳ್ಳರು ತೂಗಿದರೆ ಮುಲಕೊಯ್ದು ।
ಕಳ್ಳರು ತೂಗಿದರೆ ಮುಲಕೊಯ್ದು–ದೊಡ್ಡಮ್ಮ ।
ನಿನ್ಗಂಡ ತೂಗಿದರೆ ಗದಿರೆಂದು ॥೧೫೦೬॥

* * *

ಹಾರುವರ ಕೇರೀಗೆ ಹೋಗ್ಯಾಳ ಮಾರವ್ವ ।
ನಾಗಾಳ ಹೂವ ಮುಡಲಲ್ಲಿ ।
ನಾಗಾಳ ಹೂವ ಮುಡಲಲ್ಲಿ- ಕಟಿಗೊಂಡು ।
ನಾರೇರಿಗೊಂದಂದ ಕೊಡತಾಳ ॥೧೫೦೭॥

* * *

ಮಾರವ್ವ ಹೋಯ್ತಾಳ ಮಳವಳ್ಳಿ ಸೀಮೇಗೆ ।
ಮಳೆ ಬಂದರಲ್ಲಿ ತಳಗಳು ।
ಮಳೆ ಬಂದರಲ್ಲಿ ತಳಗಳು–ಮಾರವ್ವ ।
ಎಳೆಯ ಹೊಂಬಾಳಿ ಸುಳಿಯಲ್ಲಿ ॥೧೫೦೮॥

ಮಾರವ್ನ ಗುಡಿ ಮುಂದ ಜೋಡು ನಿಂಬಿಗಿಡ ಹುಟ್ಟಿ ।
ಕಳ್ಳರು ಕೊಯ್ವಂಗ ಕಸುಗಾಯಿ ।
ಕಳ್ಳರು ಕೊಯ್ವಂಗ ಕಸುಗಾಯಿ–ಮಾರವ್ವ ।
ನಿನಗಂಡ ಕೊಯ್ದಾನ ಗಜನಿಂಬಿ ॥೧೫೦೯॥

ಮಾರವ್ವ ಮಾರವ್ವ ಮುಖವ್ಯಾಕ ಸಪ್ಪಗಾಯ್ತೇ ।
ನಿನ್‌ಮಗಾ ಹೋಗ್ಯಾನ ದೂರಕ್ಕ ।
ನಿನ್‌ಮಗಾ ಹೋಗ್ಯಾನ ದೂರಕ್ಕ-ಕುಳುವಾಡಿ ।
ಪೂಜೆಗ್ಹೊಂಬಾಳೆ ತರಲಾಕ ॥ ||೧೫೧೦||

* * *

ತಾಯಿ ದೊಡ್ಡಮ್ಮ ಏನುಟ್ಟು ಮೆರದಾಳು ।
ಕಾಗುಟ್ಟು ಕರಿದು ಮಸುಗುಟ್ಟು ।
ಕಾಗುಟ್ಟು ಕರಿದು ಮಸುಗುಟ್ಟು-ಹಾರುವರ ।
ಹೊಬಣ್ಣ ನುಟ್ಟು ಮೆರೆದಾಳ ||೧೫೧೧||

* *

ಹೆಡಿಗ್ಯಾಗ ಹಣ್ಬಂದು ಗಡಿಗ್ಯಾಗ ತುಪ್ಪಂದು ।
ಇಟ್ಟಾಡಿ ಬಂದು ಇಡಗಾಯಿ ।
ಇಟ್ಟಾಡಿ ಬಂದು ಇಡಗಾಯಿ-ಮಾರವ್ಗ ।
ಒತ್ತಲಿಸಿ ಬಂದೋ ಕುರಿಗೋಳು ||೧೫೧೨||

ಅರಸಿ ಮಾರವ್ವಗ ಕೆರಸೀಲಿ ಹೂ ಬಂದು ।
ವರುಷಕ್ಕೆ ನೂರು ಮರಿ ಬಂದು ।
ವರುಷಕ್ಕೆ ನೂರು ಮರಿ ಬಂದು-ಮಾರವ್ವ ।
ಅರಸೀ ನಿನ್ ಹಬ್ಬವ ಮಾಡೇವು ||೧೫೧೩||

## ಪುಣ್ಯಾತ್ಮರ ಕ್ಷೇತ್ರಗಳು

ಸಂಗಮಕ ಹೋಗಾಕ ಸಂಗಾಟ ಮಗ ಬೇಕ ।
ತಂಬೀಗಿ ಹಿಡಿಯಾಕ ಸೊಸಿಬೇಕ ।
ತಂಬೀಗಿ ಹಿಡಿಯಾಕ ಸೊಸಿಬೇಕ-ಈ ಮನಕ ।
ನಂಬೀಗಿ ಬೇಕ ಶಿವನಲಿ ||೧೫೧೪||

ದೇವರಿಗಿ ಮಾಡಿದರ ದಾವsತಿ ನಮಗಿಲ್ಲ ।
ದಾರೀಯನಡೆದರ ದಣುವಿಲ್ಲ ।
ದಾರೀಯ ನಡೆದರ ದಣುವಿಲ್ಲ-ಸಂಗಯ್ಯ ।
ಹಾವು ಕಚ್ಚಿದರೆ ಇಸವಿಲ್ಲ ॥೧೫೧೫॥

* * *

ಮಲ್ಲಿಗಿ ಹೂವಿನದಂಡಿ ಅಲ್ಲಿಟ್ಟಿ ಇಲ್ಲಿಟ್ಟಿ ।
ಕಲ್ಲಮ್ಯಾಗಿಟ್ಟಿ ಕೈಬಿಟ್ಟಿ ।
ಕಲ್ಲಮ್ಯಾಗಿಟ್ಟಿ ಕೈಬಿಟ್ಟಿ-ಕೂಡಲಸಂಗನ ।
ಪಲ್ಲಕ್ಕ್ಯಾಗಿಟ್ಟಿ ಹಿಡಿಹೊನ್ನ ॥೧೫೧೬॥

* * *

ತಂಗೀ ಕರೀಲಾಕ್ಹೋಗಿ ತಿಂಗsಳ ತಡೆದಾನ ।
ತಂಗಿ ಬೋರಮನ ಕರೆಹೋಗಿ ।
ತಂಗಿ ಬೋರಮನ ಕರೆಹೋಗಿ-ಸಂಗಯ್ಯ ।
ತಂಗಡಗಿ ಮುಂದ ನೆಲಿಸ್ಯಾನ ॥೧೫೧೭॥

* * *

ಅಕ್ಕನ ಕರೀಲಾಕ್ಹೋಗಿ ಇಪ್ಪತ್ತು ದಿನ ತಡೆದ ।
ಅಕ್ಕs ನಾಗನ ಕರೆಹೋಗಿ ।
ಅಕ್ಕs ನಾಗನ ಕರೆಹೋಗಿ-ಕೂಡಲ ಸಂಗ ।
ರಕ್ಕಸಗಿ ಮುಂದ ನೆಲಿಸ್ಯಾನ ॥೧೫೧೮॥

* * *

ಸಂಗಯ್ಯನ ಗುಡಿ ಮುಂದ ಲಿಂಗ ಮುದ್ದರಿಕಲ್ಲ ।
ಗಂಗವ್ವ ಮುಂದ ಹರದಾಳ ।
ಗಂಗವ್ವ ಮುಂದ ಹರದಾಳ-ನಾಹೋಗಿ ।
ಜೋಡೀಸಿ ಕೈಯ ಮುಗಿದೇನ ॥೧೫೧೯॥

* * *

ಪರಮಾತವೆಂಬೂದು ಅರವತ್ತು ಗಾವೂದ ।
ಬರಲಾರೆನಯ್ಯ ಬಹುದೂರ ।
ಬರಲಾರೆನಯ್ಯ ಬಹುದೂರ-ನಿನಮುಡುಪ ।
ಬರುವವರ ಕೂಡ ಕಳಿಸೇನೋ ॥೧೫೨೦॥

ಸಂಗಯ್ಯ ನಿರುವೂದು ಸಾಲ ಹುಣಸಿಯ ಮರ ।
ಸಂಗಯ್ಯನ ತಮ್ಮ ಗಿರಿಮಲ್ಲ ।
ಸಂಗಯ್ಯನ ತಮ್ಮ ಗಿರಿಮಲ್ಲ–ಇರುವsದು ।
ತಿಂಗಳದ ದಾರಿ ಪರವೂತ ||೧೫೨೧||

* * *

ಪರವುತಗ್ಹೋಗಬೇಕಂತ ಪರಸಿ ತಯಾರ ಮಾಡಿ ।
ಚೆರಿಸ್ಯಾಳ ಬ್ಯಾಳಿ ನೆನೆಗಡಲಿ ।
ಚೆರೆಸ್ಯಾಳ ಬ್ಯಾಳಿ ನೆನೆಗಡಲಿ–ಪರವುತದ ।
ಪರಸಿಗ್ಹಂಚ್ಯಾಳ ಪನಿವಾರ ||೧೫೨೨||

* * *

ಹರಿಯಾಗ ಏಳುತಲಿ ಹರ ನಿನ್ನ ನೆನದೇನ ।
ಪಾತಾಳ ಗಂಗ್ಯಾಗ ಜಳಕsವ ।
ಪಾತಾಳ ಗಂಗ್ಯಾಗ ಜಳಕsವ–ಮಾಡುವಂಥ ।
ಮಲ್ಲಿಕಾರ್ಜುನಗ ನೆನದೇನ ||೧೫೨೩||

* * *

ಪರವೂತ ಗಿರಿಮ್ಯಾಲೆ ಅರಿದೊಂದು ಕಂಡೇನು ।
ಕರಿಯ ಗಂಡರಳಿ ಮುಂದ್ಹೂಡಿ ।
ಕರಿಯ ಗಂಡರಳಿ ಮುಂದ್ಹೂಡಿ–ಬಿತ್ತ್ಯಾರ ।
ಮಲ್ಲಯ್ಯ ಮುಡಿವ ದವನsವ ||೧೫೨೪||

ಪರವೂತ ಗಿರಿಮ್ಯಾಲೆ ಪಂಚಾಳ ಮರಹುಟ್ಟಿ ।
ಪಾತಾಳ್ಕ ಬೇರು ಇಳಿದಾವ ।
ಪಾತಾಳ್ಕ ಬೇರು ಇಳಿದಾವ–ಆಬೇರು ।
ಬೋರಮ್ಮಗ ನೆರಳು ಗವಿದಾವ ||೧೫೨೫||

* * *

ಪಲ್ಲಕ್ಕಿ ಕೊಟ್ಟsರ ಮಲ್ಲಯ್ಯ ಒಲ್ಲೆಂದ ।
ಮಲ್ಲೆನೆಂಬೂವ ಮರಿಗುದರಿ ।
ಮಲ್ಲೆನೆಂಬೂವ ಮರಿಗುದರಿ–ಕೊಟ್ಟsರ ।
ಮೆಲ್ಲಕ ಮಡವ ನಿಳಿದಾನ ||೧೫೨೬||

ಚಿಂತಿ ಬಿಡಿಸೋ ನನ್ನ ಕಾಂತಿ ಪರವುತಮಲ್ಲ ।
ಚಿಂತ್ಹ್ಯೋಗಿ ನನ್ನ ಸೌಭಾಗ್ಯ ।
ಚಿಂತ್ಹ್ಯೋಗಿ ನನ್ನ ಸೌಭಾಗ್ಯ-ಕೊಟ್ಟsರ ।
ಕಂಬೀಗೆ ಮುತ್ತು ಬಿಗಿಸೇನೋ ||೧೫೨೭||

* * *

ಪುಂಡ ಪರುವುತ ಮಲ್ಲ ಗಂಡsಮಗನ ಕೊಡು ।
ಚೆಂಡ್ಹ್ಯಾವಿನಂಥ ಸೊಸೆಂದಿರಿಗೆ ।
ಚೆಂಡ್ಹ್ಯಾವಿನಂಥ ಸೊಸೆಂದಿರಿಗೆ-ಕೊಟ್ಟsರ ।
ಪುಂಡ ನಿನ ಗಿರಿಗೆ ಬರುವೇನು ||೧೫೨೮||

* * *

ಮಲ್ಲಯ್ಯ ಗ್ಹೋದವರು ನಿಲ್ಲದಲಿ ಬಾರsರ ।
ಅಲ್ಲಿ ರಾಚೋಟಿ ಪರಭsಗ ।
ಅಲ್ಲಿ ರಾಚೋಟಿ ಪರಭsಗ-ಹೋದವರು ।
ಪಲ್ಲೇವ ಬಿತ್ತಿ ಬೆಳೆದಾರ ||೧೫೨೯||

* * *

ಕಂಬೀಯ ಹೊತ್ತಣ್ಣ ಕಂಬಿ ಕಾವಡಿ ಜೋಕೆ ।
ಅನಗಾಡ ಹಾದಿ ಅವಜೋಕೆ ।
ಅನಗಾಡ ಹಾದಿ ಅವಜೋಕೆ-ಕಂಬ್ಯಯ್ಯ ।
ಗಿರಿ ಇಳಿಯು ಮುಂದ ಜೀವ್ ಜ್ವಾಕಿ ||೧೫೩೦||

* * *

ಕಂಬೀಯ ಹೊತ್ತಣ್ಣ ಇಂಬಾಗಿ ಹಾಯಣ್ಣ ।
ಕಂಬಿಗೆ ಕಂಬಿ ತಗಲ್ಯಾವ ।
ಕಂಬಿಗೆ ಕಂಬಿ ತಗಲ್ಯಾವ-ನಮುನಿಮಗ ।
ಡಂಬಿ ತಾಗ್ಯಾವು ಅರಿಗಾಗೋ । ||೧೫೩೧||

* * *

ಕಂಬಿ ಹೊತ್ತಣ್ಣನ ತಂಗೇನು ಉಟ್ಟ್ಯಾಳ ।
ಲಿಂಬಿ ಪತ್ತsಲ ಜರತಾರೋ ।
ಲಿಂಬಿ ಪತ್ತsಲ ಜರತಾರೋ-ಉಟಗೊಂಡು ।
ಕಂಬಿಗಾರೂತಿ ಬೆಳಿಗ್ಯಾಳೋ ||೧೫೩೨||

## ಸುಗ್ಗಿಯ ಹಾಡುಗಳು (ಹಂತಿಯ ಹಾಡುಗಳು)

ಹಂತಿ ಪದಕೊಂದಿಲ್ಲ ನಿಂತು ಬೆಸಕನ ಪೂಜೆ ।
ಹಂತಿಯೊಳು ಪೂಜೆ ಶರಣರಿಗೆ ।
ಹಂತಿಯೊಳು ಪೂಜೆ ಶರಣರಿಗೆ-ಒಕ್ಕಲಿಗ ।
ಸ್ವಂತ ನೆನೆಯೆಂದ ಗಣಪನಿಗೆ ||೧೫೩೩||

* * *

ಶಿವ ಶಿವ ಎಂದರ ಸಿಡಿಲೆಲ್ಲ ಬಯಲಾಗಿ ।
ಕಲ್ಲ ಬಂದೆರಗಿ ಕಡೆಗಾಗಿ ।
ಕಲ್ಲ ಬಂದೆರಗಿ ಕಡೆಗಾಗಿ-ಎಲೆ ಮಾನವ ।
ಶಿವನೆಂಬ ಸಬುದ ಬಿಡಬ್ಯಾಡ ||೧೫೩೪||

* * *

ಶರಣಯ್ಯ ಶಿವನೀಗೆ ಶರಣಯ್ಯ ಗುರುವೀಗೆ ।
ಶರಣಯ್ಯ ಶಿವನ ನಂದೀಶ್ವರಗೆ ।
ಶರಣಯ್ಯ ಶಿವನ ನಂದೀಶ್ವರಗೆ-ಬಸವಣ್ಣಗೆ ।
ಶರಣಯ್ಯ ಎಂದು ಹಂತಿ ಹೂಡೇನೋ ||೧೫೩೫||

*

ಮೂಡಣ ದಿಕ್ಕೀಗೆ ಹೂಡ್ಯಾವು ಎಂಟೆತ್ತು ।
ಕಾಡ್ಯಾವು ಎರಡ ಕೊನೆ ಹೋರಿ ।
ಕಾಡ್ಯಾವು ಎರಡ ಕೊನೆ ಹೋರಿ-ನಮಬಸವ ।
ಬೇಡ್ಯಾವ ಎರಡ ಹಣಿಕಟ್ಟೋ ||೧೫೩೬||

* * *

ಬೆಳ್ಳನ್ನ ಎರಡೆತ್ತು ಬೆಳ್ಳಿಯ ಬಾರಕೋಲ ।
ಬಂಗಾರದ ಶೆಡ್ಡಿ ಬಲಗೈಯ್ಯೋ ।
ಬಂಗಾರದ ಶೆಡ್ಡಿ ಬಲಗೈಯಾಗ-ಹಿಡಕೊಂಡು ।
ಹೊನ್ನ ಬಿತ್ಯಾರೋ ಹೊಳಿಸಾಲ ||೧೫೩೭||

ತುಂಬೀದ ಹೊಳಿಯಾಗ ಕೊಂಬs ಕಾಣಿಸತಾವ
ಬಂಗಾರದ ಇಣಿಯು ಬಸವಣ್ಣ ।
ಬಂಗಾರದ ಇಣಿಯು ಬಸವಣ್ಣ-ಬರುವಾಗ ।
ರಂಭ್ಯಾರಾರೂತಿ ಬೆಳಗ್ಯಾರೋ ||೧೫೩೮||

* * *

ತಂಗೀಯ ಕರಕೊಂಡು ಕೆಂದೆತ್ತು ಹೊಡಕೊಂಡು ।
ತಂಗೀ ಮಕ್ಕಳಿಗೆ ಬಿಸಿಲೆಂದು ।
ತಂಗೀ ಮಕ್ಕಳಿಗೆ ಬಿಸಿಲೆಂದು-ಅಣ್ಣಯ್ಯ ।
ವಲ್ಲೀ ಮುಂಜೆರಗ ಹಿಡಿದಾನೋ ||೧೫೩೯||

* * *

ಕಸವ ಹೊಡೆದs ಕೈ ಕಸ್ತೂರೀ ನಾತಾವ ।
ಬಸವಣ್ಣ ನಿನ್ನ ಶಗಣೀಯು ।
ಬಸವಣ್ಣ ನಿನ್ನ ಶಗಣೀಯು-ಬಳಿದ ಕೈ ।
ಎಸಳ ಯಾಲಕ್ಕಿ ಗೊನಿ ನಾತಾವೋ ||೧೫೪೦||

* * *

ಎಲ್ಲೆಲ್ಲಿ ನೋಡಿದರೂ ಬಸವನಂಥವರಿಲ್ಲ ।
ಹಲ್ಲು ನೋಡಿದರ ಹವಳsವೋ ।
ಹಲ್ಲು ನೋಡಿದರ ಹವಳsವೋ--ತುಟಿಮ್ಯಾಲೆ ।
ಬಿಲ್ಲು ಮೀಶೆಯು ಚಲುವಾನೋ ||೧೫೪೧||

* * *

ಬಟಗಡ್ಲಿ ಹುರಿವಾಗ ಮನೆಯೆಲ್ಲ ಘಮ್ಮೆಂದು ।
ಮಲಗಿದ್ದ ಗೆಣಿಯ ಒಡನೆದ್ದು ।
ಮಲಗಿದ್ದ ಗೆಣಿಯ ಒಡನೆದ್ದು--ಏನೆಂದ ।
ನನಗೆರಡು ಬಟಗಡ್ಲಿ ಕೊಡು ಎಂದಾ ||೧೫೪೨||

*

ಹಚ್ಚೀದ ಹರಿನಾಮ ಮುತ್ತೀನ ಗೋಪಾಳ ।
ಹೊತ್ತೇರಿ ಬರುವ ಇವನ್ಯಾರೋ ।
ಹೊತ್ತೇರಿ ಬರುವ ಇವನ್ಯಾರೋ-ಗದಗೀನ ।
ಕಲ್ಲೀನ ಗುಡಿಯ ಜೋಡ್ಹನುಮಾ ||೧೫೪೩||

ಆ ತೇರು ಈ ತೇರು ಜ್ಯೋತಿ ಲಿಂಗನ ತೇರು ।
ಅಪ್ಪ ಕಳಕಯ್ಯನ ಹೊಸ ತೇರು ।
ಅಪ್ಪ ಕಳಕಯ್ಯನ ಹೊಸ ತೇರು--ಬರುವಾಗ ।
ಆಕಾಶದ ಘಂಟೆ ಝಣಲೆಂದೋ ॥೧೫೪೪॥

* * *

ಕೇಕೆ ಹಾಕಿದ ಸಂಗ ಕರಿಯ ಬೆಟ್ಟದ ಸಂಗ ।
ಹುಲಿಯು ಹುಬ್ಬಿನ ಮನೆಗಾರ ।
ಹುಲಿಯು ಹುಬ್ಬಿನ ಮನೆಗಾರ-ಹಾಸಿದರ ।
ಮುಂಗಾರಿ ಸಿಡಿಲು ಹೊಡೆದಂಗ ॥೧೫೪೫॥

* * *

ಕಸ್ತೂರೀ ಕದಾಹಾಕಿ ಲಾವಂಗ ಚಿಲಕ್ಹಾಕಿ ।
ವಸ್ತಿಗಾರಣ್ಣ ಮಲಗ್ಯಾನ ।
ವಸ್ತಿಗಾರಣ್ಣ ಮಲಗ್ಯಾನ-ಈಊರ ।
ವಸ್ತಿ ದ್ಯಾಮವ್ವನ ಗುಡಿಯಾಗ ॥೧೫೪೬॥

* * *

ಹಂಪೀಯ ಕಲ್‌ಕೋಟೆ ಧಾರವಾಡ್ದ ಮುಳ್‌ಬೇಲಿ ।
ಬಣ್ಣ ಚಿತ್ತರವ ಬಿಳಿ ಹೊಳಿ ।
ಬಣ್ಣ ಚಿತ್ತರದ ಬಿಳಿಹೊಳಿ-ಊರಮುಂದೆ ।
ರನ್ನ ಕೊಳಲ ನುಡಿದಾವೋ ॥೧೫೪೭॥

* * *

ಮೂಡ ಮುತ್ತಿನ ಗಿರಿ ಪಡುವ ಚುಂಬನ ಕಟ್ಟಿ ।
ಸೊಲಿಗರ ಬೀದಿ ಸಿರಿಹರಿಯೇ ।
ಸೊಲಿಗರ ಬೀದಿ ಸಿರಿಹರಿಯೇ-ಚಲುವಯ್ಯ ।
ಸೋಲಿಸಬೇಡ ಗೆಲಿಸಯ್ಯಾ ॥೧೫೪೮॥

* * *

ಹಕ್ಕರಕಿ ಹಸರಾಣಿ ಮೇಲಾದ ಕೋಲಾಣಿ ।
ಎದಕ ಹೊಕ್ಕೀದಿ ಚಿಟಗಾಣಿ ।
ಎದಕ ಹೊಕ್ಕೀದಿ ಚಿಟಗಾಣಿ-ಬೆಟಗೇರಿ ।
ಸಂತಿಗ್ಹೋಕ್ಕೀನೋ ಗಟಮಂಗಾ ॥೧೫೪೯॥

ಊರ ಮುಂದಿನ ತಿಪ್ಪಿ ದೂರ ಕಬ್ಬೀಗ್ಹೋಲಾ ।
ಚೀರಾಡಿ ಬಂಡಿ ಹೊಡೆಯುವನ ।
ಚೀರಾಡಿ ಬಂಡಿ ಹೊಡೆಯುವನ-ಗೆಣೆಯನ ।
ತೋಳಿನ ಮ್ಯಾಲ್ಹಾಳ ಸಿರಿದೇವಿ ॥೧೫೫೦॥

* * *

ಪಡುವಣ ದಿಕ್ಕೀಗೆ ಹೂಡೇವು ಎಂಟೆತ್ತು ।
ಕಾಡ್ಯಾವು ಎರಡು ಕೊನೆಹೋರಿ ।
ಕಾಡ್ಯಾವು ಎರಡು ಕೊನೆಹೋರಿ-ನಮ್ಮ ಬಸವ ।
ಕೋಡಣಸ ಬೇಡಿ ಮುನಿದಾನೋ ॥೧೫೫೧॥

* * *

ಘುಡಘುಡನೆ ಗುಡಿಗಿತ್ತು ಥಳಥಳನೆ ಮಿಂಚಿತ್ತು ।
ಹಂಪಿಯಾಚೆ ಮಳೆಬಿತ್ತು ।
ಹಂಪಿಯಾಚೆ ಮಳೆಬಿತ್ತು--ಪಂಪಯ್ನ ।
ತೇರಿನ ಮ್ಯಾಲೊಂದ್ಹನಿಬಿತ್ತ ॥೧೫೫೨॥

* * *

ಅಪ್ಪ ಗದುಗಿನ ಬಸವ ಇತ್ತ ಮಾರಿಯ ತಿರುವ ।
ಮುತ್ತs ತಂದೀನಿ ಮಗಡಕ್ಕ ।
ಮುತ್ತs ತಂದೀನಿ ಮಗಡಕ್ಕ-ನಿನ್ನಂತ ।
ಎತ್ತ ತಂದೀನಿ ಹದಿನಾರ ॥೧೫೫೩॥

* * *

ಹಾಸುಗಲ್ಲಿನ ಮ್ಯಾಲ ಹಾದು ಹೋದವನ್ಯಾರೋ ।
ಪಾದ ಮೂಡ್ಯಾವೋ ಪರಿಪರಿಯೇ ।
ಪಾದ ಮೂಡ್ಯಾವೋ ಪರಿಪರಿಯೇ-ನಮಬಸವ ।
ಹಾದು ಹೋಗ್ಯಾನೋ ಜಳಕsಕ ॥೧೫೫೪॥

* * *

ಸೊಟ್ಟs ಮಾರಿಯ ಹನಮ ಹೊಟ್ಟ್ಯಾಗರ ಹ್ಯಾಂಗಿದ್ದಿ ।
ಟೊಂಕದ ಮ್ಯಾಲೆ ಎಡಗಯ್ಯೋ ।
ಟೊಂಕದ ಮ್ಯಾಲೆ ಎಡಗೈಯ-ಇಟಗೊಂಡು ।
ಲೆಂಕೀಗೆ ಬೆಂಕಿ ಹಚ್ಚೀದೋ ॥೧೫೫೫॥

ಹಾವು ಹಗ್ಗವ ಮಾಡಿ ಚೋಳು ಚಕ್ಕಡಿ ಮಾಡಿ ।
ಊದೀನ ಕಡ್ಡಿ ನಗಮಾಡಿ ।
ಊದೀನ ಕಡ್ಡಿ ನಗಮಾಡಿ-ಪಾಂಡವರು ।
ಎರಿಯಾಗ ಎಡಿಯ ಹೊಡದಾರೋ । ॥೧೫೫೬॥

* * *

ಹೋಳಿಯ ದಂಡೀಮ್ಯಾಗ ಹಾಲನವಣೀ ಬಿತ್ತಿ ।
ಹಾರವರಿಗೆ ಬಂತೋ ಬಡತನಾ ।
ಹಾರವರಿಗೆ ಬಂತೋ ಬಡತನಾ- ಈ ಊರ ।
ರೈತರಿಗೆ ಬಂತೋ ಸಿರಿತನಾ ॥೧೫೫೭॥

* * *

ಎಂಟೆತ್ತು ಹೊಡಕೊಂಡು ಕಂಟ್ಯಾಗ ಬರುವಾಗ ।
ಗಂಟು ಬಿದ್ದಾಳೋ ವಿಧಿಮಾಯಿ ।
ಗಂಟು ಬಿದ್ದಾಳೋ ವಿಧಿಮಾಯಿ-ಹೊಟ್ಟೇಲಿ ।
ಬಂಟ ಹುಟ್ಟ್ಯಾನೋ ಬಸವಣ್ಣ ॥೧೫೫೮॥

* * *

ಬಾಳಿಯ ಕಾಯ್ದ್ಹಾಂಗ ಬಾಗ್ಯಾವು ನಿನಕೋಡು ।
ಬಾಗೀ ಬಾ ಬಸವಾ ಬಾಗಿಲಿಗೆ ।
ನುಗ್ಗೀಯ ಕಾಯ್ದ್ಹಾಂಗ ನೆಗ್ಗ್ಯಾವು ನಿನಕೋಡು ।
ಬಗ್ಗೀ ಬಾ ನಿನ ಗ್ವಾದಲಿಗೆ ॥೧೫೫೯॥

* * *

ಕಡಗದ ಗೆಜ್ಜೆಯ ಗೊಲ್ಲರ ಹುಡುಗಿ ।
ಮಜ್ಜೀಗೆ ಮಾರುತ ಬಂದಾಳು ನೋಡೋ ।
ಮಜ್ಜೀಗೆ ಮಾರಿದ ಕಾಸನು ಕೇಳಲು ।
ಗೆಜ್ಜೀಯ ಕಡಗವ ತೂರ್ಯಾಳಣ್ಣಾ ॥೧೫೬೦॥

* * *

ಹಾದೀಯ ಹೊಲನೋಡು ಗೋದಿಯ ಬೆಳಿನೋಡು ।
ಹಾದೀ ಹೋಗವಳ ನಗಿ ನೋಡು ।
ಹಾದೀ ಹೋಗವಳ ನಗಿ ನೋಡು-ಬಸವಣ್ಣಾ ।
ಹವಳದ ಬಾಯಿ ತೆರದೈತಿ ॥೧೫೬೧॥

ಬೆಟ್ಟದ್ಯಾಗಿನ ಬಿದಿರು ನಮ್ಹಟ್ಟೀಗೆ ನೆರಳಾದ್ಯೋ ।
ಕಾಡು ಗೊಲ್ಲನಿಗೆ ಕೊಳಲಾದ್ಯೋ ।
ಕಾಡು ಗೊಲ್ಲನಿಗೆ ಕೊಳಲಾದ್ಯೋ-ಮಾದೇವನ ।
ಮುತ್ತು ಕೇರಾಕ ಮರವಾದ್ಯೋ ॥೧೫೬೨॥

* *

ಗೆಜ್ಜಿ ಕಾಲಿನ ಬಸವ ಹೆಜ್ಜ್ಯಾಗಹೆಜ್ಜಿ ಇಡು ।
ಹೆಜ್ಜಿ ತಪ್ಪಿದರ ಬಡದೇನು ।
ಹೆಜ್ಜಿ ತಪ್ಪಿದರ ಬಡದೇನು-ಬಸವಣ್ಣಾ ।
ಹೆಜ್ಜ್ಯಾಗ ಜೆಜ್ಜಿ ಬಿತ್ತೇನು ॥೧೫೬೩॥

* *

ಹಳ್ಳದ ದಂಡ್ಯಾಗ ಹೋರಿಯು ಕಟ್ಟಿ ।
ಗೊಲ್ಲರ ಹುಡಿಗಿ ಏನೋ ತುಳಿದ ।
ಗೊಲ್ಲರ ಹುಡಿಗಿ ಏನೋ ತುಳಿದ-ಮುಳ್ಳು ।
ತುಳಿದು ಮೂರೊಂಬತ್ತು ತಿಂಗಳೋ ॥೧೫೬೪॥

*

ಕೂಡೀದ ಕುಡಿಹುಬ್ಬು ತೀಡೀದ ಬೈತಲೆ ।
ಕಾಡಿಗಣ್ಣು ಮೀನಧಾಂಗ ।
ಕಾಡಿಗಣ್ಣು ಮೀನಧಾಂಗ-ಎಲೆಹುಡಿಗಿ ।
ಜತೆಗಾಗಿ ಹೊಲದ ಹಾದ್ಯಾಗ ಕೂಡವಳ ॥೧೫೬೫॥

* * *

ಆರಾಣ್ಯದಡಿವ್ಯಾಗ ಆರುಕಾಲಿನ ಮಂಚ ।
ನಾಗರ ಹಾವು ತಲೆದಿಂಬು ।
ನಾಗರ ಹಾವು ತಲೆದಿಂಬು-ಶಿವಲಿಂಗ ।
ಹ್ಯಾಂಗ ಮಾಡ್ಯಾನ ಸಪನಿದ್ದೆ ॥೧೫೬೬॥

* * *

ನಡದರ ನಡುಸಣ್ಣ ಪದುಮ ಜಾತಿಯ ಹೆಣ್ಣೆ ।
ಮಾವೀನ ಹೋಳು ನಿನಕಣ್ಣು ।
ಮಾವೀನ ಹೋಳು ನಿನಕಣ್ಣು-ನನಗೆಳತಿ ।
ಮಾವ ಬಂದಾಗ ಒಳಗ್ಹೋಗ ॥೧೫೬೭॥

ರಾಗೀ ಬಣ್ಣದ ಕುದುರಿ ರಾಜ್ಯಾಽಕ ದೊಡ್ಡದು ।
ರಾಜರೊಳುರಾಜ ಮಳೆರಾಜ ।
ರಾಜರೊಳುರಾಜ ಮಳೆರಾಜ-ಬರುವಾಗ ।
ರಾಜೀವ ಕೈಯ ಮುಗದಾವ ||೧೫೬೮||

* * *

ಬೂದಽಗ ಬಾಸಿಂಗ ಭೂಮೀತಾಯಿಗೆ ದಂಡಿ ।
ಸಾಲ ಶರಣರಿಗೆ ಸರಮಾಲೆ ।
ಸಾಲ ಶರಣರಿಗೆ ಸರಮಾಲೆ-ಇಟಗೊಂತ ।
ಜಂಬಯ್ಯ ಗೆದ್ದ ಕೈಲಾಸ ||೧೫೬೯||

*

ಹಂತಿ ಹೊಡೆಯುತ ನೆನೆದೆ ಸಂತಸದಿ ಶರಣರನು ।
ಶಿವಶಂಕರ ನಿನ ಭಕ್ತರನು ।
ಶಿವಶಂಕರ ನಿನ ಭಕ್ತರನು-ನೆನಸಿದರ ।
ಸಂತಸದಿ ನೀಡೋ ವರ ಶಿವನೆ ||೧೫೭೦||

* * *

ಬೆಳ್ಳನಽವೆರಡೆತ್ತು ಬೆಳ್ಳೀಯ ಕೋಡಣಸು ।
ಹಳ್ಳಽದ ಹೊಲ ಹರಗ್ಯಾವೋ ।
ಹಳ್ಳಽದ ಹೊಲ ಹರಗ್ಯಾವೋ-ನಮ ಬಸವನ ।
ತೆಳ್ಳಽನ ಹೊಟ್ಟಿ ಹಸಿದಾವೋ ||೧೫೭೧||

* * *

ನಮ್ಮೂರ ಗೆಣೆಕಾರ್ತಿ ಮಣ್ಣೂರ ಬಣಜಿಗತಿ ।
ಪುಣ್ಯಾತಗಿತ್ತಿ ಪುರುಷಾನ ।
ಪುಣ್ಯಾತಗಿತ್ತಿ ಪುರುಷಾನ-ತೊಡಿಮ್ಯಾಲ ।
ಕುಂತುಗೊಂಡು ನಮ್ಮನ್ನ ಮರತಾಳೋ ||೧೫೭೨||

* * *

ಬೇಡ ಬೇಟಿಗೆ ಹೋಗಿ ಬಿಲ್ವ ಪತ್ತರಿಕೊಯ್ದು ।
ಬೇಡರ ಕಣ್ಣಪ್ಪ ಶಿವಪೂಜೆ ।
ಬೇಡರ ಕಣ್ಣಪ್ಪ ಶಿವಪೂಜೆ-ಮಾಡಿದರ ।
ನಾಡೆಲ್ಲ ನೋಡು ಶಿವರಾತ್ರಿ ||೧೫೭೩||

ಬೆಳ್ಳೀಯು ಮೂಡೀತು ಮೂಡsಲ ಹರಿದೀತು ।
ಬೆಳಗು ಮುಂಜಾನೆ ಸೂರ್ಯ ಚಂದ್ರಾಮನ ಕಾವsಲೋ ।
ಹೊತ್ತು ಮುಳಗೀತು ಕತ್ತಲಾದೀತು ।
ಲೆಂಕೀ ಹನುಮsನ ಕಾವsಲೋ ||೧೫೭೪||

* * *

ಬುದ್ಧಯ್ಯ ಬಕದಯ್ಯ ಎದ್ದು ತೂರಿದ ಮೆದವ ।
ಬಿದ್ದರಾಶೆಲ್ಲ ವಚನಗಳು ।
ಬಿದ್ದರಾಶೆಲ್ಲ ವಚನಗಳು--ಅಲ್ಲಮಗೆ ।
ಹುದ್ದೆ ಕಲ್ಯಾಣ ಗದ್ದಿಗೆಯು ||೧೫೭೫||

* * *

ಸುಗ್ಗೀಯ ಲಿಂಗಯ್ಯ ಸಗ್ಗsದ ದೊರೆಯಾದ ।
ಬಗ್ಗಿ ಶಿವ ಗಣವು ಕೈಮುಗಿದು ।
ಬಗ್ಗಿ ಶಿವ ಗಣವು ಕೈಮುಗಿದು--ಒಕ್ಕಲಿಗ ।
ಉಗ್ಗಡಿಸಿ ರಾಸಿ ವಕ್ಕ್ಯಾನೋ. ||೧೫೭೬||

* * *

ಧಾರವಾಡವ ನೋಡ ಏಳು ಹುಡೇವ ನೋಡ ।
ಬಾವೀಯ ನೋಡ ನೆಲೆನೋಡ ।
ಬಾವೀಯ ನೋಡ ನೆಲೆನೋಡ--ಅದರಾಗ ।
ನೇತಾಡುವ ತೊಲೆಕಂಬ ನೋಡೋ ||೧೫೭೭||

* * *

ರಾಶಿ ರಾಶಿಯು ಬೀಸಿ ಸೂಸಿ ಹರಿಯಿತು ಕಣವು ।
ಕೂಸು ಕೋಳೂರ ಕಡೆಗಾಳಿ ।
ಕೂಸು ಕೋಳೂರ ಕಡೆಗಾಳಿ--ಬೀಸಿಂದು ।
ಮೀಸಲೀ ರಾಶಿ ಜಂಗಮಕೆ ||೧೫೭೮||

* * *

ಹಂಡೆತ್ತು ಕೆಂದೆತ್ತು ಬಂಡಿಗೆ ಮಿಗಿಲಾದೆತ್ತು ।
ಸರಕಾರದೆತ್ತು ಶಿವರಾಮು ।
ಸರಕಾರದೆತ್ತು ಶಿವರಾಮ್ನು--ಮಾರಿದರ ।
ಸೂಳೀಯ ಸಾಲಾ ಹರಿಲಿಲ್ಲೋ ||೧೫೭೯||

ಕಣ್ಣ ಬೇಟೆಯನಾಡಿ ಹೊನ್ನs ಬಟ್ಟವ ತಿರುಗಿ ।
ಪನ್ನಂಗ ಧರಗ ಎಡೆಮಾಡಿ ।
ಪನ್ನಂಗ ಧರಗ ಎಡೆಮಾಡಿ--ಗರಿಕೂಗಿ ।
ಸಣ್ಣ ರಾಸ್ಯಾಕ್ಕಿ ಕಣತುಂಬಿ ॥೧೫೮೦॥

* * *

ಜಾಲಿ ಗಿಡದ ಕೆಳಗ ಜಾಡಿಸಿ ಗದ್ದಿಗಿ ಹಾಕಿ ।
ಜಾಣರಾಡ್ಯಾರೋ ಪಗಡೀನ ।
ಜಾಣರಾಡ್ಯಾರೋ ಪಗಡೀನ–ಪಾಂಡವರು ।
ಸೋತು ಹೋಗ್ಯಾರೋ ವನವಾಸ್ಕ ॥೧೫೮೧॥

* * *

ಗೌರೀ ಶಂಕರವ್ಯಾಲ ಸಿರಿಗಂಧದ ಮರಹುಟ್ಟಿ ।
ಅದರ ವ್ಯಾಲೆರಡು ಗಿಳಿಕೂತು ।
ಅದರ ವ್ಯಾಲೆರಡು ಗಿಳಿಕೂತು–ಓದ್ಯಾವ ।
ಶಿವ ಶರಣರ್ಹ್ಯಳೇ ಕಥೆಗೋಳ ॥೧೫೮೨॥

* * *

ಹಿಂಗಾರಿ ಹುಲುಸಾಗಿ ಮುಂಗಡವೆ ಬೆಳಿಬಂದು ।
ಟೆಂಗ ಬಿಳಿ ಜೋಳ ಒಕ್ಕುವದು ।
ಟೆಂಗ ಬಿಳಿ ಜೋಳ ಒಕ್ಕುವದು–ಬೆಳವಲವು ।
ಜಂಗಮುಕೆ ಎಡೆಯು ಹೊಸ ಬೆಳಕು ॥೧೫೮೩॥

* * *

ಹತ್ತಿ ಹೂವಿನ ಸೀರಿ ತೆಕ್ಕಿತುಂಬ ನೀರಿಗಿ ।
ಬಿಚ್ಚಿ ಹರಿವ್ಯಾಳೋ ಭೂಮ್ಯಾಗ ।
ಬಿಚ್ಚಿ ಹರಿವ್ಯಾಳೋ ಭೂಮ್ಯಾಗ–ಆ ತಾಯಿ ।
ಒಕ್ಕಲ್ಹೀರ್ಯಾಳೋ ಮೇಟ್ಯಾಗ ॥೧೫೮೪॥

* * *

ಕಣದೊಳಕ ಒಕ್ಕಲಿಗ ಧನಿಯೆತ್ತಿ ಬೆಳತನಕ ।
ಧನಿಯೆಂದು ಹಾಡಿ ಬೆಳಕೊಂಡು ।
ಧನಿಯೆಂದು ಹಾಡಿ ಬೆಳಕೊಂಡು--ಒಕ್ಕುವನು ।
ಕಣರಾಶಿ ಉಣಸಿ ಜಂಗಮುಕ ॥೧೫೮೫॥

ಬಂಡೀಯು ಹೊಡೆವಾಗ ಬಾರಕೋಲು ಬಿದ್ಹೋಯ್ತು ।
ಕಂಡಾಗ ನನಗ ಕೊಡಿರ್ಹೆಣ್ಣೆ ।
ಕಂಡಾಗ ನನಗ ಕೊಡಿರ್ಹೆಣ್ಣೆ-ನೀಟಾಗಿ ।
ನನ ಚಂದುಳ್ಳ ಮಾರಿ ನೆನಕೋಕ್ರಿ ||೧೫೮೬||

* * *

ಬಸವ ಹಲೆ ಹಲೆ ಹಂತಿ ಬಸವ ಹಲೆ ಹಲೆ ರಾಶಿ ।
ಬಸವ ಹುಲು ಹುಲುಸು ಕಣ ಕಣಕೆ ।
ಬಸವ ಹುಲು ಹುಲುಸು ಕಣಕಣಕೆ-ಒಕ್ಕಲಿಗ ।
ಬಸವ ಹೊಲಗೆಲಸ ಕಡೆತನಕ ||೧೫೮೭||

* * *

ಕಾ ಅನ್ನೊ ಕಾಗಿಲ್ಲ ಘುಕ್ ಅನ್ನೋ ಗೂಗಿಲ್ಲ ।
ನರಮನ್ಸ್ಯಾರ ಸುಳಿವೇ ಮೊದಲಿಲ್ಲ ।
ನರಮನ್ಸ್ಯಾರ ಸುಳಿವೇ ಮೊದಲಿಲ್ಲ-ಎಲಿಹೆಣ್ಣೆ ।
ಮುಂಧೋಗವಳು ನೀನ್ಯಾರೆ ||೧೫೮೮||

* * *

ಹರಿಚಂದ್ರ ಗಾಳಿಗಳು ಬರದೆ ಬೈಲಿಗೆ ಬೀಸಿ ।
ಸುರಿಮಳೆಯು ನಮ್ಮ ಬಳುವಲಿಕೆ ।
ಸುರಿಮಳೆಯು ನಮ್ಮ ಬಳುವಲಿಕೆ-ಕೋಳೂರ ।
ಬರಿಗಾಳಿ ಬೀಸಿ ಹಗೆತುಂಬಿ ||೧೫೮೯||

* * *

ತುಂಬಿ ಹೂವಿನ್ಹಾಂಗ ತುಂಬಳೆ ಗಂಗವ್ವ ।
ಎಂಭತ್ತು ಮೂಲೆ ಚೌಕದ ।
ಎಂಭತ್ತು ಮೂಲೆ ಚೌಕದ-ಏರಿಯಮ್ಯಾಲ ।
ಶಂಭುಲಿಂಗನ ಶಿವಪೂಜ್ಯೋ ||೧೫೯೦||

* * *

ಜಂತೆ ಗುಂಟಲಿ ಎಳೆದ ನಿಂತ ಕಣಕದ ರಾಶಿ ।
ಬಂತು ನಿನ್ ಹಾಡ ಹಾಡುತಲಿ ।
ಬಂತು ನಿನ್ ಹಾಡ ಹಾಡುತಲಿ-ಬೆಳತನಕ ।
ಚಿಂತಿಲ ದೆಡೆಯು ಶಿವನಡಿಗೆ ||೧೫೯೧||

ಮೂಗೀನ ಮೂಗುತಿ ನಕ್ಕರೆ ಕರಿಹಲ್ಲು ।
ಅಕ್ಕs ನೀನ್ಯಾರ ಮಗಳವ್ವ ।
ಅಕ್ಕs ನೀನ್ಯಾರ ಮಗಳವ್ವ-ಹಲಸಂಗಿ ।
ಗಚ್ಚಿನ ಗುಡಿಯ ಜಕ್ಕವ್ವ ||೧೫೯೨||

* * *

ಗುಂಡ ತಿಗರಿಯ ತಿರುವಿ ರುಂಡಧಾರಿಯು ಕುಣಿದು ।
ಥಂಡಿ ಬೀಳುತ್ಕಲಿ ಬೆಳವಲಕೆ ।
ಥಂಡಿ ಬೀಳುತಲಿ ಬೆಳವಲಕೆ-ಕುಂಬಾರ ।
ಗಿಂಡಿ ರಸಗಾಳಿ ಬೀಸುತಲಿ ||೧೫೯೩||

* * *

ಕರಿ ಎತ್ತು ಕಾಳಿಂಗ ಬಿಳಿಯೆತ್ತು ಮಾಲಿಂಗ ।
ಸರದಾರ ನನ್ನೆತ್ತು ಸಾರಂಗ ।
ಸರದಾರ ನನ್ನೆತ್ತು ಸಾರಂಗ-ಬರುವಾಗ ।
ಸರಕಾರವೆಲ್ಲ ನಡಿಗ್ಹೋತೋ ||೧೫೯೪||

ಸುಂಕರಾಶಿಯ ಕಣಕೆ ಸಂಕsದೇವನ ಬಲವು ।
ಕಂಕೀಯ ಕಣಕೆ ನಿನ ಬಲವು ।
ಕಂಕೀಯ ಕಣಕೆ ನಿನ ಬಲವು-ಮಾದೇವಿ ।
ಸೋಂಕಿದರೆ ರಾಶಿ ಕಣತುಂಬಿ ||೧೫೯೫||

* * *

ಕೋಡನ್ನು ತಿರುವುತ್ತ ಬಾಲವನು ಬೀಸುತ್ತ ।
ಬಸವ ಬಂದಾನೋ ಬಣವೀಗಿ ।
ಬಸವ ಬಂದಾನೋ ಬಣವೀಗಿ-ಮೆಟ್ಟಿ ಮೆಟ್ಟಿ ।
ಮೇಯೂಕ ನೀನ್ಯಾರ ಮಗನೋ ಚನಬಸವಾ ||೧೫೯೬||

* * *

ಅಡವಿ ಪೂಜೆಯ ಮಾಡಿ ಎಡೆ ಮಾಡಿ ಕೂರಿಗಿಗೆ ।
ಒಡೆಯ ಗೊಲ್ಲಾಳ ಬಿತ್ತಿದರೆ ।
ಒಡೆಯ ಗೊಲ್ಲಾಳ ಬಿತ್ತಿದರೆ-ಮಳೆಯಾಗಿ ।
ಕಡೆರಾಶಿತುಂಬಿ ಕೈಸೋತು ||೧೫೯೭||

ನವಣೀಯ ಹೊಲದಾಗ ಹವಣೀ ಮಂಚಿಗಿ ಹಾಕಿ ।
ಕವಣೀ ಕಾಲೀಗಿ ಹುರಿಗೆಜ್ಜಿ ।
ಕವಣೀ ಕಾಲೀಗಿ ಹುರಿಗೆಜ್ಜಿ-ಕಟಿಗೊಂಡು ।
ಗಿಡ್ಡಿ ಓಡಿಸ್ಯಾಳೋ ಗಿಳಿಹಿಂಡೋ ||೧೫೯೮||

* * *

ಬೆಚ್ಚು ಗಡಿಗೆಯು ಗುಂಡ ನುಚ್ಚು ಜೋಕನು ಚೆರಗ ।
ಬೆಚ್ಚ್ಯಾರ ಹೊಲಕೆ ಒಕ್ಕಲಿಗ ।
ಬೆಚ್ಚ್ಯಾರೆ ಹೊಲಕೆ ಒಕ್ಕಲಿಗ-ಚೆರಗೊಗೆದ ।
ಬಚ್ಚಿಡಲು ಹುಲುಸು ಹೊಲದೊಳಗ ||೧೫೯೯||

* * *

ಮುತ್ತೀನ ರಾಸ್ಯೋ ಮುಗಲುದ್ದ ಸೆಳ್ಯೋ ।
ಕಂಕಿ ಹಾರ್‍ಯಾವ ಕಂಕಣಕ ।
ಕಂಕಿ ಹಾರ್‍ಯಾವ ಕಂಕಣಕ-ಕಣದಾಗ ।
ಹೊಟ್ಟು ಹಾರೈತೋ ಪಟ್ಟಣಕ ||೧೬೦೦||

* * *

ಬೆಚ್ಚು ಹಾಕಿದ ಗಡಿಗೆ ಮುಚ್ಚಿಟ್ಟ ಬನ ಹುಲುಸು ।
ಬಚ್ಚಾದ ಬೆಳೆಯ ಕಣವುಕ್ಕಿ ।
ಬಚ್ಚಾದ ಬೆಳೆಯ ಕಣವುಕ್ಕಿ-ಗುಂಡಯ್ಯ ।
ಹೆಚ್ಚಾಯ್ತು ನಿನ್ನ ಶಿವಭಕ್ತಿ ||೧೬೦೧||

* * *

ಸರದಾರ ನನ್ನೆತ್ತು ಸರಗಂಟೆ ಕಟಿಗೊಂಡು ।
ಸವದತ್ತಿ ಏರೀನ ಏರ್‍ಯಾವೋ ।
ಸವದತ್ತಿ ಏರೀನ ಏರ್‍ಯಾವೋ-ನಮ್ಮೆತ್ತಿನ ।
ತೆಳ್ಳನ್ನ ಹೊಟ್ಟೆ ಹಸಿದಾವೋ ||೧೬೦೨||

* * *

ನಿನ್ನ ಹೆಸರಿಲೆ ಹಂತಿ ಹೊನ್ನ ಮುತ್ತಿನರಾಶಿ ।
ಹಣ್ಣಾದ ಮನಸಿನೊಕ್ಕಲಿಗ ।
ಹಣ್ಣಾದ ಮನಸಿನೊಕ್ಕಲಿಗ-ಒಕ್ಕುವನು ।
ಕನ್ನೆ ಶಿವಭಕ್ತಿದಾಸೋಹ ||೧೬೦೩||

ಭಾದ್ದೂರ ನನ್ನೆತ್ತು ಬಾಸಿಂಗ ಕಟಿಗೊಂಡು ।
ಬಾದಾವಿ ಕಣವಿ ಏರ್‍ಯಾವೋ ।
ಬಾದಾವಿ ಕಣವಿ ಏರ್‍ಯಾವೋ–ಬಸವಣ್ಣ ।
ಬನಶಂಕರಿ ದರುಶನ ಪಡದಾವೋ ॥೧೬೦೪॥

* * *

ನೇಗಿ ಹೊಡಿದ ಜಾಡ ನೇಗಲಿಯು ಒಕ್ಕಲಿಗ ।
ಹಾಲಿನಲಿ ಹಾಡಿ ಹುಲುಸಾಗಿ ।
ಹಾಲಿನಲಿ ಹಾಡಿ ಹುಲುಸಾಗಿ–ಭೂಲೋಕ ।
ತೂಗಿ ತೊನೆಯುವದು ಬೆಳೆತುಂಬಿ ॥೧೬೦೫॥

* * *

ಎಡದನ್ನs ಎರಡೆತ್ತು ಬಲದನ್ನ ಕರಕೊಂಡು ।
ಯಮನೂರ ಜಾತ್ರಿ ಮಾಡ್ಯಾವೋ ।
ಯಮನೂರ ಜಾತ್ರಿ ಮಾಡ್ಯಾವೋ–ನಮಫಕೀರ ।
ಪೀರಾಗ ತಲಿಯ ಬಾಗ್ಯಾವೋ ॥೧೬೦೬॥

* * *

ಚಿಕ್ಕು ಮಾರನ ಹಾಡು ಉಕ್ಕಿಸಿತು ತೆನೆರಾಸೀ ।
ಒಕ್ಕುದಕೆ ಸೋತು ಒಕ್ಕಲಿಗ ।
ಒಕ್ಕುದಕೆ ಸೋತು ಒಕ್ಕಲಿಗ–ಜಂಗಮಕೆ ।
ತೆಕ್ಕೆ ತೆಕ್ಕೆಯಲಿ ಉಡಿತುಂಬಿ ॥೧೬೦೭॥

* * *

ಕಡೆಕೀನ ಕಡೆಯೆತ್ತು ಕಟ್ಟಾಣಿ ಕರಿಗುಂಡ ।
ಕಡಿದಾದ ಹೊಲವ ಹರಿಗ್ಯಾವೋ ।
ಕಡಿದಾದ ಹೊಲವ ಹರಿಗ್ಯಾವೋ–ಪಿಂಗಳ್ಯಾ ।
ನಡುವೆ ಅಂಬೆ ಗಾಲ್ಹಚ್ಚಿ ಮಲಗ್ಯಾನೋ ॥೧೬೦೮॥

* * *

ನಡಕೀನ ನನ್ನೆತ್ತು ನಡಗೀಯ ಹಿಡಕೊಂಡು ।
ಯಡೂರ ಗಂಗನ್ನ ದಾಟ್ಯಾವೋ ।
ಯಡೂರ ಗಂಗನ್ನ ದಾಟ್ಯಾವೋ–ಶಿವಲಿಂಗ ।
ಹೊತ್ತು ಮುಣಗುದ್ರಾಗ ತಲುಪ್ಯಾವೋ ॥೧೬೦೯॥

ಹಾಡುತಲಿ ಒಕ್ಕಲಿಗ ಮಾಡುವನು ಸುಗ್ಗೀಯ ।
ನೀಡು ಚನ್ನಯ್ಯ ನೀ ಹುಲುಸ ।
ನೀಡು ಚನ್ನಯ್ಯ ನೀ ಹುಲಸ-ಕಾಡೊಳಗೆ ।
ನಾಡು ತುಂಬಿರಲಿ ಶಿವಭಕ್ತಿ ||೧೬೭೦||

* * *

ಕಸಗೂಡಿಸುವ ಹೆಣ್ಣೆ ಹಸನಾಯ್ತು ನಿನ್ನಟ್ಟಿ ।
ಹಸುಗೂಸಿನ್ಹಾಂಗ ನಿನತಿಪ್ಪಿ ।
ಹಸುಗೂಸಿನ್ಹಾಂಗ ನಿನತಿಪ್ಪಿ-ದಿನ ದಿನಕ ।
ಬೆಳೆದು ಬಂಗಾರ ತರತಾವೋ ||೧೬೭೧||

* * *

ಸುಗ್ಗೀಯು ಕಣಕೇಳೋ ಸಗ್ಗವದು ರೈತನಿಗೆ ।
ಹಿಗ್ಗಿ ಹಾಡುದಕೆ ಬೆಳವಲವು ।
ಹಿಗ್ಗಿ ಹಾಡುದಕೆ ಬೆಳವಲವು-ಮಲ್ಲಯ್ಯ ।
ಬುಗ್ಗೆ ಕುಣಿಯೂದಕೆ ಶಿವರೂಪ ||೧೬೭೨||

* * *

ಯಾಕ ಅಳತಾನಂತ ಅವರಿವರು ಕೇಳ್ಯಾರ ।
ಕಾಯುದ ಹಾಲ ಕೆನಿ ಬೇಡಿ ।
ಕಾಯುದ ಹಾಲ ಕೆನಿ ಬೇಡಿ-ಕೃಷ್ಣಯ್ಯ ।
ಕಾಡಿ ಕೈಯಿಂದ ಇಳಿದಾನೋ ||೧೬೭೩||

* * *

ಕುಣಿ ಕುಣಿದು ಮಲ್ಲಯ್ಯ ಮಣಿ ಮಣಿದು ಹಾಡಿದರ ।
ಕಣತುಂಬಿ ರಾಶಿ ಹೊರಸೂಸಿ ।
ಕಣತುಂಬಿ ರಾಶಿ ಹೊರಸೂಸಿ-ಒಕ್ಕಲಿಗ ।
ಮಣಿ ದಾಸೋಹ ಹೊಸ ಮಠಕೆ ||೧೬೭೪||

* * *

ತುರುಬಿನ ಮ್ಯಾಲ ಬೆಂಣೀಯ ಕುಡಿಕಿ ।
ತಲೆಯ ಮ್ಯಾಲ ಎಲಿಯು ಮೋಡಿಗಿ ।
ತಲೆಯ ಮ್ಯಾಲ ಎಲಿಯು ಮೋಡಿಗಿ-ಎಲೆ ಹುಡಿಗಿ ।
ತಿರುಗಿ ನೋಡು ಚಲುವರ್ಹುಡುಗನ್ನ ||೧೬೭೫||

ಮೂರು ಸಂಜೆ ಹೊತ್ತು ಮುತ್ತೈದಿ ಬಂದಾಳ ।
ಆರುತಿ ತಳಗಿ ಬಲಗೈಯ್ಯೋ ।
ಆರುತಿ ತಳಗಿ ಬಲಗೈಯಾಗ-ಹಿಡಕೊಂಡು ।
ತೂರ್‍ಯಾಳೋ ಮುತ್ತು ಹೊಲದಾಗ ||೧೬೧೬||

ಸುಂಕs ರೂಪವ ಹಾಕಿ ಕಂಕರಿಯು ಬಾರಿಸುತ ।
ಕಂಕಣವ ಕಟ್ಟಿ ಮಲ್ಲಯ್ಯ ।
ಕಂಕಣವ ಕಟ್ಟಿ ಮಲ್ಲಯ್ಯ-ಕುಣಿಯುದಕೆ ।
ಕರಿಕಿ ಹುಲುಸಾಗಿ ಕಣತುಂಬಿ ||೧೬೧೭||

ಬೆಳಿಯಾಗಿ ಬಂದೈತಿ ಬಸವಣ್ಣ ನಿಮುದಯದಿಂದ ।
ಹಂಪಿ ಜಾತ್ರೀಗೆ ಹೋಗ್ತೇನಿ ।
ಹಂಪಿ ಜಾತ್ರೀಗೆ ಹೋಗ್ತೇನಿ-ನಿಮಗಾಗಿ ।
ಹುರಿಗೆಜ್ಜಿ ಗಂಟೆ ತರತೀನಿ ||೧೬೧೮||

ಗೆಜ್ಜಿ ಕಟ್ಟಿದ ಕಾಲು ಹೆಜ್ಜಿ ಹಾಕು ಕುಣಿದು ।
ಸಜ್ಜಿ ನಿನ್ಹಾಡು ಬೆಳವಲಕ ।
ಸಜ್ಜಿ ನಿನ್ಹಾಡು ಬೆಳವಲಕ-ಮಲ್ಲಯ್ಯ ।
ಗುಜ್ಜಿ ಕಣದೊಳಗ ಬೆಳತನಕ ||೧೬೧೯||

* * *

ಆರು ಸಾವಿರ ಜಂಗು ಮೂರು ಸಾವಿರ ಗಂಟೆ ।
ದೂರ ಕೇಳ್ಯಾವು ಗಗನಕ್ಕ ।
ದೂರ ಕೇಳ್ಯಾವು ಗಗನಕ್ಕ-ನಮ ಬಸವ ।
ಧೂಳ ಎಬ್ಬಿಸ್ಯಾನೋ ಶಿವನೀಗಿ ||೧೬೨೦||

* * *

ನೆನಿಸಿ ಕುಣಿ ಕುಣಿದಾಡಿ ತೆನಿರಾಸಿ ಹಂತ್ಯಾಗ ।
ಬನದ ಹುಲುಸೆಲ್ಲ ಕಣಕೆರಗಿ ।
ಬನದ ಹುಲುಸೆಲ್ಲ ಕಣಕೆರಗಿ-ಮಲ್ಲಯ್ಯ ।
ಉಣಿಸೊ ಬೆಳವಲವ ಬೆಳಿಹೊಕ್ಕು ||೧೬೨೧||

ಬಾಗ ಬಂಕನಾಥ ಕೂಡಲ ಸಂಗಮನಾಥ ।
ಜೋಡಿ ದೇವಗಿರಿ ಬಸವಣ್ಣ ।
ಜೋಡಿ ದೇವಗಿರಿ ಬಸವಣ್ಣ–ಹೋಗಾಗ ।
ಜೋಡೀಲಿ ಬಂಡಿ ಬಿಗಿದೇವೋ ||೧೬೨||

* * *

ಚೌಡ ಕುಣಿಯುವ ಹಾಡ ಹಾಡಿ ಹೊಲಹದಮಾಡಿ ।
ಮೋಡ ಮಳೆಗರೆಯೆ ಒಕ್ಕಲಿಗ ।
ಮೋಡ ಮಳೆಗರೆಯೆ ಒಕ್ಕಲಿಗ–ಬಿತ್ತಿದರೆ ।
ನಾಡೆಲ್ಲ ಬೆಳಸು ಹುಲುಸಾಗಿ ||೧೬೩||

ಸುಗ್ಗೀ ದಾಸೋಹೆಂದು ಹಿಗ್ಗೊ ಬೆಳವಲ ನೋಡು ।
ಹುಗ್ಗೀ ಹೋಳಿಗೆಯ ನಿನ್ನಾಡು ।
ಹುಗ್ಗಿ ಹೋಳಿಗೆಯ ನಿನ್ನಾಡು–ಸುಗ್ಗ್ಯಾಟ ।
ನಗ್ಗ್ಯೇಡು ಇದಕ ಮಲೆನಾಡು ||೧೬೪||

* * *

ಹಾರಿ ಬರುವದು ಹುಲುಸು ಏರಿಮಾದನ ಪತ್ರಿ ।
ಸೂರಿ ಹಾಡುವೆನು ನಿನ್‌ಹಾಡ ।
ಸೂರಿ ಹಾಡುವೆನು ನಿನ್‌ಹಾಡ–ಬೆಳತನಕ ।
ಯಾರು ಕೈತಟ್ಟಿ ನಿಲ್ಲುವರು । ||೧೬೫||

* * *

ಶರಣ ಶರಣೆಂಬುವೆವು ಹರಣ ಹಾರುವ ತನಕ ।
ಕರುಣಿಸರಿ ಶರಣ ಬೊಮ್ಮಯ್ಯ ।
ಕರುಣಿಸರಿ ಶರಣ ಬೊಮ್ಮಯ್ಯ–ನಮಗಿನ್ನು ।
ಹರಸಿರಿ ಹುಲುಸು ಹೊಲ್ಲುಲ್ಲಿಗೋ ||೧೬೬||

ಬೆಳ್ಳಿ ಮೂಡುವ ಮುನ್ನ ಕೊಳ್ಳ ಹೊನ್ನವ ತಿರುಗಿ ।
ಕಳ್ಳಂದ ಬೇಟಿಯಾಡುವನು ।
ಕಳ್ಳಂದ ಬೇಟಿಯಾಡುವನು–ಕಣದೊಳಗೆ ।
ಒಳ್ಳೆ ಹಂತ್ಯಾಗಿ ಹುಲುಸಾಗಿ ||೧೬೭||

ಇಳಿಹಾಳ ಬೊಮ್ಮಯ್ಯ ಹೊಲಗೆಲಸ ಕಾಯಕವ ।
ನಲುಮೆಯಲಿ ಸುಗ್ಗಿ ದಾಸೋಹ ।
ನಲುಮೆಯಲಿ ಸುಗ್ಗಿ ದಾಸೋಹ–ಹರಸೇವೆ ।
ಸಲಿಸಿ ಲಿಂಗದೊಳು ಬಯಲಾದ ॥೧೬೨೮॥

* * *

ಮೂತಾಳ ಕೂರಿಗಿಗೆ ಯಾತರದು ಹಂಗಿಲ್ಲ ।
ಭೂತಾಯಿ ಬೆಳೆಯೆ ಒಕ್ಕಲಿಗ ।
ಭೂತಾಯಿ ಬೆಳೆಯೆ ಒಕ್ಕಲಿಗ–ಜಗದೊಳಗೆ ।
ಕೋತುಳ್ಳ ಮೇಳಿ ಬಲಗೊಂಡ ॥೧೬೨೯॥

* * *

ಕಡೆಯು ಬಲಕಿನ ತಾಳ ಎಡೆಯಾಯ್ತು ಅರಸನಿಗೆ ।
ಎಡಗಡೆಯು ತಾಳ ಪಶುಪಕ್ಷಿ ।
ಎಡಗಡೆಯು ತಾಳ ಪಶುಪಕ್ಷಿ-ಜೀವನಕೆ ।
ನಡುವಿನಾ ತಾಳ ರೈತನಿಗೆ ॥೧೬೩೦॥

* * *

ಒಂದು ತಾಳದ ಬೆಳೆಯ ಬಂದವರಿಗಿಲ್ಲೆನ್ನ ।
ಮುಂದು ಕೊಡುಗೈಯ ಒಕ್ಕಲಿಗ ।
ಮುಂದು ಕೊಡುಗೈಯ ಒಕ್ಕಲಿಗ–ನಾಡೊಳಗೆ ।
ಹೊಂದಿ ದಾಸೋಹ ಶಿವ ಮತಕೆ ॥೧೬೩೧॥

ಕಣವೆ ಮಂಟಪ ಮಾತು ಗುಣವಂತ ಬಸವೇಶ ।
ಹೊಣೆಗಾರ ರೈತ ದಂಡೇಶ ।
ಹೊಣೆಗಾರ ರೈತ ದಂಡೇಶ–ಕಣಮೇಟಿ ।
ಗಣಿ ಗುರುವು ಕಣಕೆ ಪ್ರಭುಲಿಂಗೋ ॥೧೬೩೨॥

* * *

ಮೂರು ಕಾಲಿನ ಮೆಟ್ಟು ಮೂರುಲಿಂಗಗಳೇನೊ ।
ತೂರುವ ಜೀವಿ ಚಿತ್‌ಕಳೆಯು ।
ತೂರುವ ಜೀವಿ ಚಿತ್‌ಕಳೆಯು–ವಚನಗಳು ।
ತೂರಿದಾ ರಾಶಿ ಶಿವಮತಕೆ ॥೧೬೩೩॥

ಕಕ್ಕಯ್ಯ ಸೆಕ್ಕಾಗಿ ಚೊಕ್ಕ ಮುತ್ತಿನ ರಾಶಿ ।
ಇಕ್ಕಲಿಯಽ ಎಂಟು ಕಟ್ಟುಗಳು ।
ಇಕ್ಕಲಿಯಽ ಎಂಟು ಕಟ್ಟುಗಳು–ಹುಲುಸಾತ ।
ಉಕ್ಕಿದವು ರಾಶಿ ವಚನಗಳು ॥೧೬೩೪॥

* * *

ಹಂತಿ ಗಣ್ಣಿಯು ಚೆನ್ನ ಚಿಂತೆ ಇಲ್ಲದ ರಾಶಿ ।
ಬಂತು ಮಹ ಮನೆಗೆ ಬಸವಣ್ಣ ।
ಬಂತು ಮಹಮನೆಗೆ ಬಸವಣ್ಣ–ಉಣಿಸಿದನು ।
ನಿಂತು ಶಿವಮತವ ಅಂಬಲಿಯ ॥೧೬೩೫॥

* * *

ನೂರೊಂದು ಶರಣರು ನೂರೊಂದು ಬಂಟಽರು ।
ಸಾರಿ ಹೇಳ್ಯಾನೋ ಒಕ್ಕಲಿಗ ।
ಸಾರಿ ಹೇಳ್ಯಾನೋ ಒಕ್ಕಲಿಗ–ಹೊಲಸುಗ್ಗಿ ।
ಧೀರ ಕಾಯಕದ ದಿನವೆಂದು ॥೧೬೩೬॥

* * *

ಶರಣ ಮಡಿವಾಳಾದ ಕರಿಬಂಟ ಕಣದಾಗ ।
ಹರಳಾದ ಕಣಕೆ ಬಿಳಿಬಂಟ ।
ಹರಳಾದ ಕಣಕೆ ಬಿಳಿಬಂಟ–ಪ್ರಭುಲಿಂಗ ।
ಗುರು ಬುದ್ಧಿವಂತ ಲಿಂಗಾದಾ ॥೧೬೩೭॥

* * *

ಬಿಜ್ಜಳನ ವಧೆಯಾಯ್ತು ಹೆಜ್ಜೆ ಮೀರಿತುನಾಡು ।
ಕಜ್ಜ ಹದಗೆಟ್ಟು ಶಿವಶರಣ ।
ಕಜ್ಜ ಹದಗೆಟ್ಟು ಶಿವಶರಣ–ರೂಳಿಗವು ।
ಸಜ್ಜು ಗೇಡಾಗಿ ಊರ್ಬಿಟ್ಟು ॥೧೬೩೮॥

* * *

ಈ ಊರ ಸುತ ಮುತ್ತ ವಟ್ಟಟ್ಟಿ ಗಿಡಹುಟ್ಟಿ ।
ವಡ್ಡಽರ ಹುಡುಗಿ ಗೆಳೆತಽನ ।
ವಡ್ಡಽರ ಹುಡುಗಿ ಗೆಳೆತಽನ–ಮಾಡಿದರ ।
ಗೊಡ್ಡೆಮ್ಮಿ ಹಾಲು ಉಣಿಸ್ಯಾಳೋ ॥೧೬೩೯॥

ಕಲ್ಲಿನ ಕಡಬು ಮಾಡಿ ಮುಳ್ಳ ಶಾವಿಗಿ ಮಾಡಿ ।
ಬನ್ನಿ ಎಲಿಯಾಗ ಎಡಿಮಾಡಿ ।
ಬನ್ನಿ ಎಲಿಯಾಗ ಎಡಿಮಾಡಿ-ಪಾಂಡವರು ।
ಉಂಡು ಹೋಗ್ಯಾರೋ ವನವಾಸ್ಕ ॥೧೬೪೦॥

* * *

ಕೆಂದ ಗುದರಿಯನೇರಿ ಕೆರಿಯ್ಯಾಗ ನಿಂತವನ್ಯಾರ ।
ಅಂಜತೀನಯ್ಯ ಹೆಸರ್ಹೇಳ ।
ಅಂಜತೀನಯ್ಯ ಹೆಸರ್ಹೇಳ-ಲೋಕದ ।
ಮಂಜಿನ್ಯಾಗಿರುವ ಮಳಿರಾಜ ॥೧೬೪೧॥

* * *

ಇಂಜ್ಯಾಣದಡಿವ್ಯಾಗ ಮಂಜು ಬಿದ್ದೈತಿ ತಾಯಿ ।
ಮಂಜಲ್ಲ ಮಳೆಯು ಸರುವಂದೆ ।
ಮಂಜಲ್ಲ ಮಳೆಯು ಸರುವಂದೆ-ಶಿವಲಿಂಗ ।
ಕೆಂಜೆಡೆ ಬಿಚ್ಚ್ಯಾರ ಬಿಸಲೀಗೆ ॥೧೬೪೨॥

* * *

ಬಾಳೀಯ ವನದಾಗ ಬಾಯಿ ಮಾಡುವನ್ಯಾರ ।
ಅಯ್ಯುs ಹಡೆದವ್ವ ನನತಮ್ಮ ।
ಅಯ್ಯುs ಹಡೆದವ್ವ ನನತಮ್ಮ-ಬಾಳೀಗೆ ।
ನೀರ ಬಿಡತಾನ ನಿಂತಗೊಂಡ ॥೧೬೪೩॥

* * *

ಹರಿಯುs ಹೊತ್ತೀಲೆದ್ದು ನರಿಯು ಮಾರಿಯು ಕಂಡೆ ।
ತಿರುಗಾಡದ ಕಂಡೆ ಪವಳ್ಯಾಗ ।
ತಿರುಗಾಡದ ಕಂಡೆ ಪವಳ್ಯಾಗ-ಶಿವಲಿಂಗ ।
ಸಾಲ ಸಂಪೀಗಿ ವನದಾಗ ॥೧೬೪೪॥

* * *

ಕಾಸೀಗಿ ಹೋಗಾಗ ಏಸೊಂದು ದಿನ ಬೇಕು ।
ತಾಸೊತ್ತಿನ್ಹಾದಿ ನನಬಸವ ।
ತಾಸೊತ್ತಿನ್ಹಾದಿ ನನಬಸವ-ನ ಕರಕೊಂಡು ।
ಹರಗಿಡರ ಕರಕೀಯ ಹೊಲವೆಲ್ಲ*ಹಸನಾತೋ ॥೧೬೪೫॥

ಶರಣsರ ನೆನೆವರ ಸರಗೀಯು ಇಟ್ಹಾಂಗ ।
ಅರಳೋ ಮಲ್ಲಿಗೀ ಮುಡಿದ್ಹಾಂಗ ।
ಅರಳೋ ಮಲ್ಲಿಗೀ ಮುಡಿದ್ಹಾಂಗ–ಕಲ್ಯಾಣದ ।
ಶರಣರ್ನ ನೆನೆ ನನ ಮನವೆ ||೧೬೪೬||

* * *

ಜೋಕಮಾರ ಹುಟ್ಟsಲಿ ಜೋಕಮಾರ ಬೆಳಿಯsಲಿ ।
ಆಕsಳ ಹಾಲ ಕರೆಯಲಿ ।
ಆಕsಳ ಹಾಲ ಕರೆಯಲಿ–ಹರಿಯಾಗ ।
ಬೇಗೆದ್ದು ಮೊಸರs ಕಡೆಯsಲ್ಯೋ ||೧೬೪೭||

* * *

ದೈವ ದೇವರ ಹಂತಿ ಭವದೊಳಗೆ ನಮ್ ಹಂತಿ ।
ತೇದುಂಡ ಹಂತಿ ನಮ್ ಬಾಳು ।
ತೇದುಂಡ ಹಂತಿ ನಮ್ ಬಾಳು--ಒಕ್ಕಲಿಗ ।
ಕೋದ ತೆನಿಹಂತಿ ಜನುಮಾಕೋ ||೧೬೪೮||

* * *

ಚಿಂತಿ ಮಾಡಲಿಬ್ಯಾಡ ಛೀ ಹುಚ್ಚ ನನಬಸವ ।
ಚಿಂತ್ಯಾಗ ಕಾಯ ಇಳಿದೀತು ।
ಚಿಂತ್ಯಾಗ ಕಾಯ ಇಳಿದೀತು--ಪಾಂಡವರು ।
ಅಂಥವರಿಗುಂಟೋ ವನವಾಸಾ ||೧೬೪೯||

* * *

ಗುಡ್ಡದ ಮಲ್ಲಯ್ಯ ಗುಡಿಯೆಲ್ಲ ಬಂಗಾರ ।
ಹಾಸೀಗಿ ಕಲ್ಲು ಹವಳsವು ।
ಹಾಸೀಗಿ ಕಲ್ಲು ಹವಳsವು–ಮಲ್ಲಯ್ಯ ।
ಬೀಸಣಿಕಿಗೆಲ್ಲ ಬಿಡಿ ಮುತ್ತು ||೧೬೫೦||

* * *

ಮಾವನ ಮಗಳು ಕಣ್ಣೀಗಿ ಒಳ್ಳೇಕಿ ।
ಸುಣ್ಣsದ ತಿಳಿನೀರು ಒಲಿಮುಂದ ।
ಸುಣ್ಣsದ ತಿಳಿನೀರು ಒಲಿಮುಂದ–ಇಟಗೊಂಡು ।
ಗಿಣ್ಣsದ ಹಾಲಂತ ಬಡಿಸ್ಯಾಳೋ ||೧೬೫೧||

ಕಪ್ಪುರದ ಬೆಳಕೀಲಿ ಗುಗ್ಗೂಳ ಹೊಗೆಯsಲಿ ।
ಅಪ್ಪ ರಾಚಣ್ಣ ಬೆವತಾನ ।
ಅಪ್ಪ ರಾಚಣ್ಣ ಬೆವತಾನ-ಪೂಜಾರಿ ।
ಮುತ್ತೀನ ಚೌರಿ ನೀ ಬೀಸೋ ॥೧೬೫೨॥

* * *

ಆ ವರ್ಷ ಹಂಗಾತು ಈ ವರ್ಷ ಹಿಂಗಾತು ।
ಮುಂದೀನ ವರುಷ ಬೆಳಿ ಬರಲ್ಯೋ ।
ಮುಂದೀನ ವರುಷ ಬೆಳಿ ಬರಲ್ಯೋ--ನಮ ಬಸವನ ।
ಕೊಳ್ಳಾಗ ಬಂಗಾರ್ದ ಸಿರಿಗೆಜ್ಜ್ಯೋ ॥೧೬೫೩॥

* * *

ಏಳs ಯಲ್ಲವ್ವ ತಾಯಿ ಎಷ್ಟೊತ್ತ ಮಲಗೀದಿ ।
ಹೂವೆಂಜಲಾಗಿ ಹುಳ ಮುಟ್ಟಿ ।
ಹೂವೆಂಜಲಾಗಿ ಹುಳ ಮುಟ್ಟಿ-ಕೊಳ್ಳsದ ।
ನೀರೆಂಜಲಾಗಿ ಗಿಳಿ ಕುಡಿದು ॥೧೬೫೪॥

* * *

ಕುಡಗುಂಟೀ ದಾರ್‍ಯಾಗ ಗಿಡ ಸಣ್ಣs ಮಲ್ಲೀಗಿ ।
ಕಿಡಿಗೇಡಿ ನಮ್ಮ ಬಸವಣ್ಣ ।
ಕಿಡಿಗೇಡಿ ನಮ್ಮ ಬಸವಣ್ಣ--ಬರುವಾಗ ।
ಗಿಡಕೆರಡ ಹೂವ ಉದಿರ್‍ಯಾವ್ಹೋ ॥೧೬೫೫॥

* * *

ಬಾಗೇವಾಡಿ ಬಸವ ಬಹಳ ದೊಡ್ಡವನೆಂದು ।
ಬೆಳ್ಳಿಯ ಮಗಡ ಮಾಡ್ಸೇನೋ ।
ಬೆಳ್ಳಿಯ ಮಗಡ ಮಾಡ್ಸೇನೋ--ಬಸವಣ್ಣ ।
ಹೊನ್ನ ಹಣಿಕಟ್ಟ ಬಿಗಿಸೇನೋ ॥೧೬೫೬॥

* * *

ಹಕ್ಕಲ ಗೋದಿಯ ರೊಟ್ಟಿ ಸಕ್ಕರಿ ಬಾಳಿಹಣ್ಣು ।
ಚಿಕ್ಕ ಯಮನೂರ ಕೆರಿಯಾಗ ।
ಚಿಕ್ಕ ಯಮನೂರ ಕೆರಿಯಾಗ--ಉಣಿಸೀದ ।
ಹುಡುಗೀನ ಮರಿಯಂದs ರ್‍ಯಾಂಗ ಮರಿಯsಲಿ ॥೧೬೫೭॥

ಹೊಳಿಯ ದಂಡಿಯ ಮ್ಯಾಲ ಎಳಿಯ ಸವತಿಕಾಯಿ ।
ಹರಿಯಂದs ರ್‍ಹ್ಯಾಂಗ ಹರಿಯsಲಿ ।
ಹರಿಯಂದs ರ್‍ಹ್ಯಾಂಗ ಹರಿಯಲಿ-ಆ ಬಾಲೀನ ।
ಮರಿಯಂದs ರ್‍ಹ್ಯಾಂಗ ಮರಿಯsಲಿ ॥೧೬೫೮॥

* * *

ಅಚ್ಚ ಬಣಜಿಗರ ಹುಡುಗಿ ಹಚ್ಚ್ಯಾಳ ವಿಭೂತಿ ।
ಚಿತ್ತಾರದ ಕೊಡ ಬಗಲಾಗ ।
ಚಿತ್ತಾರದ ಕೊಡ ಬಗಲಾಗ-ಇಟಗೊಂಡು ।
ಗಚ್ಚಿನ ಭಾವಿ ಇಳದಾಳೋ ॥೧೬೫೯॥

* * *

ಡೋಣೀಗಿ ಮಳಿಬಡಿದು ಡಂಬsಳ ಕೆರಿತುಂಬಿ ।
ಆಲೂರ ಮರಡಿ ಹಸನಾಗಿ ।
ಆಲೂರ ಮರಡಿ ಹಸನಾಗಿ-ಗದುಗೀನ ।
ಜೋಡ ಹನಮಪ್ಪ ಹೆಸರಾಗಿ ॥೧೬೬೦॥

*

ಇಚ್ಚಂಗಿ ಕಲ್ಲೀಲೆ ಕಟ್ಟ್ಯಾತೊ ಬಾಗಲಕೋಟಿ ।
ಎತ್ತs ನೋಡಿದರ ಹುಲಿಮುಕ ।
ಎತ್ತs ನೋಡಿದರ ಹುಲಿಮುಕದ-ಅಗಸ್ಯಾಗ ।
ಬಿಚ್ಚಿ ಮಾರ್‍ಯಾವ ಬಿಳಿಮೊಗ್ಗಿ ॥೧೬೬೧॥

* * *

ಆ ಬಳ್ಳಿ ಈ ಬಳ್ಳಿ ತೋಟದ ಎಲಿಬಳ್ಳಿ ।
ತೆಗ್ಗಿನ್ಯಾಗೈತೋ ತಂಬ್ರಳ್ಳಿ ।
ತೆಗ್ಗಿನ್ಯಾಗೈತೋ ತಂಬ್ರಳ್ಳಿ-ಈ ಊರ ।
ದಿಬ್ಬದಾಗೈತೋ ರಸಬಳ್ಳಿ ॥೧೬೬೨॥

* * *

ಬಿತ್ತಿ ಕೂರಿಗಿ ಮುಂದ ಬಿದ್ದಾನೋ ಮಳಿದೇವ ।
ಎದ್ದಾನೋ ಒಕ್ಕಲಿಗ ಬೆಳತsನ ।
ಎದ್ದಾನೋ ಒಕ್ಕಲಿಗ ಬೆಳತsನ-ಕೂರಿಗಿಕುಂಟಿ ।
ಬಿದ್ದಾವೊ ಬಡಿಗsನ ಅರಮನ್ಯಾಗ ॥೧೬೬೩॥

ಈ ಊರ ಸುತಮುತ್ತ ಅಗಸೀಯು ಗಿಡಹುಟ್ಟಿ ।
ಅಗಸ್ಯಾಕ್ರ ಹುಡುಗಿ ಗೆಳೆತನ ।
ಅಗಸ್ಯಾಕ್ರ ಹುಡುಗಿ ಗೆಳೆತನ-ಮಾಡಿದರ ॥
ಗುಲಗಂಜಿ ತೂಕ ಬಂಗಾರೊ ॥೧೬೬೪॥

* * *

ನೀರಿಗ್ಹೋಗುವ ಜಾಣಿ ನಿಲ್ಲ ನಾ ಬರತೇನಿ ।
ನಿನ್ನಾಣಿ ನಿನ್ನ ಕೊಡದಾಣಿ ।
ನಿನ್ನಾಣಿ ನಿನ್ನ ಕೊಡದಾಣಿ–ಕೈಯನ ।
ಹಸಿರು ಬಳೆಯಾಣಿ ಹೊಳೆಯಾಣಿ ॥೧೬೬೫॥

* * *

ಹಂಡಬಂಡದ ಕೌದಿ ಗೊಂಡೇದ ನಡುಕಟ್ಟು ।
ಗಂಡಿಲ್ಲೇನ ಇವಳೀಗೆ ।
ಗಂಡಿಲ್ಲೇನ ಇವಳೀಗೆ–ಅಡಿವೆನ್ನ ।
ಗಂಡರಳಿ ಬಣ್ಣ ತಿರಿಗೈತೋ ॥೧೬೬೬॥

ಶಿರಹಟ್ಟಿ ದಾರ್‍ಯಾಗ ಶ್ರೀಗಂಧದ ಮರಹುಟ್ಟಿ ।
ನರಗುಂದಕ ಬೇರು ಇಳಿದಾವೋ ।
ನರಗುಂದಕ ಬೇರು ಇಳಿದಾವೋ–ಯಮನೂರ ।
ದರಗಾಕ ಮಗ್ಗಿ ಸುರದಾವೋ ॥೧೬೬೭॥

* * *

ಊರೀಗಿ ಗೌಡಾಗಿ ಭಾರೀ ಬುದ್ಧಿರಲಿ ।
ನೀರೀಗೆ ಹೋಗ್ಯಾರೋ ಬಾಲ್ಯಾರು ।
ನೀರೀಗೆ ಹೋಗ್ಯಾರೋ ಬಾಲ್ಯಾರು–ಕೈಯನ್ನ ।
ಹಸಿರು ಬಳಿಗ್ಯಾಕ ಮನಸೋತ್ಯೋ ॥೧೬೬೮॥

* * *

ಎರಿಯ ಹೊಲದನ ಬಂಡಿ ವನವನದು ಬರುವಾಗ ।
ಹೊಲಗೇರಿ ಮುಂದ ನಗ ಮುರಿದು ।
ಹೊಲಗೇರಿ ಮುಂದ ನಗ ಮುರಿದು--ಈ ಊರ ।
ಹಾರೋರ ಹುಡಿಗಿ ನಡ ಮುರಿದ ॥೧೬೬೯॥

ಜಂತಗುಂಟೆಯು ಹಲ್ಲು ಎಂಥಾವ ಕೆತ್ತ್ಯಾನ।
ಅಂತರಲಿ ಇರುವ ಪಂಚಾಳಿ।
ಅಂತರಲಿ ಇರುವ ಪಂಚಾಳಿ-ಕೆತ್ತಿದಗುಂಟಿ।
ಚಿಂತಿಲ್ಲದ ಕಂಟಿ ತಗದಾವೋ ||೧೬೭೦||

* * *

ಹಂತೀಯ ಹೊಡೂತ ಯಾವನ್ನ ನೆನದೇನೊ।
ಹಾಲೇಶನೆಂಬ ಶರಣಯ್ಯೋ।
ಹಾಲೇಶನೆಂಬ ಶರಣನನ್ನ-ನೆನೆದರ।
ಬಂದಂಥ ವಿಘ್ನ ಬಯಲಾತೋ ||೧೬೭೧||

* * *

ಬಸವಣ್ಣ ಹೇಣsತಿ ಹಸುಮಗಳು ನೀಲವ್ವ।
ಬಸಿರಾದರ್ಹ್ಯಾಂಗ ನಡದಾಳೋ।
ಬಸಿರಾದರ್ಹ್ಯಾಂಗ ನಡದಾಳೊ-ಆತಾಯಿ।
ಗೋದಿ ಹಸಿಯಾಗಿ ಕುಣಿದಾಳೋ ||೧೬೭೨||

* * *

ಸೀತಾಗ ಒಯ್ಯಾಗ ಶ್ರೀ ರಾಮು ಸಣ್ಣಽವ।
ಆಗ ಹನುಮಂತ ಹಸುಮಽಗ।
ಆಗ ಹನುಮಂತ ಹಸುಮಽಗ-ತಾ ಕುಂತ।
ಸೀತವ್ನ ಶೆರಿಯ ಬಿಡಿಸ್ಯಾನೋ ||೧೬೭೩||

* * *

ಉದ್ದನ್ನ ಹನುಮಂತ ಬುದ್ಧಿಲೇ ಶಮರಂತ।
ಒದ್ದ ಹಾರ್ಯಾನೊ ಗಗ್ಗನಕ।
ಒದ್ದ ಹಾರ್ಯಾನೊ ಗಗನಕ-ಸೀತವ್ನ।
ಸುದ್ದಿ ತಂದಾನೋ ಗಳಿಗ್ಯಾಗ ||೧೬೭೪||

* * *

ಓಂಟ್ಮರಿಯ ಒಣಕೊಬ್ರಿ ಗೋಕಾವಿ ಪುಡಿಬೆಲ್ಲ।
ಬೇಕ ಬೆಳ್ಳಟ್ಟಿ ಬಿಳಿಗೆಣಸು।
ಬೇಕ ಬೆಳ್ಳಟ್ಟಿ ಬಿಳಿಗೆಣಸು-ತಂದೀನಿ।
ಓಸೀಕದ್ದೆಣ್ಣು ಉಣ್ಣವಳ ||೧೬೭೫||

ಹದಿನಾರು ಎತ್ತುಗೊಳ ನೋಡು ಇದರು ಗ್ಯಾದಲಿ ನೋಡು ।
ಸದರ ನೋಡಾಕ ಶಿವಬಂದ ।
ಸದರ ನೋಡಾಕ ಶಿವಬಂದ-ನಮುಬಸವ ।
ಮೋದು ಮಲಗ್ಯಾನೋ ಸದರೀಗೆ ॥೧೬೭೬॥

* * *

ಹೋಗವನ ಕೈಯಾಗ ಹೊಳೆವ ಹೊನ್ನುಂಗುರ ।
ಹೋಗ ನಿನದಾರಿ ಬಲುದೂರ ।
ಹೋಗ ನಿನದಾರಿ ಬಲುದೂರ-ಹಂಪೀಯು ।
ತೇರು ನಿನಗಾಗಿ ತರಿಬೈತ್ಯೋ ॥೧೬೭೭॥

* * *

ಆರೆತ್ತಿನ ಕೂರಿಗಿ ಹೋರಿಯು ಬೆಳಿಸ್ಯಾಲೋ ।
ಕೋರು ಮಾಡ್ಯಾರೋ ಧರ್ಮಕರ ।
ಕೋರು ಮಾಡ್ಯಾರೋ ಧರ್ಮಕರ-ಹೊಲದಾಗ ।
ಬೋರ್ಯಾಡತಾನ ಮಳಿರಾಯ ॥೧೬೭೮॥

* * *

ಸಾಸ್ವಿ ಬಣ್ಣದ ಸೀರಿ ರಾಸಿಗಿ ತಂದೀನಿ ।
ಕೂಸೀನ ತಾಯಿ ಉಡಬಾರ ।
ಕೂಸೀನ ತಾಯಿ ಉಡಬಾರ-ಹಡೆದವ್ವ ।
ರಾಸೀಗಿ ಹರಕಿ ಕೊಡಬಾರ ॥೧೬೭೯॥

* * *

ಮಠವೆಲ್ಲಿ ಮಠವೆಲ್ಲಿ ಮಠದ ಬಾಗಿಲವೆಲ್ಲಿ ।
ಕಟದ ರುದ್ರಾಕ್ಷಿ ಕದವೆಲ್ಲಿ ।
ಕಟದ ರುದ್ರಾಕ್ಷಿ ಕದವೆಲ್ಲಿ-ಅಂದಾನಸ್ವಾಮಿ ।
ಮಠವೈತಿ ಬಾಳಿ ವನದಾಗ ॥೧೬೮೦॥

* * *

ಹಾವು ಹಾವಂದರ ಹಾವೆಲ್ಲಿ ಹರದೈತಿ ।
ಹಾವೈತಿ ಹಂಪಿ ವಿರುಪಾಕ್ಷಿ ।
ಹಾವೈತಿ ಹಂಪಿ ವಿರುಪಾಕ್ಷಿ-ಗುಡಿಮುಂದ ।
ಹಾವಾಗಿ ತುಂಗಿ ಹರದಾಳೋ ॥೧೬೮೧॥

ಹಾವು ಕಚ್ಚಿತು ನನ್ನ ಲೋಹಿತ ರಾಜsಗ ।
ಮಾಯsದ ಗ್ರಾಣ ಹಿಡಿದೀತೋ ।
ಮಾಯsದ ಗ್ರಾಣ ಹಿಡಿದೀತೋ–ರಾಜsಗ ।
ಸಾಯಲಿಲ್ಲೇಳೋ ಶಮರಂತಾ ॥೧೬೮೨॥

* * *

ಚಕ್ರs ಬಿಂಬದ ಕ್ವಾಟಿ ಕಟ್ಟ್ಯಾರೋ ಕೌರವರು ।
ಪತ್ರ ಬರದಾರೋ ಅರ್ಜುನಗ ।
ಪತ್ರ ಬರದಾರೋ ಅರ್ಜುನಗ–ದ್ರೌಪsದಿ ।
ಉತ್ರ ಬರದಾಳೋ ಅಭಿಮನ್ಯಾಗ ॥೧೬೮೩॥

* * *

ಉತ್ರದ ಅನುಭವ ತಿಳಿದು ಶತ್ರು ಸೈನ್ಯಕೆ ಹೋಗಿ ।
ಸಿಕ್ಕs ಜಯದ್ರಥನ ಕೈಯಾಗ ।
ಸಿಕ್ಕs ಜಯದ್ರಥನ ಕೈಯಾಗ–ಅಭಿಮನ್ಯು ।
ದಕ್ಕಲಿಲ್ಲಲ್ಲೊ ಪಾಂಡವರೀಗಿ ॥೧೬೮೪॥

* * *

ಆ ತೇರು ಈ ತೇರು ಜ್ಯೋತಿರ್ಲಿಂಗನ ತೇರು ।
ಅಪ್ಪ ಕಳಕಯ್ಯನ ಹೊಸ ತೇರು ।
ಅಪ್ಪ ಕಳಕಯ್ಯನ ಹೊಸ ತೇರು–ಬರುವಾಗ ।
ಆಕಾಶದ ಘಂಟಿ ನುಡಿದಾವೋ ॥೧೬೮೫॥

* * *

ಎರಿಯ ಹೊಲದನ್ನ ಎಳಿ ಎಳಿ ಬೆಳ್ಸಿ ತಿಂದು ।
ಕಾಲ ಕಳೆದಾವ ಬಾಳಿ ವನದಾಗ ।
ಕಾಲ ಕಳೆದಾವ ಬಾಳಿ ವನದಾಗ-ಹಬ್ಬ ಮಾಡ್ಯಾವ ।
ಹಕ್ಕಿ ಪಾರಿವಾಳ ಗುಬ್ಬಿ ಗಿಳಿ ಕೋಗಿಲ್ಯೋ ॥೧೬೮೬॥

* * *

ಊರs ವಳಗ ನನ್ನ ಮೀರಿದ ಒಕ್ಕsಲು ।
ಕೂರೀಗಿ ನೂರು ಕುಡನೂರ ।
ಕೂರೀಗಿ ನೂರು ಕುಡನೂರ–ಮೇಟ್ಯಾರ ।
ಆಳು ಮಕ್ಕಳೊಂದ ಐನೂರ ॥೧೬೮೭॥

ಕಲ್ಲ ಕಟ್ಟಿದ ಬಾವಿ ಮಲ್ಲಿಗಿ ಸೋಪಾನ ।
ಘಲ್ಲ ಘಲ್ಲೆಂಬ ಗದಗೀನ ।
ಘಲ್ಲ ಘಲ್ಲೆಂಬ ಗದಗೀನ-ಪ್ಯಾಟ್ಯಾಗ ।
ಗೊಲ್ಲನಾಗ್ಯಾನೋ ಕೃಷ್ಣಯ್ಯಾ ॥೧೬೮೮॥

* * *

ಆ ಕಲ್ಲು ಈ ಕಲ್ಲು ಹಸರು ಹಳದಿಯ ಕಲ್ಲು ।
ಮುತ್ತೀನ ಕಲ್ಲು ಮುದಗಲ್ಲು ।
ಮುತ್ತೀನ ಕಲ್ಲು ಮುದಗಲ್ಲ-ಮುಂದಿರುವ ।
ರತ್ನದ ಕಲ್ಲು ಇಳಕಲ್ಲು ॥೧೬೮೯॥

* * *

ಜೋಳದ ಹಂತಿ ಕಟ್ಟಿ ನಾಳಿಗೆ ತಿಂಗ್ಯಾತು ।
ಆನಿ ತುಳಿದರ ಸವದಿಲ್ಲ ।
ಆನಿ ತುಳಿದರ ಸವದಿಲ್ಲ-ನಮ ಬಸವ ।
ಪಾದ ಇಟ್ಟಲ್ಲಿ ನುರಿತಾವೋ ॥೧೬೯೦॥

* * *

ಮಂಡ ಮೂಗಿನ ಹೆಂಣ ಗಂಡ್ನ ಕರೆಯಲು ಬಂದ ।
ಪುಂಡೀಯ ಕಾಳು ಉಡಿ ಅಕ್ಕಿ ।
ಪುಂಡೀಯ ಕಾಳು ಉಡಿ ಅಕ್ಕಿ-ಹಾಕಿಕೊಂಡು ।
ಕಂಡವರ ಕಾಲು ಮುಗಿದಾಳೋ ॥೧೬೯೧॥

* * *

ಕುಂಬಳ ಕುಡಿಸಣ್ಣ ಕುಡುಗೋಲ ಹಿಡಿಸಣ್ಣ ।
ಜ್ವಾಳ ಕೊಯ್ಯುವಳ ನಡಸಣ್ಣ ।
ಜ್ವಾಳ ಕೊಯ್ಯುವಳ ನಡಸಣ್ಣ-ನಮ ಬಸವನ ।
ಹೆಗಲ ಮ್ಯಾಲಿನ ನಗ ಸಣ್ಣ ॥೧೬೯೨॥

* * *

ಎಲ್ಲವ್ವ ನಿನ ತೇರು ಕಲ್ಲಾಗ ಎಳದಾವು ।
ಶಿರಟ್ಯಾಗಿರುವ ಶಿವಯೋಗಿ ।
ಶಿರಟ್ಯಾಗಿರುವ ಶಿವಯೋಗಿ-ನಿಮ ತೇರು ।
ಎರಿಯ ಹೊಲದಾಗ ಎಳದಾವೋ ॥೧೬೯೩॥

ಸಾಂಸಿ ಕುಂದ್ಗೋಳದ ಸಾವ್ಕಾರನ ಮಗಳು ।
ನಾಲ್ಕುಖಂಡ್ಗ ಗೋದಿ ಉಡಿ ಅಕ್ಕಿ ।
ನಾಲ್ಕುಖಂಡ್ಗ ಗೋದಿ ಉಡಿ ಅಕ್ಕಿ-ಹಾಕ್ಕೊಂಡು ।
ನಾಗಪ್ಪ ಹಾಲು ಹೊಯ್ದಾಳೋ ||೧೬೯೪||

* * *

ಕಂಚೀನ ಕಣಿ ಹಲಿಗಿ ಮಿಂಚು ಮಾಣಿಕದಿಮ್ಮ ।
ಗೊಂಚಲ ನಾಡೋ ಕುಂದ್ರಳ್ಳಿ ।
ಗೊಂಚಲ ನಾಡೋ ಕುಂದ್ರಳ್ಳಿ-ಹುಡುಗೇರು ।
ಮಿಂಚುತ ನೀರು ತರುವರೋ ||೧೬೯೫||

ಬಡಿಗೇರ ಓಣ್ಯಾಗ ಕಿಡಿಗೇಡಿ ದ್ಯಾಮವ್ವ ।
ಉಡಗರಿ ಉಟ್ಟಾಳೋ ಹುಲಿ ಚರ್ಮ ।
ಉಡಗರಿ ಉಟ್ಟಾಳೋ ಹುಲಿ ಚರ್ಮ-- ಕೂಸ ।
ಬರತಾವು ಕರಕೋಳೋ ||೧೬೯೬||

* * *

ಕರಿಯ ಕಬ್ಬಿನ ಗಣಿಕಿ ಗರಿಗೊಂದ ಗಿಣಿಛಾಯ ।
ಅದಾನ ಎರಿಯಾಗ ಯಮನೂರ ।
ಅದಾನ ಎರಿಯಾಗ ಯಮನೂರ-ಪೀರಾಗ ।
ಧೊರಿಯೆಂದ. ಕೈಯ ಮುಗದೇವ ||೧೬೯೭||

* * *

ಬಂಡಿ ಬಂಟಗ ಮೂಲ ಮಿಂಡಿ ಮುದುಕಗ ಮೂಲ ।
ಹಿಂಬಂಡಿ ಮೂಲ ಬಸವಗ ।
ಹಿಂಬಂಡಿ ಮೂಲ ಬಸವಗ-ಹಾರವರ್ಹೆಣ್ಣು ।
ರಂಡ್ಯಾದರ ಮೂಲ ತವರೀಗಿ ||೧೬೯೮||

* * *

ಕುದುರೀಗೆ ಕೋಡಿಲ್ಲ ಕ್ವಾಣಕ್ಕ ಡುರ್ಕಿಲ್ಲ ।
ಗಾಂಜಿ ಸೇದವಗ ಬುದ್ಧಿಲ್ಲ ।
ಗಾಂಜಿಗ ಸೇದವಗ ಬುದ್ಧಿಲ್ಲ-ಕಣದಾಗ ।
ಹಂತಿ ಹೊಡಿದರ ನಿದ್ದಿಲ್ಲೋ ||೧೬೯೯||

# ಚುಟುಕು ಪದಗಳು

ಯಾಕೋ ಬಸವಾ ಮೆಲ್ಲಕ ನಡೀತೀ ।
ಕಣ ಕಾಲ ರಾಶಿ ಮೊಣಕಾಲಿಗೆ ಬಂತೋ ||೧೭೦೦||

* * *

ಅಲಕಾ ಮಲಕಾ ಚಿಲಕದ ಕಣ್ಯೋ ।
ಹನ್ನೆರಡೆತ್ತಿನ ಹಂತಿಯು ಕಣ್ಯೋ ||೧೭೦೧||

* * *

ಅಂಕs ಡೊಂಕನ್ನ ಮೇಟಿಗೆ ಕಟ್ಟ್ಯೋ ।
ಹಾಲುಂಡ ಹೋರಿಯು ಕಡೆಸುತ್ತಿಗೆ ಕಟ್ಟ್ಯೋ ||೧೭೦೨||

* * *

ಬೂದ್ಯಾ ನಿಮ್ಮವ್ವ ಬುತ್ತಿಯು ತಂದಾಳೋ ।
ಯಾಲಕ್ಕಿ ಸೊಂಟಿಯ ಮರತ ಬಂದಾಳೋ ||೧೭೦೩||

* * *

ಮುತ್ತಿನ ರಾಸ್ಯೋ ಮುಗಲುದ್ದ ಸೆಳ್ಯೋ ।
ಜೋಟುದ್ದ ಕುಂಟ್ಯೋ ಮಾರುದ್ದ ಬಾರ್ಕೋಲೋ ||೧೭೦೪||

* * *

ನಮ್ಮೂರ ಹನುಮಗ ಮುತ್ತೀನ ದಂಡ್ಯೋ ।
ಬೇಲೂರ ಹನುಮಗ ಬೇವೀನ ದಂಡ್ಯೋ ||೧೭೦೫||

* * *

ಮೇಟೀ ಎತ್ತೀಗೆ ಮಣಕಾಲ ಗಂಟ್ಯೋ ।
ಕಡೆಸುತ್ತೀ ನೆತ್ತೀಗೆ ಕಣಕಾಲ ಗಂಟ್ಯೋ ||೧೭೦೬||

* * *

ನಮ್ಮ ಹೊಲದ ಲಕ್ಷ್ಮಿ ಏನ ಮಾಡತಾಳೋ ।
ಗಾಲಿ ಕೋಪ ಇಟಗೊಂಡ ವಳದಾಡತಾಳೋ ||೧೭೦೭||

ಹಂತಿ ತಿರುವುವಾಗ ಏನೇನು ಊಟಾ ।
ಹಿಟ್ಟು ಹರವಿಯು ಪಲ್ಲೆ ಕೈತುಂಬ ಸುಚ್ಚು ||೧೭೦೮||

* * *

ದುಂಡs ಕಲ್ಲಮ್ಯಾಲೆ ಲಂಡ ಮಗ್ಗ ಹೂಡಿ ।
ಗೊಂಡೇವ ನೆಯ್ದಾರ ಹುಲ್ಲುಲ್ಲಿಗೋ ||೧೭೦೯||

* * *

ಸಾಣಿ ಕಲ್ಲಿನ ಮ್ಯಾಲ ಜಾಣ ಮಗ್ಗವ ಹೂಡಿ ।
ಮ್ಯಾಣೇವು ನೇಯ್ದಾರ ಹುಲ್ಲುಲ್ಲಿಗೋ ||೧೭೧೦||

* * *

ಹಿಂಡೆತ್ತಿನ್ಯಾಗ ಯಾವೆತ್ತು ಚೆಲುವಾ ।
ಬೆಳ್ಳೀ ಕೋಡಿನೆತ್ತು ಬಿಳಿ ಎತ್ತು ಚೆಲುವಾ ||೧೭೧೧||

* * *

ಹಸು ಮೊಂಡ ಹೋರೀಗೆ ಬೀಸ ಮಾರ ಹಗ್ಗ ।
ಹರಕೊಂಡು ಹೋತೋ ಹುನಗುಂದ ತನಕಾ ||೧೭೧೨||

* * *

ಕಡೆಸುತ್ತೀನೆತ್ತೀನ ಕಾಲಾಟನೋಡೋ ।
ಹಂತೀಯ ಹೊಡೆಯುವನ ಹೇಲಾಟ ನೋಡೋ ।
ಹೋ ಹೋ ಹೋ ಹೋ ಹಲೆಂಡ ಹಲ್ಯೋ ||೧೭೧೩||

* * *

ಸಂಗಮದ ದಾರೀಲೆ ಸಾಲು ಟೆಂಗಿನ ಮರ ।
ಕೊಂಗಿ ಕೊಂಗೀಗೆ ಎಳೆಗಾಯಿ ।
ಕೊಂಗಿ ಕೊಂಗೀಗೆ ಎಳೆಗಾಯಿ–ನಮಬಸವ ।
ಬಿಲ್ಲೀಲೆ ವಗೆದsರ ಬಿಳಿಗಾಯಿ ||೧೭೧೪||

* * *

ಬಸವ ಬಂಡಿಯನೇರಿ ಶಿವನು ನಂದಿಯನೇರಿ ।
ಪಾರ್ವತಾದೇವಿ ರಥವೇರಿ ।
ಪಾರ್ವತಾದೇವಿ ರಥವೇರಿ–ಬರುವಾಗ ।
ಒಡ್ಡೀದ ಮೋಡ ಬಯಲಾಗಿ ||೧೭೧೫||

ತಂಗೀಯು ಮನಿ ಮುಂದ ಗಂಗಾಳ ಮಾಟದ ಭಾವಿ ।
ಟೆಂಗೀನ ಹಗ್ಗ ಬಲಗೈಯ್ಯೋ ।
ಟೆಂಗೀನ ಹಗ್ಗ ಬಲಗೈಯ್ಯಾಗ-ಹಿಡಕೊಂಡು ।
ತಾಯವ್ನ ಸೇದ್ಯಾಳ ತಿಳಿನೀರ ||೧೨೧೬||

* * *

ಬೆಳ್ಳನ್ನ ಎರಡೆತ್ತು ಎಲ್ಲೀಗಿ ಹೋಗಿದ್ದಿ ।
ಎಲ್ಲರ ಕಣ್ಣು ನಿನಮ್ಯಾಲ ।
ಎಲ್ಲರ ಕಣ್ಣು ನಿನಮ್ಯಾಲ-ನಿಮ್ಮವ್ವ ।
ನೆಲ್ಲಕ್ಕಿ ನೆದರ ತಗದಾಳ ||೧೨೧೨||

* * *

ಬೆಳ್ಳನ್ನ ಎರಡೆತ್ತು ಹುನಗುಂದದ್ಹಳ್ಳಕ್ಹೋಗಿ ।
ಬೆಳ್ಳಕ್ಕಿ ಕಂಡು ಬೆದರ್ಯಾವ ।
ಬೆಳ್ಳಕ್ಕಿ ಕಂಡು ಬೆದರ್ಯಾವ-ನಮಬಸವ ।
ಸೂರ್ಯನನ್ನ ಕಂಡು ಸುರಿಗ್ಯಾವ ||೧೨೧೮||

* * *

ಹುಗ್ಗೀ ಹೋಳಿಗಿ ಉಂಡು ಬಗ್ಗೀ ಕೂರಗಿ ಬಿಗಿದು ।
ಕ್ವಾರೀ ಮೀಶಿಯವನ ಕುರುಬನ ।
ಕ್ವಾರೀ ಮೀಶಿಯವನ ಕುರುಬನ-ಕೂರೀಗಿ ।
ಊರೀಗಿ ಮೊದಲ ಸಾಗ್ಯಾವ ||೧೨೧೯||

* * *

ಹರಗೀದ ಹೊಲದಾಗ ಹವಳ ಸೂರ್ಯಾಡಿಧಾಂಗ ।
ಬಿತ್ತೀದ ಹೊಲದಾಗ ಮುತ್ತ ।
ಬಿತ್ತೀದ ಹೊಲದಾಗ ಮುತ್ತ-ಸೂರ್ಯಾಡಿಧಾಂಗ ।
ಎತ್ತವ್ವ ತಾಯಿ ಬರಿಗಾಯಿ ||೧೨೩೦||

* * *

ಮುತ್ತೀನ ಮೂಗುತಿ ನಕ್ಷತ್ರ ಸುಲಿಯುದು ।
ಅಕ್ಕ ನೀನ್ಯಾರ ಮಗಳವ್ವ ।
ಅಕ್ಕ ನೀನ್ಯಾರ ಮಗಳವ್ವ-ಕೋಲಾರ ।
ಗಚ್ಚಿನ ಗುಡಿಯ ದ್ಯಾಮವ್ವ ||೧೨೩೧||

ಹಂಡ್ಕ ಬಂಡದ ಎತ್ತು ಬಂಡಿ ಸಾಗರದೆತ್ತು ।
ಸರಕಾರದೆತ್ತು ಶಿವರಾಯ ।
ಸರಕಾರದೆತ್ತು ಶಿವರಾಯ-ಮಾರಿದರ ।
ಸೂಳಿ ನಿನ ಸಾಲ ಹರಿಲಿಲ್ಲ ||೧೭೨೨||

* * *

ಧಾರವಾಡದ ಹೆಣ್ಣ ದೂರ ಕಳುಹಲಿ ಹೋದೆ ।
ಜೋರ ಮಾಡಿದಾವ ಎಳೆಹುಣ್ಣ ।
ಜೋರ ಮಾಡಿದಾವ ಎಳೆಹುಣ್ಣ-ಯಮನೂರರ್ಪೀರ ।
ಪಾರ ಮಾಡಿದಾನೋ ಪರಿಹಾರ ||೧೭೨೩||

* * *

ಏರ್ಕಬಾರದ ಗುಡ್ಡ ಏರ್ಯಾವ ನಮ್ಮೆತ್ತು ।
ಬೋರಂಗಿ ಕಡಗ ಸರಗಂಟೆ ।
ಬೋರಂಗಿ ಕಡಗ ಸರಗಂಟೆ-ಕಟಿಗೊಂಡು ।
ಏರಿ ಮೇದಾವು ಎಳೆಹುಲ್ಲ ||೧೭೨೪||

* * *

ಕಕ್ಕೇರಿ ಜಾತ್ಕರಿ ಒಂದೀನ ರಾತ್ಕರಿ ।
ಕಬ್ಬೀನ ಗಣಿಕಿ ಪುಡಿಬೆಲ್ಲ ।
ಕಬ್ಬೀನ ಗಣಿಕಿ ಪುಡಿಬೆಲ್ಲ-ಹೊತುಗೊಂಡು ।
ತುಗ್ಗ್ಕಲಿ ಗಿಡಕ ನಡದಾಳೋ ||೧೭೨೫||

* * *

ನೀರಿಗ್ಹೋಗುವ ಜಾಣಿ ನಿಲ್ಲ ನಾ ಬರತೇನಿ ।
ನಿನ್ನಾಣಿ ನಿನ್ನ ಕೊಡದಾಣಿ ।
ನಿನ್ನಾಣಿ ನಿನ್ನ ಕೊಡದಾಣಿ-ಆ ಬಾಲಿ ।
ಹೊಳಿಯಾಣಿ ನೀರ ಹೊಳಿಯಾಣಿ ||೧೭೨೬||

* * *

ಎಂಟೆತ್ತು ಹೊಡಕೊಂಡು ಕಂಟ್ಯಾಗ ಬರುವಾಗ ।
ಗಂಟೆ ಬಿದ್ದಾಳ ಇದಿರಂಡಿ ।
ಗಂಟೆ ಬಿದ್ದಾಳ ಇದಿರಂಡಿ-ಹೊಟ್ಟೀಲಿ ।
ಬಂಟ ಹುಟ್ಯಾನ ಬಸವಣ್ಣ ||೧೭೨೭||

ಆ ಕಲ್ಲ ಈ ಕಲ್ಲ ಹಸರು ಹಳದಿಯ ಕಲ್ಲ ।
ಹೆಸರಾದ ಕಲ್ಲ ಇಲಕಲ್ಲ ।
ಹೆಸರಾದ ಕಲ್ಲ ಇಲಕಲ್ಲ-ಮುಂದಿರುವ ।
ಮುತ್ತೀನ ಕಲ್ಲ ಮುದಗಲ್ಲ ॥೧೭೨೮॥

* * *

ಒಗರಡಕಿ ಚಿಗರಡಕಿ ಚಿಕ್ಕಂದ್ಲೆ ಗೆಳತsನ ।
ಮತ್ತೆ ಮುದಗಲ್ಲ ಮಳಿಗ್ಯಾಗ ।
ಮತ್ತೆ ಮುದಗಲ್ಲ ಮಳಿಗ್ಯಾಗ-ಆಡಿದ ಮಾತು ।
ಎಚ್ಚರಿಲ್ಲೇನ ಎದಿಯಾಗ ॥೧೭೨೯॥

* * *

ಕಾಕುಳ್ಳು ಆಯುವಳ ಕ್ಯಾಕರಿಸಿ ಉಗಳವಳ ।
ಬೇಕೇನ ಹುಡುಗಿ ಎಳೆಬೆಳಿಸಿ ।
ಬೇಕೇನ ಹುಡುಗಿ ಎಳೆ ಬೆಳಸಿ-ನಾ ನಿನಗ ।
ಸಾಕಂಬೋತನಕ ಬಿಡುದಿಲ್ಲಾ ॥೧೭೩೦॥

* *

ಬಸವಣ್ಣನ್ಹೆಂಡsತಿ ಹಸು ಮಗಳ ನೀಲವ್ವ ।
ಬಸುರಾದರ್‍ಹ್ಯಾಂಗ ನಡದಾಳ ।
ಬಸುರಾದರ್‍ಹ್ಯಾಂಗ ನಡದಾಳ-ಗೋಧೀಯ ।
ಸಸಿಹಂಗ ನವಿಲು ಕುಣಿಧಾಂಗ ॥೧೭೩೧॥

* * *

ಬಸವಣ್ಣನ್ಹೆಂಡsತೀ ಹಸುಮಗಳ ನೀಲವ್ವ ।
ಕುಸುರsದ ಸಿಂಬಿ ಬರಿಗೊಡ ।
ಕುಸುರsದ ಸಿಂಬಿ ಬರಿಗೊಡ-ಹೊತುಗೊಂಡು ।
ಉಸುರೆಂದು ಬಾವಿ ಇಳಿದಾಳ ॥೧೭೩೨॥

* * *

ನಾಡs ಗೌಡರ ಮಗಳು ನಾಡೀಗೆ ದೊಡ್ಡಾಕಿ ।
ನಾಗಳದ ಗೋದಿ ಉಡಿಯಕ್ಕಿ ।
ನಾಗಳದ ಗೋದಿ ಉಡಿಯಕ್ಕಿ-ಹಾಕಿಕೊಂಡು ।
ನಾಗಪ್ಪಗ್ಹಾಲು ಎರದಾಳ ॥೧೭೩೩॥

ಆರು ಸಾವಿರ ಗಂಟೆ ಮೂರು ಸಾವಿರ ಜಂಗು।
ದೂರ ಕೇಳ್ಯಾವು ಗಗನಕ್ಕ।
ದೂರ ಕೇಳ್ಯಾವು ಗಗನಕ್ಕ-ನಮ ಬಸವ।
ಧೂಳ ಮುಚ್ಚ್ಯಾವು ಗಗನಕ್ಕ ||೧೭೩೪||

*

ಊರಿಗೆ ಹೋಗ್ಬೇಕು ಜರ್ದ್ಯ ರುಂಬಾಲಬೇಕು।
ಮ್ಯಾಲೆ ಸುವರsದ ಕೊಡಿಬೇಕು।
ಮ್ಯಾಲೆ ಸುವರsದ ಕೊಡಿಬೇಕು-ವ್ಯಾಗಳ।
ಸಂಗಪ್ಪಗ್ಹೋಗಿ ಬರಬೇಕು ||೧೭೩೫||

* * *

ಕಂಬsಳಿ ಕರಿಯುವರ ಎಂಭತ್ತು ಜಡಿಯುವರ।
ಕೆಂಭಾವಿ ಮಠದ ಶರಣsರ।
ಕೆಂಭಾವಿ ಮಠದ ಶರಣsರ-ಶಿವಯೋಗಿ।
ರಮ್ಮೀಸಿ ಮಳಿಯು ಕರದಾರ ||೧೭೩೬||

* * *

ಎರಿಹೆಂಟೆ ಬರಿಗಾಲು ನಡುವೆ ನೆಗ್ಗಿಲ ಮುಳ್ಳ।
ಗೆಣಿಯು ನಿನ್ನ ಕಳುವಿ ಬರುವಾಗ।
ಗೆಣಿಯು ನಿನ್ನ ಕಳುವಿ ಬರುವಾಗ--ಕಣ್ಣೀರು।
ತಡದ ಮಳಿಹಾಂಗ ಸುರಿದಾವ ||೧೭೩೭||

ಸಣ್ಣsನ ಕೆತ್ತೀತಿ ಬಣ್ಣsನ ಕೊಟ್ಟೈತಿ।
ಕಿನ್ನೂರಿ ಕಾಯಂತ ಕಿರಿನsಗ।
ಕಿನ್ನೂರಿ ಕಾಯಂತ ಕಿರಿನsಗ--ಹೊತುಗೊಂಡು।
ಬೋರ್ಯಾಡತಾನ ಬಸವಣ್ಣ ||೧೭೩೮||

* * *

ಮಠವೆಲ್ಲಿ ಮಠವೆಲ್ಲಿ ಮಠದ ಬಾಗಿಲವೆಲ್ಲಿ।
ಕಟದ ರುದ್ರಾಕ್ಷಿ ಕದವೆಲ್ಲಿ।
ಕಟದ ರುದ್ರಾಕ್ಷಿ ಕದವೆಲ್ಲಿ--ಗ್ಯಾನಪ್ಪಯ್ಯನ।
ಮಠವೈತಿ ಬಾಳೀಯ ವನದಾಗ ||೧೭೩೯||

ಪುಂಡsಗಾರರ ಎತ್ತು ಹಿಂಡೀ ಎಮ್ಮಿದವ ।
ಗುಂಡsದ ನೀರ ಕುಡದಾವ ।
ಗುಂಡsದ ನೀರ ಕುಡದಾವ--ನವು ಬಸವ ।
ಗಂಡರಳಿ ಬಣ್ಣ ತಿರಿಗ್ಯಾವ ॥೧೭೪೦॥

* * *

ಅಂದುಳ್ಳ ಮುದಗಲ್ಲ ಚಂದುಳ್ಳ ಬಾಜಾರ್ದಾಗ ।
ಗಂಧ ನಾರ್ಯಾವು ಗಗನಕ್ಕ ।
ಗಂಧ ನಾರ್ಯಾವು ಗಗನಕ್ಕ-ಹುಸೇನಪಾಚ್ಛಾ ।
ಗಂಗಮ್ಮಗ್ಹೋಗಿ ಬರತಾರ ॥೧೭೪೧॥

* * *

ಹಾದೀಯ ಹೊಲದಾಗ ಗೋದಿಯ ಕಣಮಾಡಿ ।
ಹಾದೀ ಹಿಡಿದು ಹೋಗವಳ ।
ಹಾದೀ ಹಿಡದು ಹೋಗವಳ--ಬೆದಿಮಾಡಿ ಹೊಡದರ ।
ಜೋಡ್ಯಾಳ್ಡ ಕೂಸ ಒಗದಾಳ ॥೧೭೪೨॥

* * *

ಎರಿಯ ಹೊಲದಾಗ ಎಳಿಯ ಸವತಿಯ ಕಾಯಿ ।
ಹರಿಯಂದsರ್ಹ್ಯಾಂಗ ಹರಿಯsಲಿ ।
ಹರಿಯಂದsರ್ಹ್ಯಾಂಗ ಹರಿಯsಲಿ--ಆ ಬಾಲೀನ ।
ಮರಿಯಂದsರ್ಹ್ಯಾಂಗ ಮರಿಯsಲಿ ॥೧೭೪೩॥

* * *

ಹೊತ್ತs ಮುಳುಗಿದ ಕೂಡ್ಲೆ ಹೊಲಕs ಬಂಡಿಯ ಕಟ್ಟಿ ।
ಹೊಲಿಗೇರಿ ಮುಂದ ನಗ ಮುರಿದು ।
ಹೊಲಿಗೇರಿ ಮುಂದ ನಗ ಮುರಿದು-ಆ ಬಾಲಿ ।
ನೆಟ್ಟsನ ಹುಡಗೀಯ ನಡ ಮುರಿದು ॥೧೭೪೪॥

* * *

ತುಂಬೀದ ಹೊಳಿಯಾಗ ಕೊಂಬೆರಡು ಕಾಣ್ಯಾವ ।
ಬಂಗಾರ್ದ ಗಿಣಿಯ ಬಸವಣ್ಣ ।
ಬಂಗಾರ್ದ ಗಿಣಿಯ ಬಸವಣ್ಣ-ಬರುವಾಗ ।
ಬಾಲ್ಯಾರಾರೂತಿ ಬೆಳಿಗ್ಯಾರ ॥೧೭೪೫॥

ಗಿಡಗುಂಟಿ ದಾರ್‍ಯಾಗ ಸಾಲ ಟೆಂಗಿನಮರ।
ಕೊಂಗಿ ಕೊಂಗೀಗೆ ಎಳಿಮರ।
ಕೊಂಗಿ ಕೊಂಗೀಗೆ ಎಳಿಮರ-ನಮಬಸವ।
ಬಿಲ್ಲಿಲೊಗೆದರ ಬಿಳಿಗಾಯಿ ||೧೭೪೬||

* * *

ಕೆಂದೆತ್ತ ಹತಿಗೊಂಡು ಕಂದನ್ನ್ಮಂಡಿಟ್ಗೊಂಡು।
ತಾಸೊತ್ತಿನ ದಾರಿ ಯಮನೂರ।
ತಾಸೊತ್ತಿನ ದಾರಿ ಯಮನೂರ-ಪೀರಾಗ।
ಕೂಸೆತ್ತಿ ಕೈಯ ಮುಗದಾಳ ||೧೭೪೭||

* * *

ಹಕ್ಕರಕಿ ಹಸರಾಣಿ ಎಲ್ಲ್ಯತಿ ಗೊಳಗೊಳಕಿ।
ಚಿಕ್ಕ ಯಮನೂರ ಕೆರಿಯಾಗ।
ಚಿಕ್ಕ ಯಮನೂರ ಕೆರಿಯಾಗ-ಆದದ್ದು।
ಎಚ್ಚರಿಲ್ಲೇನೋ ಎದಿಯಾಗ ||೧೭೪೮||

* * *

ಬಂಗಾರದ ಬಳಿಯವಳ ಬಂದಿ ಕುಪ್ಪಸದವಳ।
ಬಂದಾಳೇನಣ್ಣ ಜಾತ್ರೀಗೆ।
ಬಂದಾಳೇನಣ್ಣ ಜಾತ್ರೀಗೆ-ಆಬಾಲಿ।
ತಂದಾಳೇನಣ್ಣ ಕರಿಗಡಬ। ||೧೭೪೯||

* * *

ಗೆಣಿಯಾ ಬರ್‍ತಾನಂತ ಗೆಣಸಿನ್ಹೋಳಗಿಮಾಡಿ।
ಹರಿದಾರಿ ಗೆಣಿಯ ಬರಲಿಲ್ಲ।
ಹರದಾರಿ ಗೆಣಿಯ ಬರಲಿಲ್ಲ-ಮನಿಯೊಳಗ।
ತಿಂದೋಡಿ ಗಂಡ ತಿನವಳ ||೧೭೫೦||

* * *

ಕುಂಟೋಜಿ ಬಸವಗ ಕುಂಟ ಅನ್ನವರ್‍ಯಾರ।
ಹಾದಾಡಿ ಕಾಲ ಮುರಕೊಂಡ।
ಹಾದಾಡಿ ಕಾಲ ಮುರಕೊಂಡ-ನಮಬಸವ।
ಮಂಟಪದೊಳಗ ಮಲಗ್ಯಾನ ||೧೭೫೧||

ಕಾವೀಯ ಉಟ್ವಾನ ಕಾವೀಯ ಹೊದ್ದಾನ ।
ಮಾವೀನ ಗಿಡಕ ಮಲಗ್ಯಾನ ।
ಮಾವೀನ ಗಿಡಕ ಮಲಗ್ಯಾನ-ಘನಮಠದಸ್ವಾಮಿ ।
ಮಾಯವಾಗ್ಯಾನ ಮರ್ತ್ಯಕ ॥೧೭೫೨॥

* * *

ಜಂಗಮ ರ್‍ದ್ದಡಗನ್ನ ಹೆಂಗ ಸಲುಹಲಿ ಶಿವನೆ ।
ಜಂಗ ಬೇಕವನ ಕಾಲೀಗಿ ।
ಜಂಗ ಬೇಕವನ ಕಾಲೀಗಿ-ದುಡ್ಡೀನ ।
ಲಿಂಗ ಬೇಕವನ ಕೊರಳೀಗೆ ॥೧೭೫೩॥

* * *

ಕುರುಬರ ಹುಡಗೀಯ ತುರಬ್ಯಾಕ ನಿಗರ್‍ಯಾವ ।
ತುರುಬಿನ್ಯಾಗೆರಡ ತಿರಿ ಅರಿಬಿ ।
ತುರುಭಿನ್ಯಾಗೆರಡ ತಿರಿ ಅರಿಬಿ-ಇಟಗೊಂಡು ।
ಬೆರಗ ಮಾಡ್ಯಾಳ ಬೆಳತನ ॥೧೭೫೪॥

ಊರಸುತ್ತ ಮುತ್ತ ಊದೀನ ಗಿಡಹುಟ್ಟಿ ।
ಊದೀನ ಗಿಡಕೆ ತಿಳಿನೀರ ।
ಊದೀನ ಗಿಡಕ ತಿಳಿನೀರ-ಬಿಡುವಬಾಲಿ ।
ತೆರವೇನ ಹೇಳ ತೆರಬಾಯಿ ॥೧೭೫೫॥

* * *

ಉಡಿಯಾಗ ಪುತಾಣಿ ಕೊರಳಾಗ ಕತಾಣಿ ।
ನಿನಗಂಡ ಹುಡಿಕ್ಯಾಡಿ ಹುಟ್ಟಿ ಮುರದಾನ ॥೧೭೫೬॥

* * *

ಹುಟ್ಟನ ಮುರೀಲಾಕ ಕೆಟ್ಟನಾ ಬಂದಿಲ್ಲ ।
ಕಟ್ಟೀ ದೈವಕ ಕರಸೇನ ।
ಕಟ್ಟಿ ದೈವಕ ಕರಸೇನ-ಲಗ್ನ ಮಾಡಿ ।
ಕಟ್ಟಿ ಹೋಗ್ಯಾರ ನಿನ ಗುಳದಾಳಿ ॥೧೭೫೭॥

ತಾಟಗಿತ್ತಿಯ ಹೆಣ್ಣು ತ್ಯಾಟಕ ಹೋಗಬ್ಯಾಡ ।
ತ್ಯಾಟದ ಹುಡುಗ ಬಲು ಮಂಗ ।
ತ್ಯಾಟದ ಹುಡುಗ ಬಲು ಮಂಗ–ಎಲೆಹುಡಗಿ ।
ಈಟೇಟಕ ಮಲಿಯ ಹಿಡದಾನ ||೧೭೫೮||

* * *

ಮಲಿಯನು ಹಿಡಿಯುದಕ ಮದಿವಿಗಂಡನೇನ ।
ಹೊಡಸೇನ ಅಂವಗ ಬಡಸೇನ ।
ಹೊಡಸೇನ ಅಂವಗ ಬಡಸೇನ–ಸಾಸನೂರ ।
ಅಗಸಿ ಕಂಬಕ ಬಿಗಿಸೇನ ||೧೭೫೯||

* * *

ನನ್ನ ನೀ ಬಿಗಿಸುದಕ ನಿನ್ನೇನ ಮೊನ್ನೇನ ।
ಹನ್ನೆರಡು ವರ್ಷ ಮೈಉಂಡ ।
ಹನ್ನೆರಡು ವರ್ಷ ಮೈಉಂಡ–ನನಗೆಣತಿ ।
ನನ್ನ ಬಿಗಿಸುವದು ಧರ್ಮೇನ ||೧೭೬೦||

* * *

ಸಾಲ ಸಮದವ ಮಾಡಿ ಸೂಳಿಗೆ ಸೀರಿಯತಂದು ।
ಸಾಲಗಾರಣ್ಣ ಮನಿ ಮುಂದ ।
ಸಾಲಗಾರಣ್ಣ ಮನಿಮುಂದ-ನಿಂತರ ।
ಮಾಳಿಗಿ ಏರಿ ನಗುವಳ ||೧೭೬೧||

* * *

ಮಾಳಿಗಿ ಏರಬ್ಯಾಡ ಮಾನವ ಕಳೀಬ್ಯಾಡ ।
ಕಾಲಬಿದ್ದೇನ ಕಳೆದೊಗಿಯ ।
ಕಾಲನ ಬೀಳಾಕ ಅಣ್ಣೇನ–ತಮ್ಮೇನ ।
ದೈವುಳ್ಳವರ ಮನಿಯಾಗ ದುಡಿಹೋಗಿ ||೧೭೬೨||

* * *

ಎಂಥರಂಗನ ಪ್ಯಾಟಿ ಸಂತಿಗೆ ಹೋಗಿದ್ದೆ ನಾನು ।
ಚಿಂತಿಲ್ಲದ ಕೊಂಡೆ ನವರತ್ನ ।
ಚಿಂತಿಲ್ಲದ ಕೊಂಡೆ ನವರತ್ನ–ಬೆಳಕೀಲೆ ।
ಕಾಂತಿ ಕೇಳವ್ವ ಕೌತೂಕ ||೧೭೬೩||

ಸಿಟ್ಟೀನ ಸಾಹೇಬ ತಟ್ಟನ ಎದ್ದಾನ ।
ತೊಟ್ಟಿರುವ ಡಗಲಿ ಹರಕೊಂಡ ।
ತೊಟ್ಟಿರುವ ಡಗಲಿ ಹರಕೊಂಡ–ಹಲಗನಲಿ ।
ಬಟ್ಟನರ ಬ್ಯಾಡರ ಮಗನಲ್ಲ ||೧೭೬೪||

* * *

ನೂಲಗೇನ ಹುಲ್ಲು ತಂದು ನೂರೆಂಟು ಮನಿಕಟ್ಟಿ ।
ನೂರೆಂಟು ಮನಿಗೆ ಬಾಗೀಲ ।
ನೂರೆಂಟು ಮನಿಗೆ ಬಾಗೀಲ–ಯಾವೂದೋ ।
ತಿಳಿಯನದ ಬಹುಗಿಜಗ ||೧೭೬೫||

* * *

ಗಿಜಗನ ಮನಿಯೋಳು ಕಾಜಿನ ಕಂಭದಮ್ಯಾಲಿ ।
ರಾಜನಬಣ್ಣದ ಹಕ್ಕಿ ।
ರಾಜನಬಣ್ಣದ ಹಕ್ಕಿ–ಬಂದು ।
ರಾಗ ಮಾಡೀತೋ ಬಹುಗಿಜಗ ||೧೭೬೬||

* * *

ಗೋಧೀಗೆ ಗೋಕಾವಿ ಅಕ್ಕೀಗೇ ಮಲ್ಲಾಡ ।
ಚನ್ನಂಗಿ ಬ್ಯಾಳಿ ಮುನ್ವಳ್ಳಿ ।
ಚನ್ನಂಗಿ ಬ್ಯಾಳಿ ಮುನ್ವಳ್ಳಿ–ಪ್ಯಾಟಾಗ
ಇನ್ನೊಂದು ವಸ್ತಿ ಇರಲಿಲ್ಲ ||೧೭೬೭||

* * *

ಹಾಡನ ಕೇಳಲಿಬ್ಯಾಡ ಬೇಲಿದಾಟಲಿ ಬ್ಯಾಡ ।
ಕಾಲೀಗೆ ಬಡದಾವ ಸಿಡಿಮುಳ್ಳ ।
ಕಾಲೀಗೆ ಬಡದಾವ ಸಿಡಿಮುಳ್ಳ–ನನಗೆಣಿಯ ।
ದೇಹಕ್ಕ ಬಡದಾವ ಒಣಚಿಂತಿ ||೧೭೬೮||

* * *

ಕಾಮು ಕಸ್ತೂರೀ ಹೂವ ಭೂಮಿ ತಿರಿಗಿದರಿಲ್ಲ ।
ಭೂ ಮಂಡಲದಾಗ ಸಿಗಲಿಲ್ಲ ।
ಭೂ ಮಂಡಲದಾಗ ಸಿಗಲಿಲ್ಲ–ಆ ಹೂವ ।
ಕಾಮು ಅರ್ಜುನರ ಮಗಳೀಗಿ ||೧೭೬೯||

ಕಾಗೀಯು ಕರಿಹಿಂಡ ಲಾವಕ್ಕೀ ಮರಿಹಿಂಡ।
ಆರು ಸಾವಿರದ ಗಿಳಿಹಿಂಡ।
ಆರು ಸಾವಿರದ ಗಿಳಿಹಿಂಡ-ಬರುವಾಗ।
ಕಬ್ಬಿಕ್ಕಿ ಹಿಂಡ ಕದಲ್ಯಾವ ||೧೭೭೦||

* * *

ಹೊತ್ತು ಮುಳುಗಿದ ಬಳಿಕ ಹೊಳಿಯು ಜೂಜವನಾಡಿ।
ಕಟ್ಟೇದ ಹುಲಿಯು ತಡಿವ್ಯಾನ।
ಕಟ್ಟೇದ ಹುಲಿಯು ತಡಿವ್ಯಾನ-ರಾಮsನ।
ರಟ್ಟೆಲ್ಲ ರಾಮ ರಗತಾ(ಕ್ತಾ)ಗಿ ||೧೭೭೧||

* * *

ಬಾಳೀಯು ಹೊರತ್ವಾಟ ಬಾಳೀಯು ಒಳತ್ವಾಟ।
ಬಾಳಿಗೇಡಿ ಊರ ಮದರೀಯು।
ಬಾಳಿಗೇಡಿ ಊರ ಮದರೀಯು-ತಾತಾಸಾಬ್ನ।
ಬಾಗೀಸಿ ಕೊರಳ ಕೊಯ್ದಾರ ||೧೭೭೨||

* * *

ಮಾಳೀಗಿ ಮ್ಯಾಲಿರುವ ಬಾಳs ಬದನೀಕಾಯಿ।
ತಾಳಸೂತನಕ ಇರಲಿಲ್ಲ।
ತಾಳಸೂತನಕ ಇರಲಿಲ್ಲ-ತಾತಾ ಸಾಹೇಬ।
ತಾಯಿ ಕರಕೊಂಡು ಉಣಲಿಲ್ಲ ||೧೭೭೩||

* *

ಮದರೀಯು ಧೊರಿಗೋಳ ಮದಗುದರಿ ಸತ್ತೀತು।
ಚದುರಂಗದ ಮ್ಯಾಲ ಮುರದೀತು।
ಚದುರಂಗದ ಮ್ಯಾಲ ಮುರದೀತು-ದೊರಿಗೋಳ।
ಸದರೀಗೆ ಸುದ್ದಿ ತಿಳಿಯಾಲಿ ||೧೭೭೪||

ಮೂಡsಲ ಹರದೀತು ಮುತ್ತೀನ ಕೂರೀಗಿ।
ಸೂರ್ಯ ಚಂದ್ರsರ ಕಾವಲಿ।
ಸೂರ್ಯ ಚಂದ್ರsರ ಕಾವಲಿ-ಬಂಕಣರದೀತು।
ಟಂಕsದ ಕೂರಿಗಿ ಲಂಕೀ ಹನುಮನ ಕಾವಲಿ ||೧೭೭೫||

ಹಂತೀಯ ಹೊಡಿಬೇಕ, ಕಂಕೀಯ ತಗೀಬೇಕ ।
ಕಡಿ ಎತ್ತಿನ ಹೆಂಡಿ ಹಿಡಿಬೇಕ ಬೂದನ ಮಾಡಬೇಕ ||೧೭೭೬||

* * *

ಬೂದsನ ಮಾಡಬೇಕ ಚಂಡಿಕಿ ಕಾಯ್‌ಬೇಕ ।
ಬೂದನ ಪದವಂದು ಹಾಡಬೇಕ ।
ಹಂತೀ ಬಿಡಬೇಕ ||೧೭೭೭||

## ಬಂಡಿ (ಚಕ್ಕಡಿ)

ಹೊಡುವದು ಹೊಸಬಂಡಿ ಹೊಡಿಯುವನು ಹಸುಮಗ ।
ಆಲೀಸಿ ಕೇಳೋ ಬಸವಣ್ಣ ।
ಆಲೀಸಿ ಕೇಳೋ ಬಸವಣ್ಣ–ನಿನಬಂಡಿ ।
ಭೂಮಿ ತಲ್ಲಣಿಸಿ ಹರಿದಾವೋ ||೧೭೭೮||

* * *

ಕಬ್ಬು ಕಾರುಳ್ಳವನೆ ಹುಬ್ಬು ನೇರುಳ್ಳವನೆ ।
ಗೊಬ್ಬರದ ಬಂಡಿ ಹೊಡಿಯುವನೆ ।
ಗೊಬ್ಬರದ ಬಂಡಿ ಹೊಡಿಯುವನೆ–ಅಣ್ಣಯ್ಯ ।
ನಿನ ಹುಬ್ಬಿಗಿನ್ನೊಂದು ಸರಿಯುಂಟೆ ||೧೭೭೯||

* * *

ಬಂಡೀಕಾರಣ್ಣನ ಬಂಡಾಟ ನೋಡೀರಿ ।
ಬಾರುಕೋಲವನ ಬಲಗೈಲಿ ।
ಬಾರು ಕೋಲವನ ಬಲಗೈಲಿ–ಹಿಡಕೊಂಡು ।
ಬೋರ್‍ಯಾಡಿ ಬಂಡಿ ಹೊಡದಾನ ||೧೭೮೦||

* * *

ಬಂಡಿ ಬಂಡೀ ಚಂದ ಬಂಡೀಯ ನೊಗ ಚಂದ ।
ಮುಂದಿನ್ಹೋರಿ ಚಂದ ಮಕರೀಗೆ ।
ಮುಂದಿನ್ಹೋರಿ ಚಂದ ಮಕರೀಗೆ–ಮುಲ್ಲಾಡ್ಕ ।
ಬಂಡೀ ಹೊಡಿಯುವ್ನ ಮುಖ ಚಂದ ||೧೭೮೧||

ಬಂಡೀಯ ತರಸೀರಿ ಗೊಡ್ಡೆಮ್ಮಿ ಕೂಡ್ಸೀರಿ ।
ಬಂಡೀಗೆ ಬಟ್ಟಿ ಇಡಸೀರಿ ।
ಬಂಡೀಗೆ ಬಟ್ಟಿ ಇಡಸೀರಿ-ಮಲ್ಲಾಡ್ದ ।
ಬಂಡಿ ನಡದಾವು ಡೊಂಕಾಗಿ ||೧೭೮೨||

* * *

ಬಂಡೀಯ ಹೂಡುತಲೆ ಬಾರುಕೋಲ ಮರ್ತೇನಿ ।
ಕಂಡ ಗೆಣೆಯಽರು ಕೊಡಿರಣ್ಣ ।
ಕಂಡ ಗೆಣೆಯಽರು ಕೊಡಿರಣ್ಣ-ನಮ್ಮೆತ್ತು ।
ಬಾಳೇ ವನಕಾಗಿ ಹರಿದಾವು ||೧೭೮೩||

* * *

ಹೇರುಕಟ್ಟ್ಯಾಗ ಬಾರುಕೋಲ ನಾಮರೆತೆ ।
ಕಂಡುಕೊಡು ಹೆಣ್ಣೆ ಕಡುಗಾತಿ ।
ಕಂಡುಕೊಡು ಹೆಣ್ಣೆ ಕಡುಗಾತಿ-ನಮ್ಮೆತ್ತು ।
ಮುಂದೆ ಮೂರ್ಗೆಜ್ಜೆ ನಡೀವಲ್ವು ||೧೭೮೪||

*

ಬಂಡ್ಯಾಗ ಹೋಗ್ತೀನಿ ಸಂಣಽ ತಂಬಿಗಿತಾರೆ ।
ನಂಬಿಕೆಗೆ ತಾರೆ ಬಲಗೈಯ ।
ನಂಬಿಕೆಗೆ ತಾರೆ ಬಲಗೈಯ-ಎಲೆ ಬಾಲಿ ।
ಭಾಷೇಯ ತಾರೆ ಬಲಗೈಯ ||೧೭೮೫||

* * *

ಆರು ಸಾವಿರ ಬಂಡಿ ಧೂಳೆಬ್ಬಿ ಹೋಗುವಾಗ ।
ಧೂಳು ಮುಟ್ಟೈತಿ ಮುಗಿಲೀಗೆ ।
ಧೂಳು ಮುಟ್ಟೈತಿ ಮುಗಿಲೀಗೆ-ಬಸವಽನ ।
ಗೋಳು ಮುಟ್ಟೈತಿ ಶಿವನೀಗೆ ||೧೭೮೬||

* * *

ಮಲ್ಲಾಡ್ಕ ಹೋಗೋವು ಎತ್ತೆಲ್ಲ ನಮ್ಮೋವು ।
ಮಲ್ಲಾಡ್ದ ಕೆಳಗೀನ ಬೆಳವಲದ ।
ಮಲ್ಲಾಡ್ದ ಕೆಳಗೀನ ಬೆಳವಲದ-ಬಾಲ್ಯಾರು ।
ಬಸವಗಾರುತಿ ಬೆಳಿಗ್ಯಾರ ||೧೭೮೭||

ಗಟ್ಟಿದ ವ್ಯಾಗೀನ ಗೆಳೆಯ ಗುತ್ತಿ ಬೊಡ್ಡಿಗೆ ಬಾರೊ ।
ಬುತ್ತೀ ತಂದೀನಿ ಉಣಬಾರೊ ।
ಬುತ್ತೀ ತಂದೀನಿ ಉಣಬಾರೋ-ನನಗೆಣೆಯ ।
ಮೊಗ್ಗು ಬಂದಯ್ತಿ ಮುಡಿಬಾರೊ ||೧೭೮||

* * *

ಎತ್ತೀಗೆ ಬೆಳಗಿದರ ಎತ್ತೀನು ಕೊಟ್ಟಾವು ।
ಎತ್ತೀನ ಮೇಲಿರುವ ಘನಶೆಟ್ಟಿಗೆ ।
ಎತ್ತೀನ ಮೇಲಿರುವ ಘನಶೆಟ್ಟಿಗೆ-ಬೆಳಗಿದರ ।
ಓಲಿಗೆ ವಜ್ರ ಬಿಗಿಸ್ಯಾನು ||೧೭೯||

* * *

ಮಲ್ಲಾಡ್ಕ ಹೋಗ್ತೀನಿ ಬಾಲಿ ಒತ್ತೀಯ ಕಟ್ಟಿ ।
ಕಟ್ಟಾಣಿ ಚಲುವೆ ಕಡು ಚಲುವೆ ।
ಕಟ್ಟಾಣಿ ಚಲುವೆ ಕಡು ಚಲುವೆ-ಕಟ್ಟೇದ ।
ಬುತ್ತಿ ಪಟ್ಟಣಕ ಪರಿಮಳ ||೧೮೦||

* * *

ಹೋರೀಮ್ಯಾಲ ಕೂತು ಕೋರೀಯ ನಾ ಕಂಡೆ ।
ಗೋರಿ ಕಲ್ಲಿನಂಥ ಮೊಲೆಯವಳ ।
ಗೋರಿ ಕಲ್ಲಿನಂಥ ಮೊಲೆಯವಳ-ನಾ ಕಂಡು ।
ಹೋರಿ ಹೊಡಿಯಾಕ ಮನಸಿಲ್ಲ ||೧೮೧||



## ಬಸವಣ್ಣ

ಬಾಗೇವಾಡಿ ಬಸವ ಬಹಳ ದೊಡ್ಡವನೆಂದು ।
ಬೆಳ್ಳಿಯ ಮಗಡ ಮಾಡ್ಸೇನಿ ।
ಬೆಳ್ಳಿಯ ಮಗಡ ಮಾಡ್ಸೇನಿ-ಬಸವಣ್ಣ ।
ಹೊನ್ನ ಹಣಿಕಟ್ಟ ಬಿಗಿಸೇನೋ ||೧೮೨||

ಚಂದುಳ್ಳ ಪಟ್ಟದ ಕಲ್ಲು ಇಂಬುಳ್ಳ ಗುಡಿಯಾಗ ।
ಮಂದಾನ ಬಸವ ಮಲಗ್ಯಾಲ ।
ಮಂದಾನ ಬಸವ ಮಲಗ್ಯಾನ-ಗುಡಿಮುಂದ ।
ಕಂದsನ ಬೇಡವರು ಕಡೆಯಿಲ್ಲ ||೧೭೯೩||

* * *

ಊರಿಗೆ ಮಳೆಹುತ್ತು ಏರು ಕಟ್ಟ್ಯೋ ಕಂದಯ್ಯ ।
ಊರs ಮುಂದಿರುವ ಬಸವಣ್ಣ ।
ಊರs ಮುಂದಿರುವ ಬಸವಣ್ಣ-ಕೈಮುಗಿದು ।
ಏರು ಕಟ್ಟ್ಯೋ ಮುದ್ದು ಮುಖದವನೆ ||೧೭೯೪||

* * *

ಹತ್ತು ಸಾವರ ಪದಗೂಳ ಎತ್ತಿನ್ಮ್ಯಾಲ್ಹೇರಿಕೊಂಡು ।
ಮತ್ತೆ ಸಾವಿರ ಕೈಲಿ ಹಿಡಕೊಂಡು ।
ಮತ್ತೆ ಸಾವಿರ ಕೈಲಿ ಹಿಡಕೊಂಡು-ಬಂದೇನಿ ।
ಬಾರೋ ಬಸವಣ್ಣ ಬಯಲೀಗಿ ||೧೭೯೫||

* * *

ಕುಂಟೋಜಿ ಬಸವಣ್ಣ ಬಂಟಾಗಿ ಕಾದಾಡಿ ।
ಕುಂಟಾದ ಕಾಲ ಮುರಕೊಂಡು ।
ಕುಂಟಾದ ಕಾಲ ಮುರಕೊಂಡು-ಪರಿಸ್ಯಾಗ ।
ಮಂಟಪದ ಮುಂದ ಮಲಗ್ಯಾನ ||೧೭೯೬||

* * *

ಹಾದೀಯ ಹೊಲದಾಗ ಹಾರವರ ಅಟ್ಟsಣಿ ।
ಕಂಚೀನ ಕವಣಿ ಮಿಡಿ ಬಿಲ್ಲು
ಕಂಚೀನ ಕವಣಿ ಮಿಡಿ ಬಿಲ್ಲು-ತಕ್ಕೊಂಡು ।
ಲಂಕಿಗ್ಹಾರಿಸ್ಯಾನ ಗಿಳಿ ಹಿಂಡು ||೧೭೯೭||

ಬಿತ್ತೀದ ಹೊಲದಾಗ ಉತ್ರಾಣಿ ಕಾಳಾಗ ।
ಪುಟ್ಟ ರಾಜಣದ ಬಯಲಾಗ ।
ಪುಟ್ಟ ರಾಜಣದ ಬಯಲಾಗ-ಬನಶಂಕ್ರೆಮ್ಮ ।
ಚಿತ್ರ ಸಾಲಾಗ ಬರತಾಳ ||೧೭೯೮||

ಕೋಲೆನ್ನಿರೆ ಸೀಗೀಗೆ ಕೊಲೆನ್ನಿರೆ ಗೌರೀಗೆ ।
ಕೋಲು ಕಲ್ಯಾಣ ಬಸವಽಗ ।
ಕೋಲು ಕಲ್ಯಾಣ ಬಸವಽಗ-ಬಲಗೊಂಡ್ರ ।
ಬಾರದ ಹಾಡು ಬರತಾವ ||೧೭೯||

ನೋಡೀರಿ ನಂಬಸವಽನ ಕೀಟಽಲಿತನವನ್ನು ।
ಗ್ವಾಡೀಯು ಒಡದು ಬರತಾನ ।
ಗ್ವಾಡೀಯು ಒಡದು ಬರತಾನ-ಬಸವಯ್ನು ।
ಇಣಿಯು ವ್ಯಾಲ್ಯೈತಿ ಕೈಲಾಸ ||೧೮೦||

* * *

ಭೂಮಿ ಹುಟ್ಟಿದ ಮೊದಲು ಭೂಮಿ ಕಟ್ಟಿದ ಮೊದಲು ।
ಭೂಪ ಹುಟ್ಟೀದ ಬಸವಯ್ಯ ।
ಭೂಪ ಹುಟ್ಟೀದ ಬಸವಯ್ಯ-ವ್ಯಾಗೀನ ।
ಶಿವಗೇಳು ದಿನಕ ಹಿರಿಯಾನ ||೧೮೧||

* * *

ಕೌಜಗನ ತತ್ತ್ಯಾಗ ಹ್ಯಾಂಗಿದ್ದಿ ಬಸವಯ್ಯ ।
ಎಂದೆಂದಿಗಿ ಮಾಗಿ ಮಳೆಗಾಲ ।
ಎಂದೆಂದಿಗಿ ಮಾಗಿ ಮಳೆಗಾಲ-ಮುಂಜಿನ್ಯಾಗ ।
ಹ್ಯಾಂಗಿದ್ದಿರಿ ಚನ್ನ ಬಸವಯ್ಯ ||೧೮೨||

* * *

ಕಾಳ್ಹೋರಿ ಕಪ್ಹೋರಿ ಕಡಲೆ ಬಣ್ಣದ ಹೋರಿ ।
ಈರಣ್ಣನೆಂಬೋ ಹೊಸ ಹೋರಿ ।
ಈರಣ್ಣನೆಂಬೋ ಹೊಸ ಹೋರಿ-ಕಟಿಗೊಂಡು ।
ನೂರೊಂದು ಸಾಲ ಹೊಡದೇನಿ ||೧೮೩||

* * *

ಆಕಾಶದರಿಕೋಲು ಭೂಮಿ ತೂಕದ ಕುಂಟಿ ।
ರಾಮು-ಚಂದ್ರನೆಂಬೋ ಎರಡೆತ್ತು ।
ರಾಮು-ಚಂದ್ರನೆಂಬೋ ಎರಡೆತ್ತು-ಹಿಡುಕೊಂಡು ।
ನೂರೊಂದು ಸಾಲ ಹೊಡದಾನ ||೧೮೪||

ಎತ್ತು ಅನಬಹುದೆ ಎಡಗೋಲ ಬಸವಣ್ಣ ।
ಸುತ್ತೇಳು ಲೋಕ ಮೆರೆಯೂವ ।
ಸುತ್ತೇಳು ಲೋಕ ಮೆರೆಯೂವ--ಬಸವಣ್ಣ ।
ಎತ್ತು ಅನಬಹುದೆ ಧರಿಯಾಗ ॥೧೮೫॥

* * *

ಕಟ್ಟಿ ಕಟ್ಟದ ಮೊದಲು ಕಲ್ಲ್ಯಾಣ್ಹುಟ್ಟದ ಮೊದಲು ।
ಬಲ್ಲಿದ್ಹುಟ್ಟ್ಯಾನ ಬಸವಯ್ಯ ।
ಬಲ್ಲಿದ್ಹುಟ್ಟ್ಯಾನ ಬಸವಯ್ಯ-ಮ್ಯಾಲೀನ ।
ಶಿವಗೇಳು ದಿನಕ ಹಿರಿಯಾನ ॥೧೮೬॥

* * *

ಕಟ್ಟಿ ಮಣ್ಣನು ತಂದು ಕೆತ್ತಿ ಬಸವನ ಮಾಡಿ ।
ಎತ್ತೆನ್ನ ಬಹುದೆ ಬಸವಯ್ಯ ।
ಎತ್ತೆನ್ನ ಬಹುದೆ ಬಸವಯ್ಯ--ನಿಮ್ ಪಾದ್ಕ ।
ಪಟ್ಟೊಳ್ಳಿ ಇಟ್ಟು ಶರಣೆಂದೆ ॥೧೮೭॥

* * *

ಹಾದಿ ಮಣ್ಣನು ತಂದು ಗೀರು ಬಸವನ ಮಾಡಿ ।
ಹೋರೆನ್ನ ಬಹುದೆ ಬಸವಯ್ಯ ।
ಹೋರೆನ್ನ ಬಹುದೆ ಬಸವಯ್ಯ--ನಿಮ್ ಪಾದ್ಕ ।
ನಾಣೇವನಿಟ್ಟು ಶರಣೆಂದೆ ॥೧೮೮॥

* * *

ಆಗಾಸ ದಡಿವ್ಯಾಗ ಧೂಪದ ಹೋಗಿ ಎದ್ದು ।
ಭೂಪ ಬಸವಯ್ನ ಶಿವಪೂಜಿ ।
ಭೂಪ ಬಸವಯ್ನ ಶಿವಪೂಜಿ-ಆಗುವಾಗ ।
ಆಗಾಸದ ಘಂಟೆ ಢಣಲೆಂದು ॥೧೮೯॥

* * *

ಏರಾಬಾರದ ಗುಡ್ಡ ಹ್ಯಾಂಗೇರಿದಿ ಬಸವಣ್ಣಾ ।
ಬೋರಂಗಿ ಪಕ್ಕ ಸರಜಂಗು ।
ಬೋರಂಗಿ ಪಕ್ಕ ಸರಜಂಗು-ಕಟಿಗೊಂಡು ।
ಏರಿ ಮೇದಾನೋ ಎಳೆಹುಲ್ಲ ॥೧೯೦॥

ಎರಗಿ ನೋಡುನು ಬಾರ ಹಿರಿಯುಗಸಿ ಬಸವನ್ನ
ಸರಗೋಳ ಗಂಟೆ ಹುರಿಗೆಜ್ಜಿ ।
ಸರಗೋಳ ಗಂಟೆ ಹುರಿಗೆಜ್ಜಿ--ನಂಬಸವ ।
ಚಲುವನ್ನ ನೋಡ್ಲಾಕ ಮುರತ್ಯಾಕ ॥೧೮೧೧॥

*

ಕಂಡೀರೆ ನಮ್ ಬಸವನ ಪುಂಡತನ ಗೋಳಿಲ್ಲ ।
ಹೆಂಡೀಯು ಒಡೆದು ಬರತಾನ ।
ಹೆಂಡೀಯು ಒಡೆದು ಬರತಾನ-ಬಸವಯ್ನ ।
ಕೋಡೀನ ಮ್ಯಾಲೆ ಕೈಲಾಸ ॥೧೮೧೨॥

* * *

ಹೊಕ್ಕು ನೋಡುನು ಬಾರ ಚಿಕ್ಕಗಸಿ ಬಸವನ್ನ ।
ಒಕ್ಕಳ ಗಂಟೆ ಹುರಿಗೆಜ್ಜೆ ।
ಒಕ್ಕಳ ಗಂಟೆ ಹುರಿಗೆಜ್ಜೆ--ನಮ್ ಬಸವ ।
ಸುತ್ತ ಮರ್ತ್ಯಕ ಬಲು ಚಲುವಾ ॥೧೮೧೩॥

* * *

ಕಟ್ಟೀಯು ಹೊಲಗಳ ಮೆಟ್ಟದಿರು ಬಸವಣ್ಣ ।
ಮಕ್ಕಳೊಂದಿಗರ ಬಡ ಬಗ್ರ ।
ಮಕ್ಕಳೊಂದಿಗರ ಬಡ ಬಗ್ರ--ಹೊಲಗಳ ।
ಮೆಟ್ಟದಿರು ಚನ್ನ-ಬಸವಣ್ಣ ॥೧೮೧೪॥

* * *

ಕೆಂಪು ಕೋಡಿನ ಬಸವ ತಂಪಿನ್ಯಾಗ್ಹ್ಯಾಂಗಿದ್ದ್ಯೊ ।
ತಂಪೊತ್ತಿ ತಂಪ ಮಳಲೊತ್ತಿ ।
ತಂಪೊತ್ತಿ ತಂಪ ಮಳಲೊತ್ತಿ-ಬಸವನ ।
ಕೆಂಪು ಬಾಡ್ಯಾವ ಬಿಸಲೀಗೆ ॥೧೮೧೫॥

* * *

ಕರಿಯು ಕೋಡಿನ ಬಸವ ಕೆರಿಯಾಗ ಹ್ಯಾಂಗಿದ್ದ್ಯೊ ।
ಕೆರಿ ಬತ್ತಿ ಕೆರಿಯು ಮಳಲೊತ್ತಿ ।
ಕೆರಿ ಬತ್ತಿ ಕೆರಿಯು ಮಳಲೊತ್ತಿ-ಬಸವನ ।
ಕರದ ಬಾಡ್ಯಾವ ಬಿಸಲೀಗೆ ॥೧೮೧೬॥

ಎತ್ತು ಕಾಯುವ ಅಣ್ಣ ನಮ್ಮೆತ್ತ ಕಂಡೇನೋ ।
ಮುತ್ತಿನ ಹಗ್ಗ ಮುಗುದಾಣ ।
ಮುತ್ತೀನ ಹಗ್ಗ ಮುಗುದಾಣ-ಹಾಕ್ಕೊಂಡು ।
ಹುತ್ತೀನ ಕೆಳಗ ಮಲಗ್ಯಾನೋ ॥೧೮೧೭॥

* * *

ಉದ್ದೀನ ಕಾಳಷ್ಟು ತಿದ್ದ್ಯಾರ ಬಸವನ್ನ ।
ಉದ್ದು ನಮ್ಮಲ್ಲಿ ಅಪರೂಪ ।
ಉದ್ದು ನಮ್ಮಲ್ಲಿ ಅಪರೂಪ-ಬಸವಯ್ನ ।
ತಿದ್ದ್ಯಾರುಳುವೀಯ ಗುಡಿಯಾಗ ॥೧೮೧೮॥

ಕಡಲಿ ಕಾಳಷ್ಟು ಕಟೆದಾರ ಬಸವನ್ನ ।
ಕಡಲಿ ನಮ್ಮಲ್ಲಿ ಅಪರೂಪ ।
ಕಡಲಿ ನಮ್ಮಲ್ಲಿ ಅಪರೂಪ-ಬಸವಯ್ನ ।
ಕಟೆದಾರ ಕಲ್ಯಾಣ ಮಠದಾಗ ॥೧೮೧೯॥

* * *

ಹರಿಯುವ ಹಳದಾಗ ಡುರಿಕೆಂತ ಬರುವೂರ ।
ಚಿಟಿಗೊಳಗ ಬಾಲ ಮಣಗದಲಿ ।
ಚಿಟಿಗೊಳಗ ಬಾಲ ಮಣಗದಲಿ-ಬರುವಂಥ ।
ಬಂಟ ಚಿಂಚಲ ಬಸವಯ್ಯ ॥೧೮೨೦॥

* * *

ತುಂಬೀದ ಹೊಳಿಯಾಗ ಅಂಬಾಂತ ಬರುವೂರ ।
ಹಿಂದೀನ ಬಾಲ ಮಣಗದಲಿ ।
ಹಿಂದೀನ ಬಾಲ ಮಣಗದಲಿ-ಬರುವಂಥ ।
ಧೀರ ದೇಗಲೊಳ್ಳಿ ಬಸವಯ್ಯ ॥೧೮೨೧॥

* * *

ಉದ್ದಿನ ಕಾಳ್ಹಿಂದು ತೆಗ್ಗಿನ ನೀರ್ಕುಡಿದು ।
ಹೆಬ್ಬಾಗಿಲದಾಗ ಡರಕೀಯ ।
ಹೆಬ್ಬಾಗಿಲದಾಗ ಡರಕೀಯ-ಹೊಡಿವಂಥ ।
ಚಲುವ ಹುಂಡೇದ ಬಸವಯ್ಯ ॥೧೮೨೨॥

ಕಡಲಿಕಾಳನು ತಿಂದು ಮಡುವಿನ ನೀರ್ಕುಡಿದು ।
ಕಡೆಯ ಬಾಗಿಲಕ ಡರಕೀಯ ।
ಕಡೆಯ ಬಾಗಿಲಕ ಡರಕೀಯ–ಹೊಡಿವಂಥ ।
ವೀರ ಕಾದ್ರೊಳ್ಳಿ ಬಸವಯ್ಯ ||೧೮೨೩||

* * *

ಕಡಲೆ ಹೊಲ ಮೆಯ್ದು ಕಡೆಯಲ್ಲಿ ನೀರ್ಕುಡಿದು ।
ಕಡದು ಹೋಗ್ಯಾರ ಬಸವಣ್ಣ ।
ಕಡದು ಹೋಗ್ಯಾರ ಬಸವಣ್ಣ–ನಮ್ಮೂರ ।
ಕಡೆಯ ಬಾಗಿಲಾಗ ನೆಲಿಸ್ಯಾರ ||೧೮೨೪||

* * *

ಮಲ್ಲನ ಮೂಲ್ಯಾಗಿರುವ ಜಲ್ಲೀಗೋಡಿನ ಬಸವ ।
ಇಲ್ಲ್ಯಾಕs ನೀವು ನೆಲಸೀರಿ ।
ಇಲ್ಲ್ಯಾಕs ನೀವು ನೆಲಸೀರಿ–ಬಸವಣ್ಣ ।
ನನ್ನ ಮಡದೀಗೆ ನಿದ್ದಿ ಕೊಡಬಾರದೆ ||೧೮೨೫||

* * *

ನಾಗಾಳ ಸೆರೆಗೆಜ್ಜೆ ನಾಗಾಳ ಉರಿಗೆಜ್ಜೆ ।
ಚೊಕ್ಕ ಬೆಳ್ಳಿ ಮಕರಂಬ ।
ಚೊಕ್ಕ ಬೆಳ್ಳಿ ಮಕರಂಬ–ನಮ್ಮೂರ ।
ಉಪ್ಪರಿಗೆ ಚಂದ ಬಸವಣ್ಣ ||೧೮೨೬||

* * *

ಸಾವಿರೆತ್ತಿನ ಮುಂದೆ ಹೋಗೋದು ನಮ್ಮೆತ್ತು ।
ಪಾದಕ್ಕೆ ಜಂಗು ಮೊಕರಂಬೆ ।
ಪಾದಕ್ಕೆ ಜಂಗು ಮೊಕರಂಬೆ–ಹಾಕ್ಕೊಂಡು ।
ಓಲಾಡಿಗಿರಿಯ ಇಳಿದಾವು ||೧೮೨೭||

* * *

ಮುತ್ತೀನ ಕೋಲು ಮುಂಗೈಲಿ ಹಿಡಕೊಂಡು ।
ಮುಂದ್ಹೋರು ಹೊಡೆವ ಮೂಗಣ್ಣ ।
ಮುಂದ್ಹೋರು ಹೊಡೆವ ಮೂಗಣ್ಣ–ನಿನ್ನೆತ್ತು ।
ತ್ತಿ ಜಾರಿ ಇಳಿದಾವೋ ||೧೮೨೮||

ಎತ್ತು ಕಾಯುಽಗ ಎಳೆ ಸಣ್ಣ ಅರುಕಡ್ಡಿ |
ಪಚ್ಚೆ ತೆನೆಯಂಥ ನಾಗಸರ |
ಪಚ್ಚೆ ತೆನೆಯಂಥ ನಾಗಸರ-ತಕ್ಕೊಂಡು |
ಎತ್ತೀನ ಜ್ಞಾನ ಮರೆತಾನು ||೧೮೨೯||

* * *

ಹೊತ್ತು ಮೀರಿದರು ಹೋರಾಟ ಬಿಡದಲ್ಲ |
ಹೊಡೆಯಣ್ಣ ದೂರ ಗಿರಿಸೀಮೆ |
ಹೊಡೆಯಣ್ಣ ದೂರ ಗಿರಿಸೀಮೆ-ನಂಜಯ್ನ |
ತೋಳ ಬಾಪುರಿಯ ಬೆಳಕಲ್ಲಿ ||೧೮೩೦||

* * *

ಹಂಚೀ ಮೇದಾವೋ ಮಿಂಚ್ಯಾವ ನಮ್ಮೆತ್ತು |
ಪಂಚ ಮುಖದೊಡೆಯ ದಾಸಯ್ಯ |
ಪಂಚಮುಖದೊಡೆಯ ದಾಸಯ್ಯ-ನಮ್ಮೆತ್ತು |
ಮಿಂಚೂತ ಬೆಟ್ಟ ಇಳಿದಾವು ||೧೮೩೧||

* * *

ಸೋದರ ಮಾವನೆತ್ತು ಸೋಗೆ ಹುಲ್ಲು ಮೇದು |
ಸೋಬಾನ ಕಟ್ಟೆ ತಿಳಿನೀರು |
ಸೋಬಾನಕಟ್ಟೆ ತಿಳಿನೀರು-ಕುಡಿದು |
ತೂರ್ಯಾಡಿ ಗಟ್ಟ ಇಳಿದಾವು ||೧೮೩೨||

* * *

ಬಸವಯ್ಯ ಹುಟ್ಟಽಲಿ ಹೊಸಪೇಟೆ ಕಟ್ಟಽಲಿ |
ರಸಬಾಳೆ ಕಬ್ಬು ಬೆಳೆಯಽಲಿ |
ರಸಬಾಳೆ ಕಬ್ಬು ಬೆಳೆಯಽಲಿ-ನಮ್ಮೂರ |
ಬಸವಣ್ಣನ ತೇರು ಎಳಿಯಾಲಿ ||೧೮೩೩||

## ಕಿತ್ತೂರು

ಕಾಡಾನೆ ಕಾಡಯ್ಯ ಬ್ಯಾಡಽರ ಬೀಡಯ್ಯ ।
ನಾಡಾಗಿ ಮಾಡಿ ಮಲ್ಲಣ್ಣ ।
ನಾಡಾಗಿ ಮಾಡಿ ಮಲ್ಲಣ್ಣ–ಕಿತ್ತೂರ ।
ಗೂಡೀಗೆ ಗುಡಿಯ ನೇರಿಸಿದೋ ॥೧೮೩೪॥

* * *

ಬಣಜೀಗ ಮಲ್ಲಣ್ಣ ಜನದಾಗ ಽಣಿಯಾದ ।
ಕುಣಿಸಿ ಲಕ್ಕಸಿಮಿ ನಾಡಾಗ ।
ಕುಣಿಸಿ ಲಕ್ಕಸಿಮಿ ನಾಡಾಗ–ಕಿತ್ತೂರ ।
ಕಣಜಾತು ಮುತ್ತು ಮಾಣಿಕದ ॥೧೮೩೫॥

ಕಿತ್ತೂರ ಕಡೆಯರಸು ಮುತ್ತು ಮಾಣಿಕದೊಡೆಯ ।
ದತ್ತಽಕ ಮಗ ಮಲಸರ್ಜ ।
ದತ್ತಽಕ ಮಗ ಮಲಸರ್ಜ–ಸಮಸೂರ ।
ಸತ್ತ ಕಿತ್ತೂರ ಮುಟ್ಟುದಕೋ ॥೧೮೩೬॥

* * *

ಹಾಲಗುಂಬಳ ಬಳ್ಳಿ ಹಾದೀಗೆ ಹಬ್ಬ್ಯಾವ ।
ಹಾರೂರಿಗೆ ಬಂತು ದವಲತ್ತು ।
ಹಾರೂರಿಗೆ ಬಂತು ದವಲತ್ತು–ಕಿತ್ತೂರ ।
ಮಲಸರ್ಜ್ಗ ಬಂತೊ ವನವಾಸೋ ॥೧೮೩೭॥

* * *

ಸೊಗಲಂಬೋ ಊರಿಲ್ಲ ಸಮುದರಕ ನೆಲೆಯಿಲ್ಲ ।
ಜ್ಯಾತ ಮುತ್ತೀಗೆ ಬೆಲೆಯಿಲ್ಲ ।
ಜ್ಯಾತ ಮುತ್ತೀಗೆ ಬೆಲೆಯಿಲ್ಲ–ಕಿತ್ತೂರ ।
ಮಲಸರ್ಜನಂಥ ಧೊರಿಯಿಲ್ಲ ॥೧೮೩೮॥

ರಂಗ ಕಿತ್ತೂರಮ್ಹಾಲ ಹೊಕ್ಕು ನೋಡೂಣ ಬಾರ ।
ಮ್ಹಾಲ ಮ್ಹಾಲೆಲ್ಲ ಕನ್ನೂಡಿ ।
ಮ್ಹಾಲ ಮ್ಹಾಲೆಲ್ಲ ಕನ್ನೂಡಿ–ಮಲಸರ್ಜ ।
ಮ್ಹಾಲ ಕಟ್ಟೇರಿ ಇರಲಿಲ್ಲೋ ||೧೮೩೯||

* * *

ಕಿತ್ತೂರಿ ನೀ ಮ್ಹಾಲ ಮತ್ತ್ಯಾರ ಕಟ್ಟಿಸ್ಯಾರ ।
ಮಕ್ಕಳ ತಂದಿ ಮಲಸರ್ಜ ।
ಮಕ್ಕಳ ತಂದಿ ಮಲಸರ್ಜ–ನಿಮ್ಹಾಲ ।
ಹೊಕ್ಕ ನೋಡ್ಯಾರ ಹೊಲಿಯಾರ ||೧೮೪೦||

* * *

ಕಿತ್ತೂರ ಮಲಸರ್ಜ ಕಿಚ್ಚ ಗಂಜವನಲ್ಲ ।
ದತ್ತಗೇಡ್ಯೊಬ್ಬ ಮಗ ಹುಟ್ಟಿ ।
ದತ್ತಗೇಡ್ಯೊಬ್ಬ ಮಗ ಹುಟ್ಟಿ–ಕಳಿದಾನೊ ।
ಹತ್ತ ತಲಿ ಗಂಡ ವತನವ ||೧೮೪೧||

* * *

ಕಿತ್ತೂರ ಮಲಸರ್ಜ ಯಾರಿಗಂಜವನಲ್ಲ ।
ಪಚ್ಚೇದ ಕಣ್ಣು ತಿರುವೂತ ।
ಪಚ್ಚೇದ ಕಣ್ಣು ತಿರುವೂತ–ಮಲಸರ್ಜ ।
ತಕ್ಕೊಂಡೆನೆಂದ ಹುದಲೀಯ ||೧೮೪೨||

* * *

ಶಿವಲಿಂಗ ರುದ್ರನಿಗೆ ಸಾವು ಕೂಡಲೆ ಬಂತು ।
ಜೀವ ಕಸಿವೀಸಿ ಚೆನ್ನವ್ವೋ ।
ಜೀವ ಕಸಿವೀಸಿ ಚೆನ್ನವ್ವೋ–ಹಾರೂರು ।
ಹಾವಾಗಿ ಮನೆಗೆ ವಿಷ ಬಿಟ್ಟೋ ||೧೮೪೩||

* * *

ಮಡಿದೇರಿಬ್ಬರು ಸಿಡಿದು ಕಡದಾಡಿ ಒಡಕ್ಹುಟ್ಟಿ ।
ತಡಮಾಡ್ದೆ ದತ್ಕ ತಗೊಂಡು ।
ತಡಮಾಡ್ದೆ ದತ್ಕ ತಗೊಂಡು–ಚನ್ನಮ್ಮ ।
ಒಡತ್ಯಾಗಿ ನಾಡ ಆಳ್ಯಾಳೋ ||೧೮೪೪||

41

ಹಾಲಿನಂಥ ಕಿತ್ತೂರಿಗೆ ಹನ್ನೆರಡು ಕೀಲಗಸಿ ।
ಸುತ್ತ ಸುತ್ತೆಲ್ಲ ಕಿರಿಜಿಡ್ಡಿ ।
ಸುತ್ತ ಸುತ್ತೆಲ್ಲ ಕಿರಿಜಿಡ್ಡಿ–ಈರಪ್ನ ।
ಕಿತ್ತೂರಿಗೆ ತಂದು ಇಳಿವ್ಯಾರೋ ||೧೮೪೫||

* * *

ಕಂದಽನ್ನ ಹಡೀಲಿಲ್ಲ ಕೈಬೀಸಿ ನಡೀಲಿಲ್ಲ ।
ಗಂಡಽನ ಪುಣ್ಯ ಉಣಲಿಲ್ಲ ।
ಗಂಡಽನ ಪುಣ್ಯ ಉಣಲಿಲ್ಲ–ಈರವ್ವ ।
ರಂಡಿತನ ನಿನಗ ಮೂಲಾತೋ ||೧೮೪೬||

* * *

ಕನ್ನೂರ ಮಲ್ಲಽಗ ತನ್ನ ಬ್ಯಾನ್ಹತ್ತಽಲಿ ।
ಚನ್ನಮ್ಮನ ರಾಜ್ಯ ನುಂಗಾಕೋ ।
ಚನ್ನಮ್ಮನ ರಾಜ್ಯ ನುಂಗಾಕೊ–ಥ್ಯಾಕರೆಗ ।
ಗುನ್ನೆ ಮಾಡುದಕ ಪುಸಲಿಟ್ಟ್ಯೋ ||೧೮೪೭||

* * *

ಕಲ್ಲೂರ ಮಲ್ಲಽಗ ಎಲ್ಲಾರೂ ಒದಿಯಽಲಿ ।
ಗುಲ್ಲಾ ಗಂಟೀರು ಉಗುಳಽಲಿ ।
ಗುಲ್ಲಾ ಗಂಟೀರು ಉಗುಳಽಲಿ–ಥ್ಯಾಕರೆಗ ।
ಸಲ್ಲಾ ಕೊಟ್ಟಾನೋ ಮುತ್ತಾಕೋ ||೧೮೪೮||

* * *

ಧಾರ್ವಾಡ್ದ ವೆಂಕಽಟ ದಾರ್ದ್ಲೀಲೆ ಸಿರಕೊಯ್ದ ।
ಕಾರಭಾರಿಗಳು ಕಿವಿಗೊಟ್ಟು ।
ಕಾರಭಾರಿಗಳು ಕಿವಿಗೊಟ್ಟು–ಕಿತ್ತೂರು ।
ಚೂರು ಚೂರಾತೊ ಕದನಾತೋ ||೧೮೪೯||

* * *

ಕಿತ್ತೂರ ಚನ್ನಮ್ಮ ಸುತ್ತೂರ ಒಡಿತ್ಯಾಗಿ ।
ಕತ್ತಿ ಕವಚಗಳ ಉಡುಪುಟ್ಟ್ಯೋ ।
ಕತ್ತಿ ಕವಚಗಳ ಉಡುಪುಟ್ಟ್ಯೋ–ಅಬ್ಬರದಿ ।
ಬತ್ತಽಲ ಗುದರೀಯ ಜಿಗದೇರೋ ||೧೮೫೦||

ಗಂಡನ್ನ ಕಳಕೊಂಡು ಬೆಂಡಾದ ಚನ್ನಮ್ಮ।
ಗಂಡಾಗಿ ರಣಕ ಇಳಿದಾಳೊ।
ಗಂಡಾಗಿ ರಣಕ ಇಳಿದಾಳೊ-ನಾಡ್ನೆನ್ನ।
ಪುಂಡ ಬಂಡಾಯ ಹಿಂಡಾಕೋ ॥೧೮೫೧॥

* * *

ಧಾರವಾಡದ ದಂಡು ವಾರ್‍ಯಾಗ ಬರುತಿರಲು।
ಏರೀಯ ಹತ್ತಿ ಸುರಿಸ್ಯಾನೊ।
ಏರೀಯ ಹತ್ತಿ ಸುರಿಸ್ಯಾನೋ-ಕಿತ್ತೂರ।
ವೀರರೊಗೆದಾರೊ ಗುಂಡಿರೋ ॥೧೮೫೨॥

* * *

ಕೆಂಪು ಮಾರಿಯ ದಂಡು ಸಿಂಪಾಗಿ ಸಿಡದೀತೊ।
ರಪ್ಪ ರಪ್ಪೆಂದು ಓಡೀತು।
ರಪ್ಪ ರಪ್ಪೆಂದು ಓಡೀತು-ಅಮಟೂರ।
ಬಾಳಪ್ಪ ಗುಂಡಿಟ್ಟ ಥ್ಯಾಕರೆಗ ॥೧೮೫೩॥

* * *

ಮುಚ್ಚಿನ ಕಾಳಗಕ ಮೆಚ್ಚ್ಯಾಳೊ ಚನ್ನಮ್ಮ।
ಉಚ್ಚಿ ಬೆಳ್ಳಿಗಳ ಕೊಡತಾಳೊ।
ಉಚ್ಚಿ ಬೆಳ್ಳಿಗಳ ಕೊಡತಾಳೊ-ಬಂಟರಿಗೆ।
ಹೆಚ್ಚಿನ ರೋಜ ಬರಿಸ್ಯಾಳೊ ॥೧೮೫೪॥

* * *

ಬೆಳಗಾವಿ ಚಾಪ್ಲಿನ್ನ ಒಳಹಾದಿಲೆ ದಂಡೆತ್ತಿ।
ಬೆಳಗಾಗಿ ದಂಡು ಬೀಡಿಟ್ಟೊ।
ಬೆಳಗಾಗಿ ದಂಡು ಬೀಡಿಟ್ಟೊ-ಕಿತ್ತೂರ।
ತಳಮಳ ನೋಡೊ ಚಣದಾಗೊ ॥೧೮೫೫॥

ಹೊನ್ನು ಹಣಗಳ ನೀವೆ ಮುನ್ನೂಣಿ ನಿನಗೀವೆ।
ಬೇಡಿದ್ದ ನೀವೆ ಗೋವಿಂದ।
ಬೇಡಿದ್ದ ನೀವೆ ಗೋವಿಂದ-ಮನಸಿಟ್ಟು।
ಮದ್ದೀಗೆ ಎಣ್ಣೆ ನೀ ಬೆರಿಸೋ ॥೧೮೫೬॥

ಲದ್ದೀಯು ಗೋವಿಂದ ಕುದ್ದಲಗೇಡಿ ಹಾರೂವ ।
ಮದ್ದೀಗೆ ಲದ್ದಿ ಬೆರಿಸ್ಯಾನೊ ।
ಮದ್ದೀಗೆ ಲದ್ದಿ ಬೆರಿಸ್ಯಾನೊ–ನಸೀಬಃವೊ ।
ಬಿಮು ಕಿತ್ತೂರು ಹಾಳಾಯ್ತು ॥೧೮೭೭॥

ಕನ್ನೂರ ಕಲ್ಲೂರ ಮಲ್ಲರದು ಕಪಿತೂರಿ ।
ರಾಗಿ ಕೂಡಿಸಿದ ಹುಸಿ ಮದ್ದೊ ।
ರಾಗಿ ಕೂಡಿಸಿದ ಹುಸಿ ಮದ್ದೊ--ಕಿತ್ತೂರ ।
ನಸೀಬ ಹಾರ್‍ಯಾವೋ ಹುಸಿ ಗುಂಡ ॥೧೮೭೮॥

* * *

ಕಿತ್ತೂರ ಕಿಲ್ಲೀಕ ಉತ್ರೀಕರ್‍ಯಾರಿಲ್ಲ ।
ಉಕ್ಕೀನ ಗುಂಡು ಬಿಗಿವಾಗ ।
ಉಕ್ಕೀನ ಗುಂಡು ಬಿಗಿವಾಗ--ಚನ್ನಮ್ಮ ।
ಹಕ್ಕ್ಯಾಗಿ ಬಾಃಯು ಬಿಡತಾಳ ॥೧೮೭೯॥

* * *

ಕಿತ್ತೂರ ಕಿಲ್ಲೀಕ ಏನೇನ ಮಸಲತ್ತು ।
ಉಕ್ಕೀನ ಗುಂಡ ಉರಿಬಾಣ ।
ಉಕ್ಕೀನ ಗುಂಡ ಉರಿಬಾಣ--ಚನ್ನಮ್ಮ ।
ಅರಮನಿಗೆ ಬಾಣ ಬಿಡತಾರೋ ॥೧೮೮೦॥

* * *

ಜಮುಖಂಡಿ ದೇಸಾಯಿ ಯಮುಕೀಲಿ ಕೂಡೀದ ।
ಸಮುಯ್ಯಃಕ ಚಾಪ್ಲಿನ್‌ನ ದಂಡೀಗೊ ।
ಸಮುಯುಃಕ ಚಾಪ್ಲಿನ್‌ನ ದಂಡಿಗೊ--ಕಿತ್ತೂರ ।
ಸಮನಾಗ್ಯೆಸಿರಿ ಹೊತ್ತೊಯ್ತೊ ॥೧೮೮೧॥

* * *

ಎಂಥಾದ ಕಿತ್ತೂರು ಚಿಂತ್ಯಾಗ ಬೆಳಗಾತ ।
ಕೆಂಪು ಮೋತೆವರು ಒಲಿಹೂಡಿ ।
ಕೆಂಪು ಮೋತೆವರು ಒಲಿಹೂಡಿ–ಚೆನ್ನವ್ವ ।
ಚಿತ್ರದ ಮೂಲ ಮುರಿದಾರೋ ॥೧೮೮೨॥

ಕಿತ್ತೂರ ಕಿಲ್ಲೇಕ ಹತ್ತು ಕಾಲ್ನಿಚ್ಚಣಿಕಿ ।
ಕೊತ್ತ ಕೊತ್ತಳಕ ಕೈ ಪಂಜು ।
ಕೊತ್ತ ಕೊತ್ತಳಕ ಕೈ ಪಂಜು-ಹಿಡಕೊಂಡು ।
ಸುತ್ತ ಚನ್ನವ್ವ ಹುಡಿಕ್ಯಾರೋ ॥೧೮೬೩॥

* * *

ಕಿತ್ತೂರ ಶರಸೂರಿ ಮತ್ತೇನು ಹೇಳಲಿ ।
ಚಿತ್ತರದ ಗೊಂಬಿ ಅಳತಾವ ।
ಚಿತ್ತರದ ಗೊಂಬಿ ಅಳತಾವ--ಚನ್ನವ್ವ ।
ಹಿಂಡೆವ್ಮೃ ಹಸವು ಉಳಿಗsರ ॥೧೮೬೪॥

* * *

ಕೆರಳೀದ ಕೇಸರಿಣಿ ಕಿತ್ತೂರ ಬಿಟಗೊಟ್ಟು ।
ಬತ್ತಲ ಗುದರೀಯು ಜಿಗದೇರಿ ।
ಬತ್ತಲ ಗುದರೀಯು ಜಿಗದೇರಿ-ಹೊಂಗಲದ ।
ಗಡಿಯಾಗ ಪೈರೀಗೆ ಸೆರೆಯಾಗಿ ॥೧೮೬೫॥

* * *

ಕಿತ್ತೂರ ಶರಸೂರಿ ಮತ್ತೇನ ಹೇಳsಲಿ ।
ಎತ್ತೊಂಟಿ ಮ್ಯಾಲೆ ಸದಲ್ಡೇರಿ ।
ಎತ್ತೊಂಟಿ ಮ್ಯಾಲೆ ಸದಲ್ಡೇರಿ-ಹೊಡೆದಾರೊ ।
ಮತ್ತೆ ಧಾರ್ವಾಡ ಕಿಲ್ಲೇಕೋ ॥೧೮೬೬॥

* * *

ಅತ್ತೆ ಸೊಸ್ತೆರ ತಂದು ಮತ್ತ ಹೊಂಗಲದಾಗ ।
ಸುತ್ತ ಕಾವಲಿಯೊ ಹಗಲಿರುಳೊ ।
ಸುತ್ತ ಕಾವಲಿಯೊ ಹಗಲಿರುಳೊ--ಜನದಾಗ ।
ಎತ್ತ ನೋಡಿದರು ತಳಮsಳೋ ॥೧೮೬೭॥

* * *

ಮುಕ್ಕಣ್ಣ ಗತಿಯೆಂದು ಸಿಕ್ಕು ಸೆರೆಯಾಗಿದ್ದು ।
ಬಿಕ್ಕಿ ಅಳತಾಳ ಈರವ್ವ ।
ಬಿಕ್ಕಿ ಅಳತಾಳ ಈರವ್ವ--ರಾಯಣ್ಣ ।
ಅಕ್ಕ ನಿಮ್ಮಪ್ಪಿ ಈ ರಾಯೋ ॥೧೮೬೮॥

ಗೆದ್ದ ಕಿತ್ತೂರ ತಂದು ಉದ್ದsಬೀಳುವೆ ತಾಯಿ ।
ಕದ್ದ ಮಾತಲ್ಲ ನಿಮ್ಮಾಣಿ ।
ಕದ್ದ ಮಾತಲ್ಲ ನಿಮ್ಮಾಣಿ-ಇಲದಿದ್ರ ।
ಬಿದ್ದ ಹೋಗೂವೆ ರಣದಾಗೋ ||೧೮೬೯||

* * *

ಸಂಗೊಳ್ಳಿ ರಾಯಣ್ಣ ಹಂಗ್ಹಂದ ದಳವಾಯಿ ।
ದಂಗೆ ಎಬ್ಬಿಸಿದ ನಾಡಾಗೋ ।
ದಂಗೆ ಎಬ್ಬಿಸಿದ ನಾಡಾಗೊ-ಕಿತ್ತೂರ ।
ಕಂಗೆಟ್ಟು ಜನರು ಕೂಡ್ಯಾರೋ ||೧೮೭೦||

* * *

ಸುದ್ದಿ ಹಬ್ಬಿತು ಸುತ್ತ ಎದ್ದು ಕೂಡಿತು ಮಂದಿ ।
ಗದ್ದಲಕ ಅಂಜಿ ಸರಕಾರ ।
ಗದ್ದಲಕ ಅಂಜಿ ಸರಕಾರ-ಈರವ್ವ ।
ಕದ್ದೀಲಿ ಕೊಂದಾರೊ ವಿಷಕೊಟ್ಟೋ ||೧೮೭೧||

* * *

ಬೆಳ್ಳಿ ಹರಿವಾಣದಾಗ ಬಿಳಿಮುತ್ತು ಸುರಿಧಂಗ ।
ಚಂದ್ರಸಾಲೀ ಗ್ವಾಡಿ ಬಿರಿಯಲಿ ।
ಚಂದ್ರಸಾಲೀ ಗ್ವಾಡಿ ಬಿರಿಯಲಿ-ಈರವ್ವ ।
ಕೊಂದವರ ವಂಶ ಹುರಿಯsಲಿ ||೧೮೭೨||

* * *

ಖುದಾನ ಪುರದಾಗ ಹೋದಾನೊ ರಾಯಣ್ಣ ।
ಭೇದ ವಿಡಲಿಲ್ಲ ಮನದಾಗ ।
ಭೇದ ವಿಡಲಿಲ್ಲ ಮನದಾಗ-ಲಿಂಗೊಂಡ ।
ವಾದಿ ರಾಯಣ್ಣ ಮೋಸಾಗಿ ||೧೮೭೩||

* * *

ನಂದಗsಡ ಊರಾಗ ಮಂದ್ಯಾಗ ರಾಯಣ್ಣ ।
ತಂದು ಶೂಲಕ್ಕs ಹಾಕ್ಯಾರೋ ।
ತಂದು ಶೂಲಕ್ಕ ಹಾಕ್ಯಾರೋ-ಕಿತ್ತೂರ ।
ಗೊಂದsಲ ಶೂರಗ ದುರ್ಮರಣೋ ||೧೮೭೪||

ಹೊಂಗಲದ ಮಠದಾಗ ಲಿಂಗಪೂಜಿಯಮಾಡಿ ।
ಭಂಗಾಗುದೆಂದು ಎದಿಗುಂದಿ ।
ಭಂಗಾಗುದೆಂದು ಎದಿಗುಂದಿ-ಚನ್ನವ್ವ ।
ಉಂಗುರದ ವಜ್ರವ ನುಂಗ್ಯಾಳೋ ॥೧೮೭೩॥



## ಕಂಪ್ಲಿ

ಹಂಪೀಯ ಶರಣರಿಗೆ ಸಂಪಾದ ಪಟ್ಟಣ ।
ಕಂಪಲಿಯು ನೆರಳು ಶರಣರಿಗೋ ।
ಕಂಪಲಿಯು ನೆರಳು ಶರಣರಿಗೋ-ತುರುಕರಿಗೆ ।
ಕಂಪನವು ಕೇಳಿ ಎದಿಯಾಗೋ ॥೧೮೭೬॥

* * *

ಕಂಪಲಿ ರಾಯನಿಗ ಹಂಪಿ ವಿರುಪನ ಶಾಪ ।
ದಂಪತಿಗೆ ಬಂತೊ ವನವಾಸ ।
ದಂಪತಿಗೆ ಬಂತೊ ವನವಾಸ-ಕಂಪಲಿಯು ।
ಸಿಂಪಾಗಿ ಸಿಡಿದು ಹಾಳಾತೋ ॥೧೮೭೭॥

* * *

ಬೆಚ್ಚಪ್ಪ ಲಿಂಗಯ್ಯ ಹೆಚ್ಚೀನ ಮಂತ್ರಿಗಳು ।
ರೊಚ್ಚಿನನ ಕತ್ತಿರಣಕಟ್ಟಿ ।
ರೊಚ್ಚಿನನ ಕತ್ತಿ ರಣಕಟ್ಟಿ-ತುರುಕನರು ।
ಹುಚ್ಚೆದ್ದು ಓಡಿ ರಣಬಿಟ್ಟು ॥೧೮೭೮॥

* * *

ಮಾನವನು ಕಳಕೊಂಡು ಬಾನರೋಡಿದರಂದು ।
ಖೂನಿ ಮಾಡುದಕ ಮಾತಂಗಿ ।
ಖೂನಿ ಮಾಡುದಕ ಮಾತಂಗಿ-ಹೆಣ್ಣಿದೆ ।
ಮಾನಗೇಡ್ಯಾಗಿ ಒಳಸಂಚು ॥೧೮೭೯॥

ಕೊಂಕಣದ ಮಾತಂಗಿ ಬಿಂಕ ಮಾದರ ಹುಡುಗಿ ।
ಕೊಂಕ ಗುಣದ್ಹೆಣ್ಣು ತುರುಕರಿಗೆ ।
ಕೊಂಕ ಗುಣದ್ಹೆಣ್ಣು ತುರುಕರಿಗೆ–ಮನಸೋತು ।
ವುಂಕಿ ಹಾಕ್ಯಾಳೋ ಕಂಪಲಿಗೋ ॥೧೮೦॥

* * *

ರಾಮರಾಯನು ಬಿದ್ದ ನಾಮ ನಿರ್ನಾಮಾತೋ ।
ಧೂಮ ಧೂಮಾತೊ ಕಂಪಲಿಯೊ ।
ಧೂಮ ಧುಮಾತೊ ಕಂಪಲಿಯೊ–ನಾರಿಯರ ।
ಹೋಮಕೊಂಡಾತೊ ಕಿಚ್ಚಾತೊ ॥೧೮೧॥

* * *

ಏಳುರಾಯರಗಂಡ ಗಾಳರಿಗೆ ಕಾಟಣ್ಣ ।
ತಾಳದಲೆ ಕೊಂದ ಮಾತಂಗಿ ।
ತಾಳದಲೆ ಕೊಂದ ಮಾತಂಗಿ-ಒಡೆಯಾಗ ।
ಕಾಳಗದಿ ಕಾದು ರಣಕಾದ ॥೧೮೨॥

ಕಂಪಲಿ ಹಾಳಾಗಿ ಕೊಂಪೆಯಾಯಿತು ನಸಿಬ ।
ಸಂಪತ್ತು ಹೋತು ತುರುಕರಿಗೊ ।
ಸಂಪತ್ತು ಹೋತು ತುರುಕರಿಗೊ-ಲಿಂಗಯ್ಯ ।
ಜಂಪಿಲ್ದ ಮಡಿದ ರಣದಾಗೋ ॥೧೮೩॥



## ವಿಜಯ ನಗರ

ಬನ್ನೀಯ ಮರಹುಟ್ಟಿ ಹೊನ್ನೀನ ಮಳೆಗರೆದು ।
ಚೆನ್ನs ಪಟ್ಟಣಕ ಹೊಳಿಹರದು ।
ಚೆನ್ನs ಪಟ್ಟಣಕ ಹೊಳಿಹರದು–ಹಂಪ್ಯಾಗ ।
ಬಲ್ಲಾಳ ವೀರರು ಗುಟ್ಟಾಗ್ಯೋ ॥೧೮೪॥

ಹುಕ್ಕ ಬುಕ್ಕರು ಕೂಡಿ ಚಿಕ್ಕ ರಾಜ್ಯವಕಟ್ಟಿ ।
ಮಿಕ್ಕ್ಯಾರೊ ಸುತ್ತ ನಾಡಾಗ ।
ಮಿಕ್ಕ್ಯಾರೊ ಸುತ್ತ ನಾಡಾಗ–ಹಂಪೀಯ ।
ಅಕ್ಕರದಿ ವಿರುಪಾಕ್ಷ ವರಕೊಟ್ಟೊ ॥೧೮೮೫॥

* * *

ಲಕ್ಕಣ್ಣ ದಂಡೇಶ ಜಕ್ಕಣ್ಣಾಚಾರ್ಯರು ।
ಮುಕ್ಕಣ್ಣ ಕಳಿಸಿದ ವೀರರೋ ।
ಮುಕ್ಕಣ್ಣ ಕಳಿಸಿದ ವೀರರೋ–ಪ್ರೌಢಣ್ಣ ।
ಚೊಕ್ಕಾಗಿ ರಾಜ್ಯ ಬೆಳಿಸಿದರೊ ॥೧೮೮೬॥

* * *

ವಿಜಯನಗರದ ರಾಮ ಗಜದ ಅಂಬಾರಿನೇರಿ ।
ತಜ ವಿಜಲಿ ತಲಪಿ ತಂಗಡಗಿ ।
ತಜ ವಿಜಲಿ ತಲಪಿ ತಂಗಡಗಿ–ಸಿರಸಂಗಿ ।
ಸರದಾರ ತಿವಿದ ಈಟಲೆ ॥೧೮೮೭॥

ಪಂಚಶಾಹಿಗಳೆದ್ದು ಕಂಚಾಣ ಹುಡುಕುತಲಿ ।
ಸಂಚೀಲಿ ನಾಡ ನುಂಗ್ಯಾರೋ ।
ಸಂಚೀಲಿ ನಾಡ ನುಂಗ್ಯಾರೊ-ಐಸಿರಿಯು ।
ಹಂಚಿ ಹಂಚಾಗಿ ಮಣ್ಣಾತೋ ॥೧೮೮೮॥



## ನರಗುಂದ

ಹೆಸರೀಗಿ ನರಗುಂದ ಮೊಸರೀಗೆ ನೀರಿಲ್ಲ ।
ಕುಸುರದ ಸಿಂಬಿ ಬರಿಗೊಡ ।
ಕುಸುರದ ಸಿಂಬಿ ಬರಿಗೊಡ–ಇಟಗೊಂಡು ।
ಉಸರಂತ ಭಾವಿ ಇಳಿದಾರ ॥೧೮೮೯॥

ನರಗುಂದ ಕಾಳಪ್ಪ ಮರಿಗುದರಿ ಸಾಯsಲಿ ।
ಚದರಂಗ ವ್ಯಾಲ ಮುರಿಯsಲಿ ।
ಚದರಂಗ ವ್ಯಾಲ ಮುರಿಯsಲಿ-ಸೊರಮೂರ ।
ಸವರೀಗೆ ಸುದ್ದಿ ಹರಿಯsಲಿ ||೧೮೯೦||

* * *

ನರಗುಂದ ವೆಂಬೂದು ಅರಗಿಣಿ ಪಟ್ಟಣ ।
ಕೆರೆ ಕಡಿಸಿ ನೀರ ಕುಡಿಲಿಲ್ಲ ।
ಕೆರೆ ಕಡಿಸಿ ನೀರ ಕುಡಿಲಿಲ್ಲ-ಬಾಬಣ್ಣ ।
ತಿರುಗಿ ನರಗುಂದ ಹೊಗಲಿಲ್ಲ ||೧೮೯೧||

* * *

ಕೆಂಪು ಮಾರಿಯ ದಂಡು ಗುಂಪಾಗಿ ಮುತ್ತ್ಯಾರೋ ।
ಕಂಪೀಸಿ ಹೋತೋ ನರಗುಂದ ।
ಕಂಪೀಸಿ ಹೋತೋ ನರಗುಂದ-ಬಾಬಾಸಾಬ ।
ಹಂಪಿ ಹೊಳಿ ಮುಂದ ತಡವ್ಯಾನ ||೧೮೯೨||

* * *

ಹಂಡs ಬಂಡದ ಕುದರಿ ಗೊಂಡೇದ ಲಗಾವ್ಯಾಕಿ ।
ದಂಡು ಇಳದೀತೋ ನರಗುಂದ್ಕ ।
ದಂಡು ಇಳದೀತೋ ನರಗುಂದ್ಕ-ಬಾಬಾಸಾಬ ।
ಗುಂಡಿಲಿಕ್ಯಾ್ಯನ ಗುಡಿಯಾಗ ||೧೮೯೩||

*

ಇಣ್ಯಾ ತಾಂಡೇದ ಬಂಟ ಕಣ್ಣಿಟ್ಟ ಸಿರಕೊಯ್ದ ।
ಮಣ್ಣ ಪಾಲಾದ ಮೆಣಸನ್ನ ।
ಮಣ್ಣ ಪಾಲಾದ ಮೆಣಸನ್ನ-ನರಗುಂದ ।
ಅಣ್ಣ ಕೂಗ್ಯಾನ ಕಾಳsಗೋ ||೧೮೯೪||

* * *

ಮುಂಡರಗಿ ಭೀಮಣ್ಣ ಬಂಡಾಯ ಎಬ್ಬಿಸಿದ ।
ದಂಡ ಕೂಡ್ಯ್ಯಾನೋ ನರಗುಂದ ।
ದಂಡ ಕೂಡ್ಯ್ಯಾನೋ ನರಗುಂದ-ಬಾಬಾಸಾಬ ।
ಕೆಂಡ ಕಾರ್‍ಯಾನೋ ಕುಂಪಣಿಗೋ ||೧೮೯೫||

ಮಾಲಕವು ಸಾಹೇಬ ಕೇಳಿ ಮೆಣಸನನಸಾವ ।
ಬಿರುಗಾಳಿ ಹಾಂಗ ಮುತ್ತ್ಯಾನೋ ।
ಬಿರುಗಾಳಿ ಹಾಂಗ ಮುತ್ತ್ಯಾನೊ–ನರಗುಂದ ।
ತಾಳ ಬ್ರಷ್ಟಾತೋ ಚಣದಾಗ ||೧೮೯೬||

* * *

ಬಾಪು ಪಂತರ ಸಂಚು ಘಾತನರಗುಂದಾತೊ ।
ಹೋತೋ ಹಾಳಾಗಿ ನಿಪ್ಪತಗಿ ।
ಹೋತೋ ಹಾಳಾಗಿ ನಿಪ್ಪತಗಿ–ನರಗುಂದ ।
ಖ್ಯಾತಿ ಜನದಾಗ ಕಡಿತನಕ ||೧೮೯೭||

* * *

ಹಾರೂರ ಹಾವಾಗಿ ಕೋರ್‍ಯಾರೋ ಒಳಸಂಚು ।
ಗಾರಗಃರಾತೋ ನರಗುಂದ ।
ಗಾರುಗಾರಾತೋ ನರಗುಂದ–ಬಾಬಾಸಾಬ ।
ಕಾರ ಮಳಿಯಾಗ ಮನಿಬಿಟ್ಟ ||೧೮೯೮||

* * *

ಕಾಡೆಲ್ಲ ಕತ್ತರಿಸಿ ನಾಡೆಲ್ಲ ತತ್ತರಿಸಿ ।
ಬಾಡುಗಳ್ಳರು ಹಾರೂರ ।
ಬಾಡುಗಳ್ಳರು ಹಾರೂರ–ತಾನಂಬಿ ।
ಕಾಡಿಗೀಡಾದ ಬಾಬಣ್ಣ ||೧೮೯೯||

* * *

ಮಡದಿ ಮಕ್ಕಳ ಬಿಟ್ಟು ಹಡದ ತಾಯಿಯ ಬಿಟ್ಟು ।
ಕಡೆಗಾಂವ ಬಿಟ್ಟ ನಾಡಾಸೆ ।
ಕಡೆಗಾಂವ ಬಿಟ್ಟ ನಾಡಾಸೆ–ಬಾಬಾಸಾಬ ।
ಕೇಡೀಗೆ ಬಿಟ್ಟ ನರಗುಂದ ||೧೯೦೦||

* * *

ದೇಶವ ಕಡೆಮಾಡಿ ಆಶೇವ ಈಡಾಗಿ ।
ಕಾಸು ಕವಡೀಗೆ ಕಡಿಯಾಗಿ ।
ಕಾಸು ಕವಡೀಗೆ ಕಡಿಯಾಗಿ–ಹಾರೂರು ।
ಹಾಸಿ ಬೆಂಕ್ಯಾಗ ಬೂದ್ಯಾಗಿ ||೧೯೦೧||

ನರಗುಂದ ಅರಸನಿಗೆ ವನವಾಸ ಬಂದೀತೋ ।
ತಿರುಗ್ಯಾನೊ ಕಾಡ ಪಾಲಾಗಿ ।
ತಿರುಗ್ಯಾನೊ ಕಾಡ ಪಾಲಾಗಿ–ಸೂಟರಗ ।
ತೊರಗಲ್ಲ ಸೀಮ್ಯಾಗ ಕೈಸಿಕ್ಕ್ಯೋ ॥೯೦೨॥

* * *

ಮ್ಯಾಳ್ಗಿ ಮ್ಯಾಗಿನ ಹುಲ್ಲ ಗಾಳೀಗ್ಹಾರಿದರೇನು ।
ಗಾಲಮೇಲಾತೊ ನರಗುಂದ ।
ಗಾಲಮೇಲಾತೊ ನರಗುಂದೊ–ಬಾಬಾಸಾಬ ।
ಗಾಳೀಗಿ ಬಾಯ ಬಿಡತಾನೋ ॥೯೦೩॥

* * *

ಹೂಲಿಸ್ವಾಮಿಯು ಕೊಟ್ಟ ಕೋಲ ಮಿಂಚಿನ ಶಾಪ ।
ಗಾಲ ಮೇಲಾತೊ ನರಗುಂದ ।
ಗಾಲ ಮೇಲಾತೊ ನರಗುಂದ–ಮರುವರುಷ ।
ಕೂಲಿ ಕುಂಬಳಿಗೆ ಎರವಾತೋ ॥೯೦೪॥



## ಹೋಳೀಯ ಹಾಡುಗಳು

ಆನಿಗಂಬಾರಿ ಛಂದ ಕುದರೀಗಿ ಥಡಿ ಛಂದ ।
ಸದರೀಗೆ ಛಂದ ಕಾಮಣ್ಣಾ ।
ಸದರೀಗೆ ಛಂದ ಕಾಮಣ್ಣಾ–ಬಗಲಾಗ ।
ರೂಪsಕ ಛಂದ ರತಿದೇವಿ ॥೯೦೫॥

* * *

ಹೋಳೀಯ ಹಬ್ಬsಕ ಮೇಳಾಗಿ ಹಾಡೂನ ।
ವ್ಯಾಳ್ಯಾಗಬ್ಯಾಡ ನನ ಗೆಣತಿ ।
ವ್ಯಾಳ್ಯಾಗಬ್ಯಾಡ ನನ ಗೆಣತಿ–ಬಂದಾರ ।
ಕೇಳಾಕ ಮಂದಿ ನಮ ಹಾಡ ॥೯೦೬॥

ಗಣಪತಿ ನಾನಿನ್ನ ಚಣ ಚಣಕ ನೆನದೇನೋ ।
ಅಣ ಅಣಕ ಆಡು ಜನಕೆಲ್ಲ ।
ಅಣ ಆಣಕ ಆಡುಜನಕೆಲ್ಲ–ಬಾಯಾಗ ।
ತುಣು ತುಣುಕು ಬೆಲ್ಲ ಒಗದೇನೋ ॥೧೯೦೭॥

* * *

ಅಕ್ಕ ಪಾರ್ವತಿ ಮಗನು ಚಿಕ್ಕವನು ಗಣಪತಿಯೋ ।
ನೆಪ್ಪಮಾಡಿ ನಿನ್ನ ನೆನದೇನೋ ।
ನೆಪ್ಪಮಾಡಿ ನಿನ್ನ ನೆನದೇನೋ–ಗಣನಾಥ ।
ತಪ್ಪಿದಲ್ಲಿನಗ ಬೆಸನಾಗೋ ॥೧೯೦೮॥

* * *

ಬುಧ್ಗೆ ಗಣಪತಿ ಮುಂದ ಭೂಮೀಗೆ ಫಲಮುಂದ ।
ಗುಡ್ಡsಕ ಮುಂದ ಹುಲಿಯಪ್ಪ ।
ಗುಡ್ಡsಕ ಮುಂದ ಹುಲಿಯಪ–ನ ಮುಂದಿರುವ ।
ಗುದ್ದಿಗಿ ಮುಂದ ನರಿಯಪ್ಪ ॥೧೯೦೯॥

* * *

ಬೆನಕ ನಾಲಿಗಿಮ್ಯಾಲೆ ನೆನಿಬಾರೊ ಹಾಡುದಕ ।
ಕಣಕಟ್ಟಿ ಮಂದಿ ಕೂಡ್ಯೆತೋ ।
ಕಣಕಟ್ಟಿ ಮಂದಿ ಕೂಡ್ಯೆತೋ–ಕೇಳುದಕ ।
ಮನಕ ಬೆಸನಾಗೊ ನುಡಿ ನುಡಿಗೆ ॥೧೯೧೦॥

ಪಾರೋತಿ ಮಾದೇವ ಏರಿ ಸಭದಾಗಿರಲು ।
ಪಾರೋತಿ ಹೇಳ ಚಲುವ್ಯಾರ ।
ಪಾರೋತಿ ಹೇಳ ಚಲುವ್ಯಾರ–ಕೇಳುದಕ ।
ತೀರ ಚಲುವಾನ ಕಾಮಣ್ಣ ॥೧೯೧೧॥

* * *

ಸಿಟ್ಟಿಗೇಳುತ ಶಿವನು ಬಿಟ್ಟಾನೋ ಉರಿಗಣ್ಣ ।
ಸುಟ್ಟು ಬೂದ್ಯಾದೋ ಕಾಮಣ್ಣ ।
ಸುಟ್ಟು ಬೂದ್ಯಾದೋ ಕಾಮಣ್ಣ-ರತಿದೇವಿ ।
ಹೊಟ್ಟಿ ಬಡಕೊಂಡು ಅಳತಾಳೋ ॥೧೯೧೨॥

ಅಳುವ ಬಾಲಿಯು ಕಂಡು ಕಳವಳವ್ರೋ ಸಭದಾಗ ।
ಅಳಬ್ಯಾಡ ರತಿಯೆ ಮನಿ ಸೊಸಿಯೆ ।
ಅಳಬ್ಯಾಡ ರತಿಯೆ ಮನಿ ಸೊಸಿಯೆ–ಕಾಮಣ್ಣ ।
ಮನದಾಗ ಮೂಡಿ ಬರತಾನ ||೧೯೧೩||

* * *

ಹೊರಳಾಡಿ ಅಳಬ್ಯಾಡ ಎರವಾದ ಕಿಚ್ಚೀಗಿ ।
ಕರೆದಾಗ ಬರುವ ರತಿದೇವಿ ।
ಕರೆದಾಗ ಬರುವ ರತಿ ದೇವಿ–ಮನದಾಗ ।
ಸ್ಥಿರವಂತ ಕಾಮನೆನದಾಗ ||೧೯೧೪||

* * *

ಮಳಲ ಬಿಂದಿಗಿ ಮಾಡಿ ಜುಳಕ ಹಾವಿನ ಸಿಂಬಿ ।
ಹೊಳೆಯು ತೆರೆ ಹೊಡೆದು ತುಂಬ್ಯಾರೋ ।
ಹೊಳೆಯು ತೆರೆ ಹೊಡೆದು ತುಂಬ್ಯಾರೋ–ಎಳದೇರು ।
ತುಳಿ ತುಳಿದು ಹಾದಿ ಬರುವಾಗ ||೧೯೧೫||

* * *

ಮಳಲ ಬಿಂದಿಗಿ ಕರಿಗಿ ಸುಳಿದು ಸಿಂಬಿಯು ಹಾವು ।
ಜಳತಾಕಿ ಕಾಮ ಸುಡುತಿರಲು ।
ಜಳತಾಕಿ ಕಾಮ ಸುಡುತಿರಲು–ಎಳದೇರು ।
ಅಳು ಅಳುಕಿ ಕಳಚಿ ಕೈಬಿಟ್ರು ||೧೯೧೬||

ನಿಂಬೀಯು ಹಣ್ಣಂಗ ತುಂಬಿತ್ತ ಮೈ ಬಣ್ಣ ।
ಹಂಬಲ ಬಿತ್ತ ನಿನಮ್ಯಾಲ ।
ಹಂಬಲ ಬಿತ್ತ ನಿನಮ್ಯಾಲೆ–ಎಲೆ ಹೆಣ್ಣ ।
ನಂಬಿ ಬಂದೀನಿ ಮನಿತನಕ ||೧೯೧೭|

ತುಂಬು ಬಿಚ್ಚಿದ ಹಂಬು ತುಂಬ ಹರೆಯದ ಹೆಣ್ಣು ।
ತುಂಬಿ ಮನದಾಗ ರಸವೊಡೆದು ।
ತುಂಬಿ ಮನದಾಗ ರಸವೊಡೆದು–ಉಣಿಸೂವ ।
ರಂಭಿ ಇಲ್ಲೇನೋ ಮನಿಯಾಗ ||೧೯೧೮||

ಕಾಡೀಗಿ ಗಣ್ಣೀನ ಕೂಡಿದ್ದು ಬ್ಬಿನ್ಹೆಣ್ಣ ।
ಬೇಡ್ಯೈತಿ ನಿನ್ನ ನನ ಜೀವ ।
ಬೇಡ್ಯೈತಿ ನಿನ್ನ ನನ ಜೀವ–ನಿನ್ನೋಡಿ ।
ಓಡಿ ಬಂದೀನಿ ಕೂಡುದಕ ॥೧೯೧೯॥

ಹೆಣ್ಣೀನ ಈ ಹರೆಯು ಹಣ್ಣೀನ ಗೊಂಚಲು ।
ಕಣ್ಣೀಲಿ ನೋಡಿ ಬನಬಾರ ।
ಕಣ್ಣೀಲಿ ನೋಡಿ ಬನಬಾರ–ಬಡುವಂಥ ।
ಕನ್ನೇರಿಲ್ಲೇನೋ ಮನಿಯಾಗ ॥೧೯೨೦॥

* * *

ಮಾರೀಯ ನೋಡಿದರ ಮಾವುರದ ಬಂಗಾರ ।
ಸೀರಿ ನೋಡಿದರ ಜರತಾರ ।
ಸೀರಿ ನೋಡಿದರ ಜರತಾರ–ಎಲೆ ಹೆಣ್ಣ ।
ಯಾರ ಮನವನ್ನ ಸೆಳಿಯಾವ ॥೧೯೨೧॥

* * *

ಜಾತ ಮಲ್ಲಿಗಿ ಹೂವ ಜಗ್ಗಿ ಕೊಯ್ಯುವರೇನ ।
ಜಗ್ಗಿದರ ಮೊಗ್ಗಿ ಉದಿರ್ಯಾವ ।
ಜಗ್ಗಿದರ ಮೊಗ್ಗಿ ಉದಿರ್ಯಾವ–ಪರ ಹೆಣ್ಣ ।
ದಿಟ್ಟೇಸಿ ನೋಡಿ ಫಲವೇನ ॥೧೯೨೨॥

* * *

ಅಡ್ಡಕ ಗುಡ್ಡವು ಚಂದ ದೊಡ್ಡರಳಿ ಮರಚಂದ ।
ಗಿಡ್ಡಿ ನಿನ ಕೈಗೆ ಬಳಿ ಬಂದ ।
ಗಿಡ್ಡಿ ನಿನ ಕೈಗೆ ಬಳಿ ಚಂದ–ನನ ಗೆಣತಿ ।
ವಡ್ಡ್ಯಾಣ ಚಂದ ನಡದಾಗ ॥೧೯೨೩॥

* * *

ಹೆರವರ್ಹೆಣ್ಣಿಗಾಗಿ ಹೊರಗ ಮಲಗುವ ಜಾಣ ।
ಗಿಡದ ಮ್ಯಾಗೆರಡು ಗಿಣಿ ಕೂತು ।
ಗಿಡದ ಮ್ಯಾಗೆರಡು ಗಿಣಿ ಕೂತು–ನುಡಿದಾವ ।
ಎರವನ್ನೊ ರಾಯ ನಿನಜೀವ ॥೧೯೨೪॥

ಹೆಬ್ಬೊಬ್ಬಿ ಮರಿಯಾಗ ಬಗ್ಗಿ ನೋಡವಳ್ಯಾರ ।
ಕಬ್ಬಕ್ಕಿಯಂಥ ಮಲೆಯವಳ ।
ಕಬ್ಬಕ್ಕಿಯಂಥ ಮಲೆಯವಳ-ಸಾ ಕಂಡು ।
ಗೊಬ್ಬರ್ಗಾಕುದಕ ಮನಸಿಲ್ಲ ॥೧೯೫॥

* * *

ಕಾಕು ಹಾಕಿದ ಕಂಡು ಬೇಕಾಗಿ ನಾ ಬಂದೆ ।
ಬಾರೋ ನನಗೆಣೆಯ ಬೈಲೀಗೆ ।
ಬಾರೋ ನನಗೆಣೆಯ ಬೈಲೀಗೆ-ನಾನಿಂದು ।
ಭಾಷೆ ತಪ್ಪವರ ಮಗಳಲ್ಲ ॥೧೯೬॥

* * *

ಅಡ್ಡs ಗುಡ್ಡವ ದಾಟಿ ಕದ್ದು ಒಣವಿಯ ದಾಟಿ ।
ಬಿದ್ದೋಡಿ ಬಂದೆ ನಿನಗಾಗಿ ।
ಬಿದ್ದೋಡಿ ಬಂದೆ ನಿನಗಾಗಿ-ಎಲೆ ಹುಡಗಿ ।
ಎದ್ದು ದನಿದೋರ ನನಗಾಗಿ ॥೧೯೭॥

ಚಳಿ ಜ್ವರಬಿಟ್ಟಾವು ಒಳ ಜ್ವರ ಬಿಡಲಿಲ್ಲ ।
ಮಂಟಪದ ಜಾಜಿ ಮನೆಯವನೆ ।
ಮಂಟಪದ ಜಾಜಿ ಮನೆಯವನೆ-ಸರದಾರ ।
ಮಂತ್ರೀಸಿ ಹೋಗೋ ತಲೆನೋವ ॥೧೯೮॥

* * *

ಕರಿಯ ಕಂಬಳಿ ಬ್ಯಾಡ ಜಿರ್ಕಿ ಕಾಲ್ಮರಿ ಬ್ಯಾಡ ।
ಬೆಳದಿಂಗಳದಾಗ ಬರಬ್ಯಾಡ ।
ಬೆಳದಿಂಗಳದಾಗ ಬರಬ್ಯಾಡ-ನನ ಗೆಣೆಯ ।
ನಿನ್‌ಹರ್ಲಿ ನಾ ಹೊರಲಾರೆ ॥೧೯೯॥

* * *

ಹರ್ಲಿ ಬಂದರು ಬರಲಿ ಹರಿದಿರಲಿ ಗೆಣೆತಾನ ।
ಮರಿಬ್ಯಾಡ ನನ್ನ ಎಲೆ ಗೆಣತಿ ।
ಮರಿಬ್ಯಾಡ ನನ್ನ ಎಲೆ ಗೆಣತಿ-ನಿನಗಾಗಿ ।
ಎರಗಿ ಬಂದೇನಿ ಮನಿತನಕ ॥೨೦೦॥

ಗೆಣತಿ ಗೆಣೆಯನ ಜಾತ್ರಿ ಕೆಲವಡಿ ರಂಗನದ।
ಎಲ್ಲವ್ನ ಜಾತ್ರಿ ಜೋಗ್ತೇರ್ದ।
ಎಲ್ಲವ್ನ ಜಾತ್ರಿ ಜೋಗ್ತೇರ್ದ-ಕೂಡಲ।
ಸಂಗಯ್ನ ಜಾತ್ರಿ ಶರಣರದ ॥೧೯೩೧॥

* * *

ಉರಿಸಿಗ್ಹೋಗತೀನಂತ ಹರಕಿ ಮಾದಲಿ ಮಾಡಿ।
ಉರಿಸಿನ ಗೆಣೆಯ ಬರಲಿಲ್ಲ।
ಉರಿಸಿನ ಗೆಣೆಯ ಬರಲಿಲ್ಲ-ಂತ ಆ ಬಾಲಿ।
ಪರಸ್ಯಾಗ ನಿಂತು ಅಳತಾಳ ॥೧೯೩೨॥

* * *

ಜಾತ್ರಿಗ್ಹೋಗತೀನಂತ ರಾತ್ರ್ಯಾಗ ಎದ್ದಾಳ।
ಧೋತ್ರದ ತುಂಬ ಕರಿಗಡಬ।
ಧೋತ್ರದ ತುಂಬ ಕರಿಗಡಬ-ಕಟಿಗೊಂಡ।
ಜಾತ್ರ್ಯಾಗ್ಹುಡಿಕ್ಯಾಳ ಗೆಣೆಯನ್ನ ॥೧೯೩೩॥

* * *

ಗೆಣಸಿನ್ಹೋಳಗಿ ಮಾಡಿ ಎಣಿಸಿ ಗಂಗಾಳಕ್ಹಾಕಿ।
ನೆನಸಿದ ಗೆಣೆಯ ಬರಲಿಲ್ಲ।
ನೆನಸಿದ ಗೆಣೆಯ ಬರಲಿಲ್ಲ-ಆ ಹುಡುಗಿ।
ಮನಸಿನ್ಯಾಗ ಮರಗಿ ಅಳತಾಳ ॥೧೯೩೪॥

* * *

ಈಟೀಟ ಮಲಿಯವಳ ಚೀಟಿ ಕುಪ್ಪಸದವಳ।
ಬ್ಯಾಟಿಗ್ಹೋಗ್ತೀನಿ ಕೈ ಬೀಡ।
ಬ್ಯಾಟಿಗ್ಹೋಗ್ತೀನಿ ಕೈ ಬೀಡ-ಮಲ್ಲಾಡ।
ಜೇನ ತರತೇನಿ ಸವಿನೋಡ ॥೧೯೩೫॥

ಈ ಪರುಷ ಬಂದೀನಿ ಮೀಶೀಯ ತಿದ್ದೀನಿ।
ವಾಸ್ಯಾಡ ಬ್ಯಾಡ ನನಗೂಡ।
ವಾಸ್ಯಾಡ ಬ್ಯಾಡ ನನಗೂಡ-ಎಲೆ ಹುಡಗಿ।
ಬೇಸ್ಗೆಂಗ ಬೆಳಗು ಗಳಿಯೂಣು ॥೧೯೩೬॥

ಆ ಟೇಟ್ಕ ಸೆಟಗೊಂಡು ಮಾರಿ ಕಟಗೊಳ್ಳ ಹೆಣ್ಣೆ ।
ಸಿಟ್ಟು ಸೆಡು ಬ್ಯಾಡ ನನಮ್ಯಾಲಿ ।
ಸಿಟ್ಟು ಸೆಡು ಬ್ಯಾಡ ನನಮ್ಯಾಲಿ- ನನ ಗೆಣತಿ ।
ನಕ್ಕಾಡಿ ಬೆಳಗು ಗಳಿಯೋಣ ||೯೩೭||

* * *

ಕಟ್ಟಿರಿವಿ ಕಂದ್ಹಾಕಿ ಎಂಟು ಮಗಿ ಹಾಲ್ಹಿಂಡಿ ।
ನೆಂಟರು ಉಂಡು ನೆಲವುಂಡು ।
ನೆಂಟರು ಉಂಡು ನೆಲವುಂಡು–ಈಗೀನ ।
ಕುಂಟ್ಲೀರು ಉಂಡು ಕುಡಿಕುಂಡೋ ||೯೩೮||

* * *

ಹಾರೂರ ಹುಡಗೀಗೆ ಹಾರಾಟಬೇಕಾಗಿ ।
ಜೀರ ಹುಡುಗನಿಗೆ ಕೂಡ್ಯಾಳೊ ।
ಜೀರ ಹುಡುಗನಿಗೆ ಕೂಡ್ಯಾಳೊ–ಮಲ್ಲೀಗಿ ।
ಸೂರಿ ಮುತ್ತಿಟ್ಟ ಬೆಳತನಕೋ ||೯೩೯||

* * *

ಸಂಜಿ ಅಕ್ಕಿಯು ಕುಟ್ಟಿ ಕೆರೆಯ ನೀರಿಗೆ ಹೋಗಿ ।
ವಜ್ರದುಂಗುರದ ಚೆಲುವನ ।
ವಜ್ರದುಂಗುರದ ಚೆಲುವನ–ಕೂಡ್ಯಾಡಿ ।
ಗುದ್ದ್ಯಾಡಿ ಬಳಿಯು ಒಡಕೊಂಡೆ ||೯೪೦||

* * *

ಹುಡುಗೀಯು ಕೂಡ್ಯಾಡಿ ಹುಡುಗ್ಯಾಕ ಬಡವಾದ ।
ಬಂಗಾರ ಒತ್ತಿ ಬಳಿ ಒತ್ತಿ ।
ಬಂಗಾರ ಒತ್ತಿ ಬಳಿ ಒತ್ತಿ–ಆದಾವ ।
ಸಣ್ಣ ಸೀರ್ಯೊತ್ತಿ ಸವೆದ್ಹೋದ ||೯೪೧||

ಗೆಣೆಯನ್ನ ಕಳಕೊಂಡ ಒಣಮಾರಿ ಮಾಡಿಕೊಂಡ ।
ಮಣಿ ಮಣಿಸಿ ಊರ ತಿರಗ್ಯಾಳೊ ।
ಮಣಿ ಮಣಿಸಿ ಊರ ತಿರಗ್ಯಾಳೊ–ಅಗಸ್ಯಾಗ ।
ಹಣಿ ಹಣಿ ಬಡಕೊಂಡು ಅಳತಾಳ ||೯೪೨||

ಕುಂದೀಸಿ ನುಡಿದರ ನಿನಗೇನ ಎಲೆ ಹೆಣ್ಣ ।
ನಾನಿದ್ದವ್ಯಾಲ ಭಯವೇನ ।
ನಾನಿದ್ದವ್ಯಾಲ ಭಯವೇನ-ನನ ಗೆಣತಿ ।
ನೂರು ಬಿದ್ದರು ಗೆಲುವೇನ ||೧೯೪೩||

* * *

ಹಾಡು ಹಾಡಂದರ ನಾನೇನು ಹಾಡಲಿ ।
ಹಾಡು ನನ ಗೆಣಿಯು ನನವ್ಯಾಲ ।
ಹಾಡು ನನ ಗೆಣಿಯು ನನವ್ಯಾಲ-ಮೂಡಣ ।
ಜಾಣ ಕೂರೀಗಿ ಹೊಡದ್ಹಂಗ ||೧೯೪೪||

* * *

ಗಂಡನ ಹಿತವೇನ ಕೆಂಡದ ತಂಪೇನ ।
ಕೊಂಡ ಮಜ್ಜಿಗಿ ರುತಿ ಏನ ।
ಕೊಂಡ ಮಜ್ಜಿಗಿ ರುತಿ ಏನ-ನನ ಗೆಣಿಯು ।
ಭಂಡಾಗಿ ಬದುಕಿ ಫಲವೇನ ||೧೯೪೫||

* * *

ಗಂಡು ಹೊಡಲಿ ಭೂಮಿ ಹೆಣ್ಣು ಹೊಡಲಿ ಒಲಿಯು ।
ಬಣ್ಣ ತೊಟ್ಟೀಲ ತೂಗಲಿ ।
ಬಣ್ಣ ತೊಟ್ಟೀಲ ತೂಗಲಿ-ಶಿವರಾಯ ।
ಗಿಣ್ಣ ನಿನಗೆಡೆಯೋ ಕೈಮುಗಿದು ||೧೯೪೬||

* * *

ಹೋಳಿಯಾಡದ ನಾಡು ನಾಳಿನದೆ ಕಾಡಾತು ।
ಗೋಳಾತು ಜನಕ ಮೂಲಾತು ।
ಗೋಳಾತು ಜನಕ ಮೂಲಾತು-ಮಳಿಹೋಗಿ ।
ಹಾಳಾತೊ ಪಿಡುಗೆದ್ದು ದಿನ ದಿನಕ ||೧೯೪೭||



## ಕೊನೆ

ಬೀಸೂವ ಕಲ್ಲಿಗೆ ಬಿಡಿ ಮುತ್ತು ರ್‍ಯಾವಳ ।
ಬೇಸ್ಯಾಗಿ ಹೊಯ್ಯೊ ಹೊಳೆಗಾರ ।
ಬೇಸ್ಯಾಗಿ ಹೊಯ್ಯೊ ಹೊಳೆಗಾರ-ನನ ಮನಿಗೆ ।
ಬೀಸ ಬರತಾರ ಗೆಳತೇರು ||೧೯೪೮||

* * *

ಹಾಡ್ಯಾಡಿ ಬೀಸೀನಿ ಹವಳ ಬಣ್ಣದ ಗೋದಿ ।
ಬೀಸಾಕ ಹಿಡಿದೀನಿ ಬಿಳಿ ಜೋಳ ।
ಬೀಸಾಕ ಹಿಡಿದೀನಿ ಬಿಳಿಜೋಳ-ಅಣ್ಣಯ್ಯ ।
ಬ್ಯಾಜಽಕ ಹಿಡಿದೀನಿ ನಿನ ಮಗಳ ||೧೯೪೯||

* * *

ಏಸ ನೀ ಬೀಸಿದರ ಸಾಕ ಬೇಕೆನ್ನಳ ।
ಸಾಕ್ಷೇದ ತಾಯಿ ಸಿರಿಗೌರಿ
ಸಾಕ್ಷೇದ ತಾಯಿ ಸಿರಿಗೌರಿ-ಬೀಸಿದ್ಹಿಟ್ಟು ।
ಸಾಕು ಸಾಕಾಗಿ ಬಳಗಕ್ಕ ||೧೯೫೦||

* * *

ಯಾರೂ ಇಲ್ಲವವರ ಹಾಸ್ಯ ಮಾಡುವರೇನ ।
ಈಶ್ವರನ ದಂಡು ನನ ಬಳಗ ।
ಈಶ್ವರನ ದಂಡು ನನ ಬಳಗ-ಹಾಡಟಿಗೆ ।
ಸೂರ್ಯ ನಿಮ ಬೆಳಕ ಬೆಳದಾವ ||೧೯೫೧||

* * *

ನಮ್ಮ ಬೀಸಿದ ಹಿಟ್ಟು ಸೂತಽಕ ಆದಾವ ।
ಪಾತಾಳದನ್ನ ಸಿರಿಗಂಗಿ ।
ಪಾತಾಳದನ್ನ ಸಿರಿಗಂಗಿ-ನಾ ಹಾಡಿದರ ।
ಸೂತಕವಿಲ್ಲ ಹೊಲೆಯಿಲ್ಲ ||೧೯೫೨||

ಆದಽ ಮುಕ್ಕಿಗಿ ನನ್ನ ಸ್ವಾದರನ ಹಾಡುವೆನು |
ಸೋದರನ ತಂಗಿ ಹಡೆದವ್ವ |
ಸೋದರನ ತಂಗಿ ಹಡೆದವ್ವ--ನಿನಹಾಡಿ |
ಜಾಡೀಸಿ ರಥವ ನಿಲಸೇನ ||೧೯೫೩||

* * *

ಆಗೂವ ಮುಕ್ಕೀಗೆ ನಾಯಾರ್ನ ನೆನಿಯಽಲಿ |
ರಾಜ್ಯಽವ ಸಲಹೂವ ಬಸವಣ್ಣ |
ರಾಜ್ಯಽವ ಸಲಹೂವ ಬಸವಣ್ಣ-ನ ಹೇಣ್ತಿ |
ನೀಲವನ ಹಾಡಿ ಹರಸೇನ ||೧೯೫೪||

* * *

ಆದಾವ ನಮು ಜೋಳ ಉಳಿದಾವ ನಮುಹಾಡು |
ಈಗ ಸಾಕವ್ವ ನಿನಕಲ್ಲು |
ಈಗ ಸಾಕವ್ವ ನಿನಕಲ್ಲು-ಕೈಯಾನ |
ಹಾಕಿ ದುಂಗುರ ಸವೆದಾವು ||೧೯೫೫||

* * *

ಆದಾವ ನಮು ಜೋಳ ಉಳಿದಾವ ನಮುಹಾಡು |
ಸಾಕ ಗೌರವ್ವ ಕೈಬೀಡ |
ಸಾಕ ಗೌರವ್ವ ಕೈಬಿಡ-ನನ ಮನಿಯ |
ಗ್ಯಾನ ದತ್ತೆವ್ವ ಬೈದಾಳ ||೧೯೫೬||

* * *

ಕಲ್ಲ ಕೊಟ್ಟವ್ವಗ ಎಲ್ಲ ಭಾಗ್ಗೇ ವಿರಲಿ |
ಮಲ್ಲೀಗಿ ಮುಡಿವ ಮಗನಿರಲಿ |
ಮಲ್ಲೀಗಿ ಮುಡಿವ ಮಗನಿರಲಿ-ಹೇಮ್ರಡ್ಡಿ |
ಮಲ್ಲಮ್ಮನಂಥ ಸೊಸಿಯಿರಲಿ ||೧೯೫೭||

* * *

ಕಲ್ಲ ಕೊಟ್ಟವ್ವಽಗ ಎಲ್ಲ ಭಾಗ್ಯವು ಇರಲಿ |
ಪಲ್ಲಕ್ಕಿ ಇರಲಿ ಪದವಿರಲಿ |
ಪಲ್ಲಕ್ಕಿ ಇರಲಿ ಪದವಿರಲಿ-ಹಡೆದವ್ವ |
ನೆಲ್ಲ ಬಾನಿರುವ ಮನೆಯಿರಲಿ ||೧೯೫೮||

ಆದ ಮುಕ್ಕಿಗೆ ಶರಣು ಗೋದಿಕಲ್ಲಿಗೆ ಶರಣು ।
ಓನಾಮು ಶಿವಗ ಶಿವ ಶರಣು ।
ಓನಾಮು ಶಿವಗ ಶಿವ ಶರಣು–ಮಲ್ಲಯ್ಯ ।
ನಿಮ್ಮ ಪಾದಕ ನಮೋ ಶರಣು ॥೧೯೫೯॥

## ಅನುಬಂಧ

### ನೀತಿ ‡

ಅಕ್ಕ ತಂಗಿಯರ ಬಾಳುವೆಯು ಕಾದಾಟ ।
ಮುಕ್ಕಣ್ಣ ಪಾರಮ್ಮನವರ ಕೂಟವಿದ್ದಂಗೆ ।
ಚಕ್ಕುಲಿಯನ್ನು ನೀರಲ್ಲಿ ಎಸೆದಾಗ ।
ಉಕ್ಕಿ ಬರುವುದೆಲೆ ತಾಗಿರುವ ಹಳೆ ದುಃಖಾ ॥೧೯೬೦॥

* * *

ಅತ್ತೆ ಮಾವರ ಮುತ್ತಾಗಿ ಬೆಳೆ ಕೂಸೆ ।
ಹೊತ್ತು ಕಳೆಬೇಡ ಎಂದೆಂದು ಸುಮ್ಮನೆ ।
ಹತ್ತು ಮಕ್ಕಳ ಮುದ್ದಿನಾಟದಾಗ ।
ಮುತ್ತಿನ ಹಂಗೆ ಕಾಣೆ ನೀ ಜಾಣೆ ॥೧೯೬೧॥

* * *

ಯಾರು ಇದ್ದರೇನೆ ಬೀದೀಲಿ ಇರಬೇಡ ।
ವಾರೆ ಗಣ್ಣಿಂದ ನೋಡಬೇಡ ।
ವಾರೆ ಗಣ್ಣಿಂದ ನೋಡ್ದ ಹಂಗೆ ನೀನು ।
ವಾರೆಗಿತ್ತಿಯರೊಂದ್ಗೆ ತಂಟೆ ಮಾಡ್ಬೇಡ ॥೧೯೬೨॥

---

‡ ಈ ಮುಂದೆ ಬರುವ ಪದ್ಯಗಳು ಮುದ್ರಣ ಕಾರ್ಯವು ಪ್ರಾರಂಭವಾದ ನಂತರ ದೊರೆತುದಕ್ಕಾಗಿ ಕೊನೆಗೆ ಸೇರಿಸಿಕೊಳ್ಳಬೇಕಾಯಿತು, ಈ ಪುಟದಲ್ಲಿ ಬರುವ ಪದ್ಯಗಳು ಬಳ್ಳಾರಿ ಜಿಲ್ಲೆಯವುಗಳಾಗಿವೆ. —ಸಂಗ್ರಾಹಕ

ಗಂಡನ್ನs ಹಿಡಿಬೇಡ ಮೊಂಡ್ತನ ಮಾಡ್ಬೇಡ ।
ಕಂಡವರ ಕಣ್ಗೆ ಬೀಳ್ ಬೇಡ ।
ಗಂಡsನಿಲ್ಲದ ವ್ಯಾಳ್ಯದಲ್ಲಿ ಹೊರಗೆ ಬರಬೇಡ ।
ಮೊಂಡs ಹೆಂಗಸರೊಡನೆ ಕೂಡ್ಬೇಡ ||೧೯೬೩||

* * *

ಕಂದsನನು ಎತ್ಕೊಳ್ಳೆ ಚಂದsದಲಿ ನೀನು ।
ಮಂದ್ಯಾಗ ಅವನ ಹೊಡೀಬ್ಯಾಡ ।
ಮಂದ್ಯಾಗ ಅವನ ಹೊಡೀಬ್ಯಾಡ-ತರಳೆ ।
ಬಂದs ಬಂದವರಿಗೆಲ್ಲ ಕೊಡಬ್ಯಾಡ ||೧೯೬೪||

* * *

ಚಂದsದಲಿ ನೀನ್ಹಂಗ ಬಾಳೀದಿಯೆಂದsರೆ ।
ಚಂದಿರನ ಬೆಳಕುಃಕೆಳಗ ಬಿದ್ಹಂಗೆ ।
ಚಂದಿರನ ಬೆಳಕು ಕೆಳಗ ಬಿದ್ಹಂಗೆ-ನೀ ।
ಎಂದು ನಮ್ಮ ಕೀರುತಿಯು ಬೆಳಗಿದಂದು ||೧೯೬೫||

* * *

ಊರ ಹೊರಗೆ ನೀನು ಹೊರಟsರೆ ನೀರೀಗೆ ।
ವಾರsಗಿತ್ತಿಯರು ಹಿಂದೆ ಇರಬೇಕ ।
ವಾರsಗಿತ್ತಿಯರು ಹಿಂದೆ ಇರಬೇಕ--ನಿನ್ನ ।
ಕರಿಮಣಿಯು ಮಾಂಗಲ್ಯ ಕಾಯೋಕೆ ||೧೯೬೬||

* * *

ಮುಂಜಾಲ ನೀ ಇಂದು ಹೊಂದಿ ನಡೆಬೇಕ ।
ಸಂಜೀಯು ತನಕ ದುಡೀಬೇಕ ।
ಸಂಜೀಯು ತನಕ ದುಡೀಬೇಕ-ಮತ್ತೆ ನೀ ।
ಬಂಜೀಯರೊಡನೆ ನಲೀಬೇಡಾ ||೧೯೬೭||

* * *

ಹೊತ್ತು ಮುಳುಗಿದ ವ್ಯಾಲೆ ಎತ್ತೆತ್ತು ಹೋಗ್ಬೇಡ ।
ಕತ್ತೀನ ಹೊರಗಿರಲಿ ಮಾಂಗಲ್ಯ ।
ಕತ್ತೀನ ಹೊರಗಿರಲಿ ಮಾಂಗಲ್ಯ--ಅದು ನಿನ್ನ ।
ಮುತ್ತೀನ ಪದಕೆಂದು ತಿಳಿ ಕಂದಾ ||೧೯೬೮||

ಹೀಂಗ ನೀ ಗಂಡsನ ಮನೆಯೊಳಗಿದ್ರ ।
ಚಂದsದಲಿ ನಿನ್ನ ಕರೆ ಬರುವೆವು ।
ಚಂದsದಲಿ ನಿನ್ನ ಕರೆಕೊಂಡು-ಬಂದಾಗ ।
ವಂಕಿ-ನಾಗ್ಮುರುಗಿ ಗುಂಡು ಸರ ನಿನ್ನ ಮೈಮ್ಯಾಗ ॥೧೯೬೯॥

## ಹೆಣ್ಣಿನ ಜನ್ಮ ‡

ತಾಯಿಲ್ಲದ ತವರೀಗೆ ಹೋಗಿ ಬರುವದು ಕಷ್ಟ ।
ನೀರಿಲ್ಲದ ಕೆರೆಗೆ ಪಶುಹೋಗಿ ।
ನೀರಿಲ್ಲದ ಕೆರೆಗೆ ಪಶುಹೋಗಿ-ಬಪ್ಪಾಂಗೆ ।
ನಾಹೋಗಿ ಬಪ್ಪೆ ತವರಿಂಗೆ ॥೧೯೭೦॥

* * *

ಹೆಣ್ಣs ಹೆತ್ತಬ್ಬೇಗೆ ಒಮ್ಮೇಯೂ ಸುಖವಿಲ್ಲೆ ।
ಬಣ್ಣsವನಳುಸಿ ಬಳಿ ಕಳುಗಿ ।
ಬಣ್ಣsವನಳುಸಿ ಬಳಿ ಕಳುಗಿ--ಹೋಪಾಗ ।
ಕಣ್ಣು ನೀರೆರೆದು ಕೊಡಲಾಗ ॥೧೯೭೧॥

*

ಹೆಣ್ಣು ಹುಟ್ಟಿತ್ತೆಂದು ಅಣ್ಣ ಚಿಂತಿಸಬೇಡ ।
ಹೆಣ್ಣೆಂಬ ಪರರ ಒಡವೇಯು ।
ಹೆಣ್ಣೆಂಬ ಪರರ ಒಡವೇಯು-ಕೊಟ್ಟsರೆ ।
ಹೋಪಲಕ್ಕು ನಮಗೆ ಬರಲಕ್ಕು ॥೧೯೭೨॥

* * *

ಒಡಹುಟ್ಟು ಒಂದು ಜನ್ಮ ಕಡೇಲಿ ಜನ್ಮಗಳಿಲ್ಲೆ ।
ಕಡುಕೋಪ ಬೇಡೋ ಹಿರಿಯಣ್ಣ ।
ಕಡುಕೋಪ ಬೇಡೋ ಹಿರಿಯಣ್ಣ-ಕಡೆಗೆನ್ನ ।
ಕರಕೊಂಡು ಹೋಗೋ ತವರಿಂಗೆ ॥೧೯೭೩॥

‡ ಈ ಮುಂದಿನವುಗಳು, ದಕ್ಷಿಣ ಕನ್ನಡ (ಮಂಗಳೂರು) ಜಿಲ್ಲೆಯ ಪದ್ಯಗಳು.

ಮಲ್ಲೀಗಿ ಮುಡಿ ತಂಗಿ ಆಭರಣ ತೊಡು ತಂಗಿ ।
ದುಂಡೂ ಮಲ್ಲೀಗಿ ಮುಡಿ ತಲೆಗೆ ।
ದುಂಡೂ ಮಲ್ಲಿಗೆ ಮುಡಿ ತಲೆಗೆ–ಸೌಭದ್ರೆ ।
ನಾಹೋಪೊ ನಮ್ಮ ತವರಿಂಗೆ ||೧೯೭೪||

* * *

ಬೇನೆ ತಾಳಿದಳಲ್ಲ ಮದ್ದು ಕುಡಿದವಳಲ್ಲ ।
ಬಿಸಿ ನೀರ ಮಿಂದ ಇವಳಲ್ಲ ।
ಬಿಸಿ ನೀರ ಮಿಂದ ಇವಳಲ್ಲ–ಆವರೂ ।
ಮಗಳೆಂದು ಧಾರೆ ಎರೆವರೂ ||೧೯೭೫||

* * *

ನಮ್ಮೂರ ಬೈಲಲ್ಲಿ ಹನ್ನೆರಡು ಕೊಡೆ ಕಂಡೆ ।
ನಮ್ಮಣ್ಣನಪ್ಪು ಬರುವುದು ।
ನಮ್ಮಣ್ಣನಪ್ಪು ಬರುವುದು–ಅತ್ತೀಗೆ
ಸಣ್ಣಕ್ಕಿ ಎಸರ ಇಡುಬೇಗ ||೧೯೭೬||

* * *

ಉಂಬೂ ತುತ್ತನು ಕೊಟ್ಟೆ ಉಂಬಲೆಂಗೆಲೆಕೊಟ್ಟೆ ।
ಒಂಭತ್ತು ವರ್ಷ ಸಲಹೀದೆ ।
ಒಂಭತ್ತು ವರ್ಷ ಸಲಹೀದೆ–ಸಾಕಿದ ಮಗಳ ।
ಇಂದ ನಿಮ್ಮ ಕೈಯ್ಯ ಕೊಡುತೇವೆ ||೧೯೭೭||

* * *

ಬಂಧುಗಳಿದ್ದರೆ ಬಂದೆನ್ನ ಕಾಣರೋ ।
ಬಂಧುಗಳಿಲ್ಲೆ ಪರದೇಶ ।
ಬಂಧುಗಳಿಲ್ಲೆ ಪರದೇಶ–ದಲಾನಿದ್ದೆ ।
ಬಂದು ಕಂಡವರು ಒಡಹುಟ್ಟು ||೧೯೭೮||

* * *

ತಾಯಿದ್ದರೆ ತವರ್ಮನೆ ನೀರಿದ್ದರೆ ಕೆರೆಭಾವಿ ।
ತಾಯಿಯಿಲ್ಲದ ತವರಿಂಗೆ ।
ತಾಯಿಯಿಲ್ಲದ ತವರಿಂಗೆ–ಹೋದರೆ ।
ಕಾಲಡಿ ಕಸವಿನಂತಿಕ್ಕೂ ||೧೯೭೯||

ಕೊಟ್ಟsರೇನಾಯಿತು ಅಟ್ಟಡಿಗೆ ಉಂಡಾಳು ।
ಪಟ್ಟೇ ಮಂಚದಲಿ ಕುಳಿತಾಳು ।
ಪಟ್ಟೇ ಮಂಚದಲಿ ಕುಳಿತಾಳು–ನಿಮ್ಮ ಮಗಳು ।
ಇದ್ದsರೆ ಸಾಕು ಮನೆಯಲ್ಲಿ ॥೯೬೦॥

* * *

ಸುಗ್ಗಿ ಕೈಕೊಯ್ಯsಲಿ ಸುರಗಿ ಹೂವಾಗsಲಿ ।
ರಸದಾಳಿ ಕಬ್ಬು ಕಡಿಯsಲಿ ।
ರಸದಾಳಿ ಕಬ್ಬು ಕಡಿಯsಲಿ–ಅಣ್ಣನೇ ।
ಅಂದಿಂಗಾ ಬಪ್ಪೆ ತವರಿಂಗೆ ॥೯೬೧॥

* * *

ಅಳಿಯ ಬಂದಾ ಮನೆ ಅರಸು ಬಂದಂತಿಕ್ಕು ।
ಅರುಶೀನ ಬೇಲಿ ಸವೆದಿಕ್ಕು ।
ಅರುಶೀನ ಬೇಲಿ ಸವೆದಿಕ್ಕು–ಅಣ್ಣನೇ ।
ಅರಸಲ್ಲ ನಮ್ಮ ಅಳಿಯಂದ್ರು ॥೯೬೨॥

* * *

ಆಷಾಢ ಮಾಸದಲ್ಲಿ ಕೂಸಿಂಗೆ ಚಂದ್ರಾಷ್ಟು ।
ಬೇಸಗೇಲಿ ಬರಲಿ ಕಳುಸೂವ್ರೋ ।
ಬೇಸಗೇಲಿ ಬರಲಿ ಕಳಿಸೂವ್ರೋ–ಅಳಿಯsನೆ ।
ಮಾತಾಡಿ ಹೋಗೋ ಮನೆಗೀಗ ॥೯೬೩॥

* * *

ಉದ್ದs ಸಂಪಿಗೆ ಮೊಗ್ಗು ದುಂಡು ಮಲ್ಲಿಗೆ ಹೂಗು ।
ಬುದ್ಧಿವಂತನಣ್ಣ ಕೊಯಿದ್ದsಕ್ಕು ।
ಬುದ್ಧಿವಂತನಣ್ಣ ಕೊಯಿದ್ದsಕ್ಕು--ಆ ಹೂಗು ।
ಮುದ್ದು ತಂಗೆಂದ್ರ ತುರುಬಿಂಗೆ ॥೯೬೪॥

* * *

ಅತ್ತಿಗೆ ತಾಯಲ್ಲ ಹಿತ್ತಾಳಿ ಚಿನ್ನಲ್ಲ ।
ಮತ್ತಿ ಬಂದಣಿಕ ಮರನಲ್ಲ ।
ಮತ್ತಿ ಬಂದಣಿಕ ಮರನಲ್ಲ–ಹೆಣ್ಮಕ್ಕಳಿಗೆ ।
ಹುಟ್ಟೇದ ಮನೆಯು ನಿಜವಲ್ಲ ॥೯೬೫॥

## ಗರ್ಭಿಣಿ

ಉಟ್ಟೈಸ ಬಟ್ಟೆಯು ಮೇಲಿ ಹೊಟ್ಟಿ ತೋರುತಲೀದಿ ।
ಹುಟ್ಟು ಗರ್ಭಿಣಿಯು ನಿಜವಾಗಿ ।
ಹುಟ್ಟು ಗರ್ಭಿಣಿಯು ನಿಜವಾಗಿ-ನೀನೆಂಬ ।
ಗುಟ್ಟ ನಾ ತಿಳಿದೆ ಮನದೊಳೂ ॥೧೮೬॥

* * *

ಗುರು ಗಣಪತಿಯುಽರ ದೇವಿ ಸರಸ್ವತಿಯುಽರ ।
ವರ ಕ್ಽವಿ ಜನರ ಸ್ಮರಿಸುತ್ತ ।
ವರ ಕಽವಿ ಜನರ ಸ್ಮರಿಸುತ್ತ-ಸಂತಸದಿ ।
ಸುರಪಾದ್ಯ ಮಾರಾರಿಗೆರಗುತ್ತ ॥ ೧೮೭॥

* * *

ಈ ಚೆಲ್ವ ಬಸುರೀನ ಸೂಚೀಸಲ್ಯಾಕಿಷ್ಟು ।
ನಾಚೀಕೆ ಬರಿದೆ ಮನದೋಳು ।
ನಾಚೀಕೆ ಬರಿದೆ ಮನದೋಳು-ನಿನಗೇನು-।
-ತ್ತಾ ಚದುರೆಯುರು ನುಡಿದಾರು ॥೧೮೮॥

*

ಮಾನೀನಿ ಮಣಿ ನಿನ್ನ ಆನಽನ ಬಾಡೀಹು-।
ದೇನೇ ಮೋಹನೆ ಗುಣರನ್ನೆ ।
ಮೋಹಽನೆ ಗುಣರನ್ನೆ-ಎಂದೆನುತ ।
ನಾಚೂತ ನುಡಿದಾಳರಸಂಗೆ ॥೧೮೯॥

* * *

ಭೂರೀ ವೈಭವದೊಳು ಆರೋಗಣೆಯಗೈಸಿ ।
ಚಾರು ಮನ್ನಣೆಯೊಳವರೆಲ್ಲ ।
ಚಾರು ಮನ್ನಣೆಯೊಳವರೆಲ್ಲ-ಮನದಿಷ್ಟ ।
ಧಾರುಣಿ ಪಾಲ ಕೊಡಸೀದ ॥೧೯೦॥

ಕೀರ ಭಾಷಿಣಿ ಮುದ್ದು ನಾರೀಯು ಬಸುರೀಗೆ ।
ಆರೂ ಮಾಸಗಳು ಕಳೆದಾವು ।
ಆರೂ ಮಾಸಗಳು ಕಳೆದಾವು-ಎಂದೆನುತ ।
ಧಾರೂಣಿ ಪತಿಗೆ ತಿಳಿಸ್ಯಾಳು ॥೧೯೯೧॥

* * *

ಸರಸೀ ಜಾಂಬಕೀ ನಿನ್ನ ಗುರು ಕುಜದಿ ನೋಡೆ ।
ಕರಿದಾಗಿ ತೋರ್ವ ಪರಿಯೇನು ।
ಕರಿದಾಗಿ ತೋರ್ವ ಪರಿಯೇನು-ಎಂದೆನ್ನೋಳು ।
ಅರುಹ ಬೇಕವ್ವ ಮುದದಿಂದ ॥೧೯೯೨॥

* * *

ಒಂದು ದಿವಸ ಭೂಪಾ ನಂದದಿ ಕುಳಿತಿರೆ ।
ಕಂದೀದಾ ನದಿ ಬಡವಾಗಿ ।
ಕಂದೀದಾ ನದಿ ಬಡವಾಗಿ-ಸತಿ ತನ್ನ ।
ಮುಂದೆ ನಿಂತಿರಲು ನುಡಿಸೀದ ॥೧೯೯೩॥

* * *

ಎಡೆಗೊಂಡೆಯೆಡೆ ಚೌರಿ ಕಡುಚಲ್ವರಾಕುಟಿ ।
ಪಡನಡ್ಡ ಕೇತಕಿ ಸದಾ ನಿತ್ಯ ।
ಪಡನಡ್ಡ ಕೇತಕಿ ಸದಾ ನಿತ್ಯ-ಚಲುವೀನೊ-।
ಳಿಡಬೇಕೆಂದೆನುತ್ತ ನೆನವೆಯೊ ॥೧೯೯೪॥

* * *

ಹಸಿರು ಬಣ್ಣದಿ ಕಾಂತಿ-ಯೆಸದಿರ್ದ ರವಕೇಯ ।
ಪೊಸತೊಂದು ತೊಟ್ಟೆಯುದರಿಂದ ।
ಪೊಸತೊಂದು ತೊಟ್ಟೆಯುದರಿಂದ-ಮೊಲೆತುದಿ ।
ಕೆಸರಾದುದೇನೋ ತಿಳಿಯೇನಾ ॥೧೯೯೫॥

* * *

ಧರೆಯೊಳತ್ಯಧಿಕ-ವಾಗಿರ್ದ ದೇಶದ ರಾಯ ।
ನರಸಿ ಸಂತಸದಿ ಧರಿಸಿರ್ದ ।
ನರಸಿ ಸಂತಸದಿ ಧರಿಸಿರ್ದ-ಗರ್ಭದಾ ।
ಪರಿಯ ನುಸುರೂವೆ ಮುದದಿಂದ ॥೧೯೯೬॥

ಮುತ್ತೀನ ಹಾರ, ಏಳ್ ಸುತ್ತೀನ ಕಟ್ಟಾಣಿ ।
ಒತ್ತೀನೊಳ್ ಗುಂಡು ಮಣಿಸರ ।
ಒತ್ತೀನೊಳ್ ಗುಂಡು ಮಣಿಸರ-ದೆಡೆಗೆಂದೆ ।
ಪುತ್ಥಳೀ ಸರವ ನೆನವೇಯೋ ||೧೯೯೭||

* * *

ಕಡಗ ಕಂಕಣದೆಡೆಗಿಡುವ ದೋರೆಯು ಜೋಡು ।
ನಡುವೀನೊಳಿಸೆವ ಚಳಕೀಯು ।
ನಡುವೀನೊಳಿಸೆವ ಚಳಕೀಯು-ಹಿಂಬಳಿ ಸಹ ।
ಮಡದಿ ನೀ ನಿಡಲು ನೆನವೇಯೋ ||೧೯೯೮||

* * *

ಪಟ್ಟೀಯು ಸೀರೇಯನುಟ್ಟು ಸಂತಸದೋಳು ।
ತೊಟ್ಟು ಪೊಸ ರವಕೇಯು ಅನುದಿನ ।
ತೊಟ್ಟು ಪೊಸ ರವಕೇಯು ಅನುದಿನ-ಇಡಲೆಂದು ।
ಪಟ್ಟೀ ಡಾಬುಗಳ ನೆನವೇಯೋ ||೧೯೯೯||

* * *

ಅಚ್ಚs ಮಲ್ಲಿಗೆ ಚಲ್ವ ಸಚ್ಚsದ ಸಂಪೀಗೆ ।
ಹೆಚ್ಚೀನ ಜಾಜಿ ಕುಸುಮ ಕೊಯ್ದು ।
ಹೆಚ್ಚೀನ ಜಾಜಿ ಕುಸುಮ ಕೊಯ್ದು-ಮುಡಿಯಾಲೆಂ-।
-ದಿಚ್ಛೆಯೇನವ್ವ ಮನದೋಳು ||೨೦೦೦||

* * *

ಎನೆ ಕೇಳಿ ಭೂವಿಪ ಮನದಿ ಸಂತೋಷಿಸಿ ।
ವಿನಯದಿ ಸೀಮಂತ ಹವನವಾ ।
ವಿನಯದಿ ಸೀಮಂತ ಹವನವಾ-ಮಾಳ್ಪರೆ ಶುಭ ।
ದಿನವ ನಿಶ್ಚಯಿಸಿ ಸೊಬಗಿಂದ ||೨೦೦೧||

* * *

ಬರಿಸಿ ಚಿತ್ರಕರಿಂದ ಪುರವ ಶೃಂಗರಿಸೀದ ।
ಪರಿ ಪರಿ ವಿಧದಿ ಮುದದಿಂದ ।
ಪರಿ ಪರಿ ವಿಧದಿ ಮುದದಿಂದ-ಓಲೇಯು ।
ಧರಣಿ ಪಾಲರಿಗೆ ಕಳುಹುತ ||೨೦೦೨||

ಸೃಷ್ಟಿಯೊಳಗೆ ನೀವು ಪಟ್ಟs ವಾಳುತ್ತಿರಿ ।
ಅಷ್ಟs ಸೌಭಾಗ್ಯದೋಳಾಗೆಂದು ।
ಅಷ್ಟs ಸೌಭಾಗ್ಯದೋಳಾಗೆಂದು–ಕೊರತೆ ಸ್ವಾಮಿ ।
ಪುಟ್ಟದರೆ ಸುತರು ನಮಗೀಗ ॥೨೦೦೩॥

* * *

ಜತೆ ನಂಟರಿಷ್ಟರ ಹಿತ ಬಂಧು ಬಾಂಧವರ ।
ಕ್ಷಿತಿ ಪತಿ ದಯದಿ ಬರಿಸುತ್ತ ।
ಕ್ಷಿತಿ ಪತಿ ದಯದಿ ಬರಿಸುತ್ತ–ಸೀಮಂತವ ।
ನತಿ ಸೊಬಗಿನಿಂದ ವಿರಚಿಸೆ ॥೨೦೦೪॥

* * *

ಮಾನಿನಿಯರು ಕೂಡಿ ಸೀಮಂತಿ-ನೀಯಾಳ ।
ಸನ್ಮಾನಿಸಿ ಕೇಳಿದಳು ಮನsದಿಷ್ಟ ।
ಸನ್ಮಾನಿಸಿ ಕೇಳಿದಳು ಮನsದಿಷ್ಟ–ಬಯಕೇಯು ।
ಪ್ರೇಮದೊಳರುಹವ್ವ ನಮಗೀಗ ॥೨೦೦೫॥

* * *

ಏನೇನು ತಿನಲೆಂದು ಮಾನಸದಿ ಬಯಸಿರ್ಪೆ ।
ನೀನ್ಯಾಕೆ ಮೌನ ತಳದಿರ್ಪೆ ।
ನೀನ್ಯಾಕೆ ಮೌನ ತಳದಿರ್ಪೆ–ಎನುತsಲಿ ।
ಸಾನುರಾಗsದಲಿ ನುಡಿದsರು ॥೨೦೦೬॥

* * *

ಗೋದಿ ಕಡಲೆ ಮಧುವಾದ ಸಕ್ಕರೆಯೊಳಗಾದ ।
ಭಕ್ಷಗಳಾ ತಿನಲೆಂದು ।
ಭಕ್ಷಗಳಾ ತಿನಲೆಂದು–ಅಭಿಲಾಷೆಯೊಳು ।
ಮೋದsದ ಕಡಬು ನೆನವೇಯೋ ॥೨೦೦೭॥

ಕದsಳಿ ಕರ್ಜೂರವ ದ್ರಾಕ್ಷೆ ಮೊದಲಾದ ।
ವಿಧ ವಿಧ ರುಚಿಯ ಫಲಪಕ್ವ ।
ವಿಧ ವಿಧ ರುಚಿಯ–ಫಲಪಕ್ವ–ತಿನಲೆಂದು ।
ಪದು ಮದಳಾಕ್ಷಿ ಮನಸಾಯ್ತೋ ॥೨೦೦೮॥

ರಾಕೇಂದು ವದನೆ ಸುಕೋಕಿಲ ಗಾನೆಗೆ |
ಬೇಕಾದ ಮನದ ಬಯಕೇಯು |
ಬೇಕಾದ ಮನದ ಬಯಕೇಯು-ಕೊಡಿಸುತ್ತ |
ನೇಕ ಸಂಭ್ರಮದಿ ಹರಿಸ್ಯಾರು ||೨೦೯||

* * *

ಇತ್ತ ಭೂಪಾಲಕ ಅರ್ಥಿಯೊಳು ಕರಗೆಳ್ತ |
ವೆತ್ತಿ ಜಲತಂದು ಸಭೆಗಿತ್ತು |
ವೆತ್ತಿ ಜಲತಂದು ಸಭೆಗಿತ್ತು-ಭೋಜನಕೆ |
ಹೊತ್ತಾಯಿತೇಳಿರೆನ್ನುತ ||೨೧೦||

* * *

ಈ ರೀತಿಯೊಳು ಶುಭಕಾರ್ಯವ ಪೂರೈಸಿ |
ನಾರೀಯು ಸಹಿತ ಸುಖದಿಂದ |
ನಾರೀಯು ಸಹಿತ ಸುಖದಿಂದ-ಇರುತೀರೆ |
ಮೀರಿತ್ತು ನವಮಾಸ ಬಸುರಿಂಗೆ ||೨೧೧||

* * *

ನುಡಿವಳೊಂದುದಿನ ತಡೆಯಲಾರದೆ ಸತಿ |
ನಡುನೋವ ಪರಿಯ ಸಖಿಯೊಳು |
ನಡುನೋವ ಪರಿಯ ಸಖಿಯೋಳು-ಪೇಳಿದಳು |
ಒಡಲ ವೇದನೆಯ ನಡುಗುತ್ತ ||೨೧೨||

* * *

ಹಸುತೃಷೆಗಳು ಕೆಟ್ಟು ಬಸುರಿಗುಬ್ಬಸಹುಟ್ಟಿ |
ವಶತಪ್ಪಿತವ್ವಾ ಅವಯವ |
ವಶತಪ್ಪಿತವ್ವಾ ಅವಯವ-ದೊಡನೇ |
ಉಸಿರಲಂಜುವೆನು ಮನದೋಳು ||೨೧೩||

* * *

ಎಂತು ಪೇಳಲಿ ನಾನೆಂತುತಾಳಲಿ ಕಾಂತೆ |
ಎಂತು ಸೈರಿಸಲಿ ಬಸುರೀನ |
ಎಂತು ಸೈರಿಸಲಿ ಬಸುರೀನ-ವೇದನೆಯ |
ಎಂತಾಯ್ತೆಂದು ಪೇಳಲಳವಲ್ಲ ||೨೧೪||

ಎಂದೆನುತೀ ಪರಿಯುಽಲಿ ಸೂತೀಕ |
ಮಂದಿರಕಾಗಿ ನಡೆತಂದು |
ಮಂದಿರಕಾಗಿ ನಡೆತಂದು-ಶುಭದಲ್ಲಿ |
ಕಂದಽನ ಪಡೆದಳಂಬುಜಾಕ್ಷಿ ||೨೦೧೫||

ಭಕ್ತಽವತ್ಸಲಕಾಯೋ ನಿತ್ಯಽನಿರ್ಮಲಕಾಯೋ |
ಸತ್ಯಾತ್ಮ ಕಾಯೋ ಕುವರಽನ |
ಸತ್ಯಾತ್ಮ ಕಾಯೋ ಕುವರಽನ-ಸಹಿತೆಂದು |
ಸತ್ಯದೇವನ ಸ್ತುತಿಸ್ಯಾರು ||೨೦೧೬||



## ಸಂತಾನ

ಮಕ್ಕಳರ್ಥಿ ಉಳ್ಳವಂಗೆ ಮಕ್ಕಳ ಕೊಡ ದೇವ |
ಮಕ್ಳು ಬೇಡೆಂದು ತಿರಿದುಂಬ |
ಮಕ್ಳು ಬೇಡೆಂದು ತಿರಿದುಂಬ-ಬಡವರಿಗೆ |
ಮಕ್ಕಳ ಕೊಡುಗ ಮನೆತುಂಬ ||೨೦೧೭||

* * *

ಮುದ್ದು ನೀನಳದೀರು ಎದ್ದಾಗ ಹಾಲುಣ್ಣು |
ನಿದ್ದೆ ಬಂದಾಗ ಪವಡೀಸು |
ನಿದ್ದೆ ಬಂದಾಗ ಪವಡೀಸು--ಬಾಲ ನೀ |
ಬುದ್ಧಿ ಬಂದಾಗ ಹರೆದಾಡು ||೨೦೧೮||

* * *

ಹರೆದಾಡಿ ಬಪ್ಪಾಗ ಹರಿಯು ಬ್ರಹ್ಮರು ಕಾಯ್ಲ್ಗಿ |
ಹರೆದಾಡಿ ಜಗುಲಲಿ ಇಳಿವಾಗ |
ಹರೆದಾಡಿ ಜಗುಲಲಿ ಇಳಿವಾಗ--ಕಿರಿಯುಽನ |
ಮನೆದೇವರೆ ಕಾಯ್ಲಿನುದಿನ ||೨೦೧೯||

ಮುದ್ದು ಬಾಯಿಗೆ ಸೇರ ಬುದ್ಧಿ ಕಿವಿಗ್ಹೋಗ ।
ಮುದ್ದು ಬಾಲಂಗೆ ಇದು ಶೀಲ ।
ಮುದ್ದು ಬಾಲಂಗೆ ಇದು ಶೀಲ-ನಿನ್ನಂಥ ।
ಮಕ್ಕಳು ಬೇಕೋ ಮನೆತುಂಬ ॥೨೦೨೦॥

* * *

ಬಂಗಾರು ತಾ ಮುದ್ದು ಬೆಳ್ಳಿ ತಾವರೆ ಮುದ್ದು ।
ಹಣ್ಣುಳ್ಳ ಮರಕೆ ಗಿಳಿಮುದ್ದು ।
ಹಣ್ಣುಳ್ಳ ಮರಕೆ ಗಿಳಿಮುದ್ದು-ತಾನಾದರೆ ।
ತಾ ಮುದ್ದು ತನ್ನ ತವರಿಂಗೆ ॥೨೦೨೧॥

* * *

ಬಲ್ಲಾಳು ಹಿತ್ತೀಲ ಬಳ್ಳೀಯ ಹೆಸರೇನು ।
ಬೆಳ್ಳೀಯಾ ದಂಡೆ ಬಿಡುನೀರ ।
ಬೆಳ್ಳೀಯಾ ದಂಡೆ ಬಿಡುನೀರ-ಹಿತ್ತೀಲ ।
ಬಲ್ಲಾಳು ತಿಂಬ ಬಿಳಿಯೆಲೆ ॥೨೦೨೨॥

* * *

ವಜ್ರದ ಹೆರಳೆ ಬಾ ಮುದ್ದು ಮುಗುಳೆ ಬಾ ।
ಅಜ್ಜನ ಕೊರಳ ಪದಕವೆ ।
ಅಜ್ಜನ ಕೊರಳ ಪದಕವೆ-ಬಾಯೆಂದು ।
ಅಜ್ಜಿ ಮೊಮ್ಮಗನ ಕರೆದಾಳು ॥೨೦೨೩॥

* * *

ಸಣ್ಣ ಸಣ್ಣ ಮಕ್ಕ್ಳೀಗೆ ಕುಸುಮದ ಕುಲಾಯಿ ।
ಹೊನ್ನ ಜನಿವಾರ ಕೊರಳಿಂಗೆ ।
ಹೊನ್ನ ಜನಿವಾರ ಕೊರಳಿಂಗೆ-ಬಾಲಂಗೆ ।
ಹೊನ್ನಿಲಿ ಸವೆದ ಮಣಿ ಬೇಕು ॥೨೦೨೪॥

* * *

ಎಲ್ಲರ ಮಕ್ಕ್ಳೀಗೆ ಬೆಲ್ಲ ಬಾಳೆಯ ಹಣ್ಣು
ಏನೂ ಇಲ್ಲದ್ದ ಬಡವರ ।
ಏನೂ ಇಲ್ಲದ್ದ ಬಡವರ-ಮಕ್ಕ್ಳೀಗೆ ।
ತೆಳ್ಳವಿನ ಮೇಲೆ ಹೆರೆ ತುಪ್ಪ ॥೨೦೨೫॥

ಇಲ್ಲಿಲ್ಲೆ ಮಕ್ಳ್ಯೋಗೆ ಹಲ್ಲೆಲ್ಲ ಬಪ್ಪಾಗ ।
ಎಲ್ಲಿಯೂ ಕಾಣೆ ಎಳೆಬೊಂಡ ।
ಎಲ್ಲಿಯೂ ಕಾಣೆ ಎಳೆಬೊಂಡ–ಇವನಜ್ಜ ।
ಕಲ್ಲೊಡೆದು ತೆಂಗು ನೆಡುಸಿಕ್ಕು ॥೨೦೨೬॥

* * *

ಕೂಗೂವ ಮಕ್ಕಳ ಅರಸಕೊಂಡೋಡಿಕ್ಕು ।
ಅರಸುತ್ತ ಬಕ್ಕು ನಿನ್ನಮಾವ ।
ಅರಸುತ್ತ ಬಕ್ಕು ನಿನ್ನ ಮಾವ–ತಿಳಿದರೆ ।
ಅರಸನ ಗೂಡ ಅಳುಕುಗು ॥೨೦೨೭॥

ನಿದ್ದೇಬಾರದ ಕಣ್ಗೆ ಮದ್ದಾರು ಬಲ್ಲೀರೋ ।
ಗದ್ದೇಯ ತಡಿಯ ಗರುಗಾನ ।
ಗದ್ದೇಯ ತಡಿಯ ಗರುಗಾನ–ಕೂಡಿತಂದು ।
ಸೌಭದ್ರೆ ಕಾಡೀಗೆ ಇಡಿಹಚ್ಚು ॥೨೦೨೮॥

* * *

ಮಕ್ಕಳಾಟಿಕೆ ಚೆಂದ ಮರುಳು ಬುದ್ಧಿಯ ಚೆಂದ ।
ಎಳೆಗರ್ಭದವಳ ಮುಖಚಂದ ।
ಎಳೆಗರ್ಭದವಳ ಮುಖಚಂದ–ಮಗನಾ ।
ತೊಳೆದು ಬರುವ ನಡುಚಂದ ॥೨೦೨೯॥

* * *

ಹಟ್ಟಿ ಕೊಟ್ಟಿಗೆ ಚಂದ ಹರದರ ರಂಗಡಿಚಂಡ ।
ಬೆಟ್ಟಕ್ಕೆ ಬೆದುರ ಕೊಡಿಚಂದ ।
ಬೆಟ್ಟಕ್ಕೆ ಬೆದುರ ಕೊಡಿಚಂದ–ಕಿರುಬಾಲ ।
ಎಷ್ಟು ಚೆಂದ ನಮ್ಮ ಬಳಗಕ್ಕ ॥೨೦೩೦॥

* * *

ಅಣ್ಣ ನಮ್ಮಣ್ಣನು ಬೆಣ್ಣೇಯ ತಿಂಬೋನು ।
ಗಿಣ್ಣಲ್ಲಿ ಹಾಲ ಕುಡಿವೋನು ।
ಗಿಣ್ಣಲ್ಲಿ ಹಾಲ ಕುಡಿವೋನು–ಮನೆಯಲ್ಲಿ ।
ಹನ್ನೆರಡೆಮ್ಮೆ ಎಳೆಕಂಜಿ ॥೨೦೩೧॥

ಅಣ್ಣಾನು ತಮ್ಮಾನು ಎಣ್ಣೇ ಮಜ್ಜನ ಮಾಡಿ ।
ಹೊನ್ನಾ ಗುಂಡಿಲಿ ಸುಳಿದಾಡಿ ।
ಹೊನ್ನಾ ಗುಂಡಿಲಿ ಸುಳಿದಾಡಿ–ಬಪ್ಪಾಗ ।
ಅಣ್ಣಂದ ತಮ್ಮ ಕಡುಜಾಣ ॥೨೦೩೧॥

* * *

ಆಡಿ ಉಂಡವ ಕೆಟ್ಟ ಕೇಡು ನೆನೆದವ ಕೆಟ್ಟ ।
ನೋಡದ್ದೆ ಕೆಟ್ಟ ಬೆಳೆ ಭೂಮಿ ।
ನೋಡದ್ದೆ ಕೆಟ್ಟ ಬೆಳೆ ಭೂಮಿ–ಸೋದರರ ।
ಹೆಣ್ಣು ತಂದು ಕೆಟ್ಟ ಅತಿ ಹೆಡ್ಡ ॥೨೦೩೨॥

*

ಅಬ್ಬೇಗೆ ಬಡಿದವನ ಗುಬ್ಬಿಗೂಡೆಳೆದವನ ।
ಹಬ್ಬಾದಿ ಪಶುವ ಬಡೆದವನ ।
ಹಬ್ಬಾದಿ ಪಶುವ ಬಡೆದವನ–ಪಾಪೀಯಾ ।
ಅಂತವನ ದೋಷ ತನಗೆಂದಾ ॥೨೦೩೪॥

* * *

ಆಚಾರಕ್ಕರಸಾಗು ನೀತಿಗೆ ಪ್ರಭುವಾಗು ।
ಮಾತಿನಲಿ ಚೂಡಾಮಣಿಯಾಗು ।
ಮಾತಿನಲಿ ಚೂಡಾಮಣಿಯಾಗು–ಬಾಲ ನೀ ।
ಜ್ಯೋತಿಯೆ ಆಗು ಜಗಕೆಲ್ಲ ॥೨೦೩೫॥

*

ದೇವಾರ ನೆನೆದಾರೆ ಸಾವ್ಹುಟ್ಟು ನಮಗಿಲ್ಲ ।
ಹಾವಾ ತುಳಿದರೆ ಭಯವಿಲ್ಲ ।
ಹಾವಾ ತುಳಿದರೆ ಭಯವಿಲ್ಲ–ಸರ್ಪಾನ ।
ಹೆಡೆ ತಲೆಯ ಮೇಲೆ ವಿಷವಿಲ್ಲ ॥೨೦೩೬॥

ಸಂಜೇಯ ಹೊತ್ತಿಂಗೆ ಮಕ್ಕಾಳ ಬೈಯ್ಯದಿರಿ ।
ಎಂಜಾಲು ಮೈಲಿಗೆಯ ಎಡಕೊತ್ತಿ ।
ಎಂಜಾಲು ಮೈಲಿಗೆಯ ಎಡಕೊತ್ತಿ–ಒತ್ತಿ ।
ಸಂಜೆ ನೀರೆರೆದು ದೆನಿಗೊಳ್ಳೋ ॥೨೦೩೭॥

ಸಂಜೇಯ ಹೊತ್ತಿಂಗೆ ಅಂಗs ಬಾಯ್ತಿಗೆವೊಳ ।
ಪಾಪೀಯ ಅಂಥವಳ ಮನೆಯಲ್ಲಿ ।
ಪಾಪೀಯ ಅಂಥವಳ ಮನೆಯಲ್ಲಿ–ಬಂದು ।
ನಿಲ್ಲsಳು ಮಹಾ ಲಕ್ಷುಮಿ ॥೨೦೩೮॥

* * *

ಹೆಂಡತ್ತಿ ಕಿರಿಕೂಸು ತಂದು ದಂಡಿಸಿದವನ ।
ಹೆಂಡsವ ಕುಡಿದು ತಿರುಗ್ವೋನ ।
ಹೆಂಡsವ ಕುಡಿದು ತಿರುಗ್ವೋನ–ಪಾಪೀಯ ।
ಅಂತವನ ದೋಷ ತನಗೆಂದ ॥೨೦೩೯॥

* * *

ಕಣ್ಣು ಕಾಣದ ಪಕ್ಷಿ ಹಣ್ಣುಳ್ಳ ವನಕ್ಹೋಗಿ ।
ಹಣ್ಣೆಂದು ಮೆಲುಗು ಕಸಕಾಯ ।
ಹಣ್ಣೆಂದು ಮೆಲುಗು ಕಸಕಾಯ-ಆ ಹಕ್ಕಿ ।
ಹಾಲೆಂದು ಕುಡಿಗು ಹನಿ ನೀರ ॥೨೦೪೦॥

* * *

ಬಡತನವೇ ನೀ ಎನ್ನ ಬಿಡದೆ ಬೆನ್ನಲಿ ಬಂದೆ ।
ಕಡು ಕಷ್ಟಗೊಳಿಸಿ ದಣಿಸೀದೆ ।
ಕಡು ಕಷ್ಟಗೊಳಿಸಿ ದಣಿಸೀದೆ–ಹೊನ್ನುಳ್ಳ ।
ಹೊಲೆಯಂಗೆ ಕೈಯ್ಯ ಮುಗಿಸೀದೆ ॥೨೦೪೧॥

* * *

ಹರುವಾಯಿತೆಂದsರೆ ದೆಶೆಯೊಳೊಬ್ಬರ ಕಾಣೆ ।
ಹರುವಾ ಬಲ್ಲಬ್ಬೆ ಒಳಗಿಲ್ಲೆ ।
ಹರುವಾ ಬಲ್ಲಬ್ಬೆ ಒಳಗಿಲ್ಲೆ–ಹೊರಗಿಲ್ಲೆ ।
ದೆಸೆ ನೋಡಿ ಬಾಳ ಬಡವಾದೆ ॥೨೦೪೨॥

* * *

ಬಿಪ್ದು ಕಿತ್ತುವರಿಲ್ಲೆ ಬೆನ್ನ ತಂಗುವರಿಲ್ಲೆ ।
ಆನಿದ್ದೆ ಎಂಬ ಹಿತರಿಲ್ಲೆ ।
ಆನಿದ್ದೆ ಎಂಬ ಹಿತರಿಲ್ಲೆ–ದೇವsರೇ ।
ತಾಯಂತೆ ನೀವೆ ಸಲುಹೀರೋ ॥೨೦೪೩॥

ಮಣ್ಣನ್ನು ನಂಬೂವೆ ಮಣ್ಣಿಂದ ಬದುಕೂವೆ ।
ಮಣ್ಣಿನಗೆ ಮುಂದೆ ಹೊನ್ನ ಕೊಡುಗು ।
ಮಣ್ಣಿನಗೆ ಮುಂದೆ ಹೊನ್ನ ಕೊಡುಗು-ಅಣ್ಣಯ್ಯ ।
ಮಣ್ಣ ಲೋಕದಲಿ ಬೆಲೆಬಾಳ್ಗು ॥೨೦೪೪॥

* * *

ತುಪ್ಪಶನ ಉಂಬೋಲೆ ತುಳುನಾಡಿಂಗ್ಹೋಯಿ ।
ಅಕ್ಕೀಯ ಮೇಲೆ ಬರೆ ಇಲ್ಲೆ ।
ಅಕ್ಕೀಯ ಮೇಲೆ ಬರೆ ಇಲ್ಲೆ-ತುಳುನಾಡು ।
ಮಕ್ಕಳ ಮೇಲೆ ಕಲೆ ಇಲ್ಲೆ ॥೨೦೪೫॥

* * *

ತುಂಬಿ ತುಳುನಾಡಿಂದ ಬಂದುವೆರಡ ದನ ।
ಕೊಂಬಿಂಗೆ ಚೌರಿ ಕಿರಿಗೆಜ್ಜೆ ।
ಕೊಂಬಿಂಗೆ ಚೌರಿ ಕಿರಿಗೆಜ್ಜೆ-ಕಟ್ಟಿಗೊಂಡು ।
ಬಂದುವು ನಮ್ಮ ಬೈಲಿಂಗೆ ॥೨೦೪೬॥

* * *

ಹಾಲುಳ್ಳ ಹಸು ತಾಯಿ ಬಾ ನಮ್ಮ ಕೊಟ್ಟಿಗೆಗೆ ।
ಕೀಲು ಕಂಬಕ್ಕೆ ಕರುಕಟ್ಟಿ ।
ಕೀಲು ಕಂಬಕ್ಕೆ ಕರುಕಟ್ಟಿ-ಕರೆದುರೆ ।
ಏಳು ಚೆಂಬಿನಲಿ ನೊರೆ ಹಾಲು ॥೨೦೪೭॥

ಹಿಂಡೆಮ್ಮೆ ಕರೆಯುಲಿ ತೊಂಡೆ ಕಾಯಾಗುಲಿ ।
ದಿಂಡೀನ ಬಾಳೆ ಗೊನೆ ಬಿಡಲಿ ।
ದಿಂಡೀನ ಬಾಳೆ ಗೊನೆ ಬಿಡಲಿ-ದೇವರಿಗೆ ।
ಕೊಂಡೊಪ್ಪಿಸುವೆ ನೊರೆಹಾಲು ॥೨೦೪೮॥

ಹಟ್ಟೀಯು ಕೆಸರೆಂದು ಮೆಟ್ಟಿ ನಿಲ್ಲದು ಕಪಿಲೆ ।
ಕಟ್ಟೇಸಿದ ಅಪ್ಪ ನೆಲೆಕಟ್ಟು ।
ಕಟ್ಟೇಸಿದ ಅಪ್ಪ ನೆಲೆಕಟ್ಟು-ನೆಲೆಕಟ್ಟು ।
ಮೆಟ್ಟಿ ಸುರಿವುದು ನೊರೆಹಾಲು ॥೨೦೪೯॥

ಮಾವಽನ ಮನೆಯಲ್ಲಿ ಮಣಿಕಟ್ಟೈದ್ವೈವೆಮ್ಮ ।
ಮಾವಽನ ಮಡದಿ ಶ್ರೀದೇವಿ ।
ಮಾವಽನ ಮಡದಿ ಶ್ರೀದೇವಿ-ಯಲ್ಲಡಿ ।
ಆ ಎಮ್ಮ ಕರೆಯುಽವು ನೊರೆ ಹಾಲು ॥೨೦೫೦॥

* * *

ಮುದ್ದು ಬಾಯಿಗೆ ಸೇರ ಬುದ್ಧಿಕೆಮಿಗ್ಹೋಗ ।
ಮುದ್ದು ಬಾಲಂಗೆ ಇದು ಶೀಲ ।
ಮುದ್ದು ಬಾಲಂಗೆ ಇದು ಶೀಲ-ನಿಸ್ಸಂಘ ।
ಮಕ್ಕಳು ಬೇಕು ಮನೆತುಂಬ ॥೨೦೫೧॥

## ಸಂವಾದ

ಬದ್ಧಗಾರನು ಎಂದು ಭಾಳ ನಂಬಿದೆ ಸ್ವಾಮಿ ।
ಬಿದ್ದಽಗಾಯಗಳೇನು ಹೇಳಿರೇ-ನನಸ್ವಾಮಿ ।
ಬಿದ್ದಽ ಗಾಯಗಳೇನು ಹೇಳಿ ॥೨೦೫೨॥

ಉಗುರುಗುರಿನ ಗಾಯ ಉಗುರಿನ ಕೊನೆಗಾಯ ।
ಚಿಲುಗುರೀನ ಗಾಯಽವೇ ಹೇಳಿರೆ-ಸ್ವಾಮಿ ।
ಚಿಲುಗುರೀನ ಗಾಯಽವೇ ಹೇಳಿ ॥೨೦೫೩॥

* * *

ನಟ್ಟೈರ್ದ ಗಜನಿಂಬೆ ಮರವೇರಿ ಕೊಯ್ವಾಗ ।
ಮುಳ್ಳು ಕುಟ್ಟಿದ ಗಾಯ ಕೇಳಿಲಿ-ಜಾಣೆ ।
ಮುಳ್ಳು ಕುಟ್ಟಿದ ಗಾಯಽವೇ ॥೨೦೫೪॥

* * *

ಕುಟಿಲ ಸೋಜಿಗವೇನು ನಯನ ಕೆಂಪಡಽರೀತು ।
ಕುಟಿಲವೆ ಪೇಳೆನಗೆ ಹೇಳೀರೆ-ಸ್ವಾಮಿ ।
ಕುಟಿಲವೆ ಪೇಳೆನಗೆ ಹೇಳಿ ॥೨೦೫೫॥

ಮಧ್ಯಾಹ್ನ ಹೊತ್ತೀಲಿ ಗೆಳೆಯರೆಲ್ಲರೂ ಕೂಡಿ ।
ಭಂಗೀಯ ಸೇದಿದೆನು ಕೇಳಲೆ-ಜಾಣೆ ।
ಭಂಗೀಯ ಸೇದಿದೆನು ॥೨೦೫೬॥

* * *

ಅರ್ಧಮ ರಾತ್ರಿಯಲಿ ನಿದ್ರೇಯ ಹೊತ್ತೀಲಿ ।
ಎದ್ದೆಲ್ಲಿ ಪೋದೀರಿ ಹೇಳೀರೆ-ಸ್ವಾಮಿ ।
ಎದ್ದೆಲ್ಲಿ ಪೋದೀರಿ ಹೇಳಿ ॥೨೦೫೭॥

* * *

ಬೇಸೀಗೆ ಬಿಸಿಲಲ್ಲಿ ತಿರುಗೀ ಮೈ ಬೆವರೀತು ।
ಎದ್ದಾಚೆ ಹೋಗಿದ್ದೆ ಕೇಳಲೆ-ಜಾಣೆ ।
ಎದ್ದಾಚೆ ಹೋಗಿದ್ದೆ ಕೇಳೆ ॥೨೦೫೮॥

* * *

ಹಾವು ನಿಮ್ಮ ಕೊರಳಲ್ಲಿ ನೀವು ಸೂಳೆ ಮನೆಯಲ್ಲಿ ।
ಹಾವನ್ನು ಹಿಡಿದೀರೆ ಹೇಳೀರೆ-ಸ್ವಾಮಿ ।
ಹಾವನ್ನು ಹಿಡಿದೀರೆ ಹೇಳಿ ॥೨೦೫೯॥

* * *

ಎಷ್ಟು ಹೇಳಿದರು ನೀವು ಮೂರ್ಖ ಬುದ್ಧಿಯ ಬಿಡಿ ।
ಹೋಗಲಿಲ್ಲವೆ ನೀವು ಸೂಳೆಯ ಮನೆಗೆ ।
ಹೋಗಲಿಲ್ಲವೆ ನೀವು ಹೇಳಿ ॥೨೦೬೦॥

* * *

ಕಾಶಿ ವಿಶ್ವನಾಥನ ಗುಡಿಯ ಮುಂದಕೆ ನಾನು ।
ಭಾಷೇಯ ಮಾಡಿಸುವೆ ಹೇಳೀರೆ-ಸ್ವಾಮಿ ।
ಭಾಷೇಯ ಮಾಡಿಸುವೆ ಹೇಳಿ ॥೨೦೬೧॥

* * *

ಕೇಳಲೆ ಜಾಣೆ ನಾ ನಿನ್ನ ಹೊರ್ತು ಬೇರೆಯರ ।
ಎಂದಿಗೂ ನೋಡಲಿಲ್ಲ ಈಶ್ವರನಾಣೆ ।
ಎಂದಿಗೂ ನಾ ನೋಡುವದಿಲ್ಲ ॥॥೨೦೬೨॥



## ಮದುವೆಯ ಹಾಡುಗಳು

ಶ್ರೀ ಗುರು ಗಣಪರ ಶೀಘ್ರದಿ ನೆನೆಯುತ್ತ ।
ಯೋಗ ಮಹೇಶ್ವರಿಯೊಳು ಮತಿ ಬೇಡುತ್ತ
ನಾಗ ಕುಂಡಲನಿಗೆ ನಮಿಸಿ ಕೊಂಡಾಡುತ್ತ
ಈಗ ನಾನು ಸುರುವೆನು........ಇಂದಿರೆಯು ಕೈಯ್ಯೊಳು
ಹೂಗಿನ ಮಾಲೆಯನು........ಹಿಡಿದು ನಸು ನಾಚುತ
ಬಾಗಿ ಲಜ್ಜಿಸುತ ತಾನು........ದೇವಾಸುರರನು
ಆಗ ಲೀಕ್ಷಿಸಿ ನವೋ ಭಾವಧಿ
ಆಗ ಕಂಡಳು ಬ್ರಹ್ಮ ರಂಗವ
ಈಗ ಲಿವಬಲು ವೃದ್ಧ ನಿವಗೆಸ-
ರಾಗವಾಗದೆ ಸುತ್ತಲಿಂದ್ರನ
ಬಾಗಿ ನೋಡಿದಳೆ ಮನದಲ್ಲಿ ||೨೦೬೩||

* * *

ಘನವಲ್ಲ ನಿವನೆಂದು ಘೂಥ ಗರ್ವಿತನೆಂದು ।
ಅಗ್ನಿ ಕಾಣುತಲೇದು ಲಗ್ನವಾಗದು ಎಂದು ।
ಧನ ಪತಿಯನು ಕಂಡಾಳೊ........ಧನಾಢ್ಯನ ।
ತನ ಹೆಮ್ಮೆ ಬೇಡೆಂದಳೊ........ಬಿಟ್ಟವನ ।
ಮುಂದ ಮುಂದಕೆ ಬಂದಳೋ........ನಿಂದಾಳೋ ।
ದಿನ ದಿನಕೆ ಕ್ಷೀಣತ್ವ ವೃದ್ಧೀಯ ।
ಇನ್ನೇಕೆ ಜ್ವಲಿಸುತಿಹ ಭಾರೀ ।
ಇನನ ಕಾಣುತ ಬೇಡೆಂದು ।
ಮೆಲ್ಲಡಿ ಇಡುತ ಮುಂದಕೆ ನಾರೀ ।
ಮಣಿ ಬಂದಾಳೋ ಒಲವಿಂದ ||೨೦೬೪||

ಮಾರುತನ ಕಂಡು ಮನದಿ ನಿಶ್ಚಯಗೊಂಡು |
ಸಾರಿ ತೆರಳಲೆಂದು ಸದರವಲ್ಲೆನಗೆಂದು |
ಚೋರ ಇನ್ನಾರೆಂದಳೋ........ಈಶ್ವರ ಸಂ-|
ಹಾರ ಮೂರುತಿ ಎಂದಳೋ........ನಂಜುಂಡ ಕ-|
ಠೋರ ಮಾನಸನೆಂದಳೋ........ತಾನಾಗಿ ತನ್ನೊಳು |
ದಾರ ಮಣಿ ಕೇಯೂರ ಕಂಕಣ |
ದಾರ ಮುತ್ತಿನ ಪದಕ ಹೂಗಿನ |
ಸರ ಡಾಬಿಲಿ ಪಟ್ಟೆ ಸೀರೆಯೊ |
ಯ್ಯಾರ ಮಾಡುತ ನಾರಿ ನಡೆಯುತ |
ಸಾರಿ ಸಾರಿಯಲಿ ಬರಲೆಂದು ||೨೦೬೫||



## ಸುಗ್ಗಿಯ ಹಾಡುಗಳು

ಬಾಗೀಲ ಮುಂದಣ ಗೆದ್ದೆ ಕದಿರು ಬಂದು |
ಬಾಗಿತ್ತು ಅಂಚಂಚು ಗಿಳಿಮೇಗು |
ಬಾಗಿತ್ತು ಅಂಚಂಚು ಗಿಳಿಮೇಗು–ಅಣಯ್ಯ |
ಮಂಚದಿಂದೆದ್ದು ಓಡ್ನೋಗು ||೨೦೬೬||

* * *

ಮೂಡಲ ಮುಗಿಲೆದ್ದು ಮುನ್ನೂರು ಹನಿಬಿದ್ದು |
ನಮ್ಮೂರ ಪೈರು ಅಗೆ ಎದ್ದು |
ನಮ್ಮೂರ ಪೈರು ಅಗೆ ಎದ್ದು-ನಮ್ಮಣ್ಣಯ್ಯ |
ಬಂದು ಬಿತ್ತಿ ಬೆಳೆಯಾಯ್ತು ||೨೦೬೭||

* * *

ತೆಂಕಲೆಲರು ಬೀಸಿ ಮುನ್ನೂರು ಹಸಿ ಸೂಸಿ |
ತೊಂಡಿಲ ಕದಿರು ತೆನೆಹಾಸಿ |
ತೊಂಡಿಲ ಕದಿರು ತೆನೆಹಾಸಿ–ಹಾರೈಸಿ |
ತಂಗಾಳಿ ನೆಲಕೆ ನಿಮಿರಿತ್ತು ||೨೦೬೮||

ಬೆಟ್ಟ ಗೆದ್ದ ಗೊನೂರು ಬೈಲುಗದ್ದಿಗೊ ನೂರು ।
ಎತ್ತಿಗೊ ನೂರು ನೊಗನೂರು ।
ಎತ್ತಿಗೊ ನೂರು ನೊಗನೂರು-ಅಣ್ಣಯ್ನ ।
ಸಿರಿಯೊಕ್ಕಲಕ್ಕೆ ಕಳೆಯೇರೆ ॥೨೦೬೯॥

* * *

ಪಟ್ಟೆಸಾಲೆಯನಾಂತ ಗಟ್ಟಿಸಮುರುವನುಟ್ಟ ।
ಕಣ್ಣೆ ಮುಟ್ಟಾಳೆ ತಲೆಗಿಟ್ಟ ।
ಕಣ್ಣೆ ಮುಟ್ಟಾಳೆ ತಲೆಗಿಟ್ಟ-ಬಳೆತೊಟ್ಟ ।
ಹೊಂಗಽದಿರ ಕಳಕೆ ನಡೆಗೊಂಡ ॥೨೦೭೦॥

* * *

ಬಣ್ಣಽ ಹಚ್ಚಡ ಹೊಡೆದ ರನ್ನಽ ಕೊಡಂಗೆಯನೇಲ್ದ ।
ಚಿನ್ನಽದುಂಗುರುವ ಬೆರಳಿಟ್ಟ ।
ಚಿನ್ನಽದುಂಗುರುವ ಬೆರಳಿಟ್ಟ-ಹೂಗ್ಳೂಡಿ ।
ಬೆಳ್ಳಿ ಪಲುಗತ್ತಿ ಹಿಡುಗೊಂಡ ॥೨೦೭೧॥

* * *

ಮುತ್ತಿನೊಂಟಿಯ ನಿಟ್ಟ ಮುತ್ತು ಹಾರವತೊಟ್ಟ ।
ಮುತ್ತು ರುಮಾಲು ತಲೆಗಿಟ್ಟ ।
ಮುತ್ತು ರುಮಾಲು ತಲೆಗಿಟ್ಟ-ನಮ್ಮಣ್ಣಯ್ಯ ।
ಮುತ್ತಿನಂಥ ಕದಿರ ತರಲ್ಹೋದ ॥೨೦೭೨॥

* * *

ಭಾಗ್ಯಲಕ್ಷ್ಮಿ ಬಪ್ಪಾಗ ಬಾಗಿಲಲಿ ಕಾದಿದ್ದೆ ।
ಹೂಗು ಅಕ್ಷತೆಯ ಹಿಡಿದಿದ್ದೆ ।
ಹೂಗು ಅಕ್ಷತೆಯ ಹಿಡಿದಿದ್ದೆ-ಮಾಲಕ್ಷ್ಮಿ ।
ಹೊಲಿಬಾರೆ ನಮ್ಮ ಮನೆ ತುಂಬಿ ॥೨೦೭೩॥

* * *

ಕದಿರಮ್ಮ ಬಪ್ಪಾಗ ಎದುರ್ಗೊಂಬಲಾನಿದ್ದೆ ।
ಗರತೀಯ ಪುಣ್ಯಾಗಳಿಸಿದ್ದೆ ।
ಗರತೀಯ ಪುಣ್ಯಾಗಳಿಸಿದ್ದೆ-ಮಾ ಲಕ್ಷ್ಮಿ ।
ಹೊಲಿಬಾರೆ ನಮ್ಮ ಮನೆತುಂಬಿ ॥೨೦೭೪॥

ಪಚ್ಚೆಗುಪ್ಪಸ ಚಿಗುರಿ ಕೆಚ್ಚಽನೆ ಕುಯ್ಗರಳಿ ।
ಕೊಯ್ಲರಕೆ ಕೂಸಿ ಮಣಿ ಮಾಡಿ ।
ಕೊಯ್ಲರಕೆ ಕೂಸಿ ಮಣಿಮಾಡಿ-ಎದೆದುಂಬಿ ।
ಮದನಽನ ಸೇನೆ ನೆರೆದಿತ್ತು ||೨೦೭೫||

* * *

ಹೋಪಾಗ ಹೆಡಗೇಲಿ ಬಪ್ಪಾಗ ದಂಡಿಗೇಲಿ ।
ಮದು ಮಗಳಾಗಿ ತಲೆ ಬಾಗಿ ।
ಮದು ಮಗಳಾಗಿ ತಲೆಬಾಗಿ–ಸಿರಿದೇವಿ ।
ಹೊಲಿಬಾರೆ ನಮ್ಮ ಮನೆತುಂಬಿ ||೨೦೭೬||

* * *

ಮಾಳೀಗೆ ತುಂಬಿತ್ತು ಚಾವಡಿ ತಲ್ಲಣಿಸಿತ್ತು ।
ಚಾವಡಿಯ ಕಂಬ ಅಲುಗಿತ್ತು ।
ಚಾವಡಿಯ ಕಂಬ ಅಲುಗಿತ್ತು–ನಡುಗಿತ್ತು ।
ಹೊಲಿಬಾರೆ ನಮ್ಮ ಮನೆ ತುಂಬಿ ||೨೦೭೭||

* * *

ಹಟ್ಟಿ ತುಂಬಿತ್ತು ನಮ್ಮ ಕೊಟ್ಟಿಗೆ ಮಾಲಿತ್ತು ।
ಕೊಟ್ಟಿಗೆಯ ಕಂಬಪದುರಿತ್ತು ।
ಕೊಟ್ಟಿಗೆಯ ಕಂಬವದುರಿತ್ತು–ಸಿರಿದೇವಿ ।
ಹೊಲಿಬಾರೆ ನಮ್ಮ ಮನೆತುಂಬಿ ||೨೦೭೮||

* * *

ಇಂದಿರೆ ಮಾದೇವಿ ಚೆಂದದ ಮನೆವಾಕ್ತಿ ।
ಯಂದಽದಿ ಸಾಗಿ ಸಲಹಂತೆ ।
ಯಂದಽದಿ ಸಾಗಿ ಸಲಹಂತೆ–ಕುಂದಽಣ ।
ದಾರಽತಿ ಎತ್ತಿ ಬೆಳಗಿರೋ ||೨೦೭೯||

* * *

ಶ್ರೀಗುರುವರ ನಡಿಗೆರಗುತ ಮಂಗಲೆ ।
ವಾಗ್ಯಲಂಕಾರವ ಗೈದು ।
ಹೊಗು ಸುಮಂಗಲೆ ಸಾಕೊಂಡೈದು ಸ–
ರಾಗದಿ ರವಿಯ ಪೂಜಿಸು ತೊಲಿದೂ ।

ಬೇಗದಿ ಬತ್ತದ ಕದಿರನಳೆದೂ ।
ಬಾಗಿ ಪೂಜಿಸಿ ದೇವರ ಧರೆಯೊಳ- ।
ಗಾಗೀ ಧರಿರುತ್ತ ಬರಲಂದು ॥೨೦೮೦॥

* * *

ಬರುತಲಿ ಕ್ಷೀರವ ಪ್ರೋಕ್ಷಿಸಿ ಅರಳನು ।
ಸುರಿಯುತ ಮುಂದುಬಿಗೋಶದಲಿ ।
ತರ ತರದಿಂದಲಿ ಲಕ್ಷುಮೀ ಸುಮಂಗಲೆ ।
ಬರಲಿದಿರ್ಗೊಳ್ಳೆನ್ನುತಲಿ ॥೨೦೮೧॥
ಹರಿಸರುವೋತ್ತಮು ಲಕ್ಷುಮೀನಾಥನ ।
ಸ್ಮರಿಸುತಂಗಳದಲಿ ತುಳಶಿ ಪ್ರದಕ್ಷಿಣೆ ।
ಎರಸಿ ಮಂಟಪಕೆ ಬರಲೆಂದೂ ॥೨೦೮೨॥

* * *

ಒಳಗಬ್ಯುತ ಬಲಗಾಲನು ಹೊಸ್ತೀಲ ।
ಒಳಗಿಡುತಲಿ ರಮೆರೂಪಳ ।
ಚೆಲು ವಳುಕಲು ಚೆಲುವಹ ಕದುರನು ।
ಕುಲದೇವನ ಮುಂದಿರಿಸುತಿಹ ।
ಕಳಕಳದಿಂದಲಿ ಹೊಳೆವ ಮಣೆ ।
ಮೇಲೊಳಗಿಟ್ಟು ಕುಕ್ಕುಟ ಪುರದೀಶಗೆ ।
ನಲವಿಂದ ಸಾಷ್ಟಾಂಗ ಎರಗೀದ ॥೨೦೮೩॥



## ವಿಧವೆ

ಅಲ್ಲಿ ನೀ ಬಾರವ್ವ ಇಲ್ಲಿ ನೀ ಬಾರವ್ವ ।
ಎಲ್ಲೀಯು ತನಕ ಈ ಸೊಲ್ಲ ।
ಎಲ್ಲೀಯು ತನಕ ಈ ಸೊಲ್ಲ-ನಲ್ಲನ ।
ಇರುತನಕ ಮುಖ ನಮ್ಮ ಮುಂದ ॥೨೦೮೪॥

ಗಂಡ ಸತ್ತ ಮ್ಯಾಲ ರಂಡಿತನದ ಸಿರಿಯು ।
ಸುಡಬೇಕ ಏನಾದರೇನ ।
ಸುಡಬೇಕ ಏನಾದರೇನ-ಆ ಜೀವ ।
ಬಿಚ್ಚಿಟ್ಟ ಬಂಡಿ ಇದ್ದಂಗ ॥೨೦೮೫॥

* * *

ಕಾಳ ಕಾಯುವ ತನಕ ಗೊಳಲೀಯ ಪರಿವೇನ ।
ಒಡದಿಂದ ಎಲ್ಲ ಬತ್ತಾನ ।
ಒಡದಿಂದ ಎಲ್ಲ ಬತ್ತಾನ-ಆ ಗೊಳಲಿ ।
ಮಳಲೀನಕಿಂತ ಕಡಿಯಾದ ॥೨೦೮೬॥

* * *

ಹಂದರಕ ಹಬ್ಬಿತ್ತ ಹರಿಚಂದ್ರಾವಿನ ಬಳ್ಳಿ ।
ಮುಳುವಾತ ಮರಣಂಬು ಗಾಳಿ ।
ಮುಳುವಾತ ಮರಣಂಬು ಗಾಳಿ-ಚಳಿಯಂಗ ।
ಎಲಿನೆಲ್ಲ ಹಣ್ಣ ಮಾಡೀತ ॥೨೦೮೭॥

* * *

ಕೂಡಿ ಕುಂತ ನೆನಪ ನೋಡಿನಕ್ಕ ಒನಪ ।
ಇತ್ತಿಲ್ಲೊ ಆತ ಈಗೆಲ್ಲ ।
ಇತ್ತಿಲ್ಲೊ ಆತ ಈಗೆಲ್ಲ-ಮುಗಲಾನ್ನ ।
ಮರಿಯಾತ ಮೋಡದು ಬಣದಂಗ ॥೨೦೮೮॥

* * *

ಗಂಡs ಹೆಂಡಿರು ಎಂದು ಕಂಡಾಡಿದವರೆಲ್ಲ ।
ಕಂಡsರ ಮಾರಿ ತಿರುವೂರ ।
ಕಂಡsರ ಮಾರಿ ತಿರುವೂರ-ಗಂಡಿಲ್ದ ।
ನಾರೆವ್ವ ನಾರ ಕೊಳಿ ನೀರ ॥೨೦೮೯॥

* * *

ತವರೀನು ತಳಿದಾಗ ದುಕ್ಕಗನಿ ಉರುವಾಗ ।
ಇಲದಾಗ ಗಂಡಂಬಾದಾರ ।
ಇಲದಾಗ ಗಂಡಂಬಾದಾರ-ನಾರೀಯು ।
ಉಂಡಂಗ ಕಂಡ ಇಳದೀತ ॥೨೦೯೦॥

ಬಾಲಕನ ಕಟ್ಟ್ಯೇದ ಚೆಂಡು ಹೂವಿನ ಸರದ ।
ದಾರಾನ ಹೊರಗ ಎಳದsರ ।
ದಾರಾನ ಹೊರಗ ಎಳದsರ-ಬೀಳೂವ ।
ಹೂವಿನ್ಹಂಗ ನಾರಿ ಪತಿಯಿಲ್ದ ೨೦೯೧॥

* * *

ಹೆಣ್ಣೀನ ಜೀವಕ್ಕ ಕುತ್ತೆಷ್ಟ ಕೊರತೆಷ್ಟ ।
ಹೇಳಿದರ ಮುಳ್ಳ ಮೈಗೆಲ್ಲ ।
ಹೇಳಿದರ ಮುಳ್ಳ ಮೈಗೆಲ್ಲ-ಕೊರತೆವ್ವ ।
ಮಾರಾಯ್ನ ಬಿಸಲ ಮರತೆಂಗ ॥೨೦೯೨॥

* * *

ಕೆರಿ ತುಂಬ ನೀರಂಗ ಮನ ತುಂಬಿ ನನ್ನೊಡಿಯ ।
ಇರತಿದ್ದ ಅಗಲದಳ ಕಸದ ।
ಇರತಿದ್ದ ಅಗಲದಳ ಕಸದ-ಭಾಗ್ಯೇವು ।
ಕಂಡಿತ್ತ ನಡಿಯ ಕೊಂಡಾಡು ॥೨೦೯೩॥

* * *

ಹಾಡಿ ಅಳಕಿದರೇನ ಬಳಗ ಕೂಡಿದರೇನ ।
ಬೆಳಿಗಾಯ ತುಂಬ ಕೋಥಂಗ ।
ಬೆಳಿಗಾಯ ತುಂಬ ಕೋಥಂಗ-ಶಿವರಾಯ ।
ಒಳಕೋರೋ ಬಯಕಿ ಪತಿರಾಯ್ನ ॥೨೦೯೪॥

* * *

ಮುಗ್ಗsದ ಜ್ವಾಳಥಂಗ ಕಗ್ಗsದ ಬೆಳಸಿನ ಹಂಗ ।
ಹಗ್ಗಿಲ್ದ ಭಾವಿ ಕೊಡಥಂಗ ।
ಹಗ್ಗಿಲ್ದ ಭಾವಿ ಕೊಡಥಂಗ-ಪತಿರಾಯ ।
ನೀಹ್ವಾದ ಚಣಕ ನನಜೀವ ॥೨೦೯೫॥



## ಪ್ರಸಂಗ

ಕೇಳಮ್ಮಾನಿ ಮಲ್ಲವ್ವಗೊಬ್ಬಾನ ಮಗನವ್ವ ।
ದನಕಾಯ್ದು ಸಣ್ಣ ಮಗನಿರತ ।
ದನಕಾಯ್ದು ಸಣ್ಣ ಮಗನಿರತ-ಓಣ್ಯೋಣಿ ।
ರೈತರ ಮನಿಯ ಆರೊರಸ ||೨೦೯೬||

* * *

ರೈತರ ಮನಿಯ ನೀ ದನಕಾದೆ ಆರೊರಸ ।
ಕೊಳಲೂದ್ಯೆ ಮಗನ ಬೆಳಿತುಂಬ ।
ಕೊಳಲೂದ್ಯೆ ಮಗನ ಬೆಳಿತುಂಬ-ಕುಣದಾನ ।
ತಾಯವ್ವನಕ್ಕ ಮರತಾಳ ||೨೦೯೭||

* * *

ತಾಯವ್ವ ನೀ ನಕ್ಕ ಮರತಾಳ ತನ್ನರಲ ।
ದನಕಾಯು ಮಗನ ಮುಕ-ನೋಡಿ ।
ದನಕಾಯು ಮಗನ ಮುಕ-ನೋಡಿ-ಬೆಳುವಂತ ।
ಬಾಲನ್ನ ತಾಯಿ ಬಗಿತುಂಬ್ಯೆ ||೨೦೯೮||

* * *

ಬಾಲನ್ನ ತಾಯವ್ವ ಬಗಿತುಂಬ್ಯೆ ದಿನ ದಿನಕ ।
ನೆನಿವೂದ ಬಿಟ್ಟ ಹಳಿಮಾತ ।
ನೆನಿವೂದ ಬಿಟ್ಟ ಹಳಿಮಾತ-ಇದು ಮಗನ ।
ಸಲವಂದ ಶಿವನ ಬೇಡೂಳ ||೨೦೯೯||

* * *

ಸಲವಂದಾ ನೀ ಶಿವನ ಬೇಡೂಳ ತನಗಿರುವು ।
ಬಾಲಾನ ಮ್ಯಾಲೆ ಕರುಣಿರಲೆ ।
ಬಾಲಾನ ಮ್ಯಾಲೆ ಕರುಣಿರಲೆ-ಎನುಕೊಂಡ ।
ಧ್ಯಾನ ಮಾಡೂಳ ಶಿವನವ್ವ ||೨೧೦೦||

ಧ್ಯಾನುವ ಮಾಡೂಳ ಶಿವನವ್ವ ಮಗನೊಬ್ಬ ।
ಹಿಂದಿಲ್ಲ ಮತ್ತ ಮುಂದಿಲ್ಲ ।
ಹಿಂದಿಲ್ಲ ಮತ್ತ ಮುಂದಿಲ್ಲ–ಬಳಗಿಲ್ಲ ।
ಮಗನನ್ನ ನಿಂಗ ನೀ ಬಳಗ ॥೨೧೦೧॥

* * *

ಮಗ ನನ್ನ ನಿಂಗಣ್ಣ ನೀ ನನ್ನ ಬಳಗೆಲ್ಲ ।
ಕಳಬಳ್ಳಿ ನೀನೋ ನನ ಮಗನ ।
ಕಳಬಳ್ಳಿ ನೀನೋ ನನ ಮಗನ–ನಿನನೋಡಿ ।
ದಿನನೊಂದ ಚಣವ ನನಗಾದೆ ॥೨೧೦೨॥

* * *

ದಿನನೊಂದ ಚಣನಾದೆ ಮಗನು ಬೆಳವುದ ಕಂಡ ।
ಹದನಾರ ತುಂಬ್ಯೆ ಮಗಗವ್ವ ।
ಹದನಾರ ತುಂಬ್ಯೆ ಮಗಗವ್ವ–ಹದಬಂದೆ ।
ದುಡಿಲಾಕ ಜೀತ ಜನುಮುದ ॥೨೧೦೩॥

* * *

ಅಂಗ್ಯಾಡ್ಡ ಚೊಣದರಿಬೆ ದಬ್ಬುಣ ಕಾಟೀಯು ।
ಪಡಕ್ಯಾಡ್ಡ ಮತ್ತ ಉಡಲಾಕ ।
ಪಡಕ್ಯಾಡ್ಡ ಮತ್ತ ಉಡಲಾಕ–ವರಸಕ್ಕ ।
ದಿನಗೂಳ ಕಾಳ ಅಂಗಡಿಯು ॥೨೧೦೪॥

* * *

ದಿನಗೂಳ ನನಗಾದೆ ಅಂಡೀಗಿ ಕಾಳಾದೆ ।
ಮನಿತಾಯಿಗಂದ ಮಗನವ್ವ ।
ಮನಿತಾಯಿಗಂದ ಮಗನವ್ವ–ಜೀತಕ್ಕ ।
ನಿಂತಾನ ವರಸ ಹದಿನಾರ ॥೨೧೦೫॥

* * *

ಜೀತುಕೂ ನಿಂತಾನ ವರಸವಗ ಹದಿನಾರ ।
ಕಂಬಳೀ ನೊಂದ ಮಳಿ ಚಳಿಗೆ ।
ಕಂಬಳೀ ನೊಂದ ಮಳಿ ಚಳಿಗೆ–ಜೋಡವ್ವ ।
ಹಳ್ಳಂದ ಮುಳ್ಳ ದಾರ್ಯೆಂದ ॥೨೧೦೬॥

ಜೀತsಕೂ ನಿಂತಾನ ಜೀವೆಲ್ಲ ಅಡಿವ್ಯಾಗ ।
ಓಡ್ಯೋಡಿ ಮೊದಲ ಗಿಡ ಗಂಟ್ಯೆ ।
ಓಡ್ಯೋಡಿ ಮೊದಲ ಗಿಡ ಗಂಟ್ಯೆ-ಹಣ್ಣುಂಪ್ಲ ।
ತಿಂದಂತ ಮಗನ ಕೊಳಲ್ಯಾದೆ ||೨೧೦೭||

* * *

ಗೆಣಿಕಾರರ ಕೂಡ್ಯಾಡಿ ಹಳದಾಗ ತಿಂದುಂಡ ।
ನೆಳ್ಳಾಗ ಜೀವ ಸುಖಿನಿತ್ತ ।
ನೆಳ್ಳಾಗ ಜೀವ ಸುಖಿನಿತ್ತ-ನನಗಿಂದ ।
ಜೀತ ಮುಳ್ಳಾದೆ ಅಸುವೂನ ||೨೧೦೮||

* * *

ಆರ ತಿಂಗsಳಾದ್ಯೆ ಮೂಡಗಾಳಿ ಬಿಟ್ಟಿ ।
ಹಣ್ಣಾಗಲೆಂದ ತೆನಿಬಳ್ಳೆ ।
ಹಣ್ಣಾಗಲೆಂದ ತೆನಿಬಳ್ಳೆ-ನಿಂಗಣ್ಣ ।
ಜೀತ ನಿನಗಿನ್ನ ಎರವಾದೆ ||೨೧೦೯||

* * *

ಮೇವ ಕೊಯ್ಯ್ಯಾವಾಗ ಬಂಡಿಗುಡಗೋಲವ್ವ ।
ಕೋ ಕೊಂಡ ಬಂದೆ ಹಿಂಬಡನ ।
ಕೋ ಕೊಂಡ ಬಂದೆ ಹಿಂಬಡನ-ನಿಂಗಣ್ಣ ।
ಹಿಂಗ್ಯಾಕ ಆದ್ಯೊ ಒಮ್ಮಿಗಿಲೆ ||೨೧೧೦||

* * *

ಹಿಂಗ್ಯಾಕ ನೀ ಆದ್ಯೋ ಒಮ್ಮಿಗಿಲೆ ನಿಂಗಣ್ಣ ।
ದಿನ ದಿನಾ ಮೇವ ಕೊಯತಿದ್ಯೋ ।
ದಿನ ದಿನಾ ಮೇವ ಕೊಯತಿದ್ಯೋ-ನಿನಗಿಂದ ।
ಯಾತರ ಚಿಂತ್ಯೋ ಎಳಿ ಮಗಗ ||೨೧೧೧||

* * *

ಹಿಂಬsಡ ಹೆಚ್ಯೇತಿ ನಿಂಬೀ ಹೋಳಿನ್ಹಂಗ ।
ನೆತ್ತರಾ ಹರದೆ ಹರಿಯೇವ ।
ನೆತ್ತರಾ ಹರದೆ ಹರಿಯೇವ-ನೆಲಸುತ್ತ ।
ಕೆಂಪಾದೆ ಪಾದ ನಡ್ಡಗಲ ||೨೧೧೨||

ಟೇಕಿ ತಪ್ಪಲ ಹಿಂದೆ ತಂಬಲರಬೀ ಕಟ್ಟೈ ।
ಮುಂಗಾಲುರೂತು ನಡೆವೂನ ।
ಮುಂಗಾಲೂರೂತು ನಡೆವೂನ--ರಾತ್ರಿ ।
ಮೈಯೆಲ್ಲ ಕಾದೆ ಅಬತೆಬರಾ ||೨೧೧೩||

* * *

ಮೈಕಾದೆ ಹಂಚಾದೆ ಕಬರಿಲ್ಲ ಹದಗಡ್ಲೆ ।
ಗೆಜ್ಜ್ಯಾಗ ಬೆಟ್ಟಡಕಿ-ಹಂಗ ।
ಗೆಜ್ಜ್ಯಾಗ ಬೆಟ್ಟಡಕಿ-ಹಂಗ–ಎದ್ದೈತಿ ।
ಮನಿಯೇನ ಏನೈಂತಸಲಾಕ ||೨೧೧೪||

* * *

ಏನೈಂತ ಅನಲಾಕ ಮನಿಯೇನ ಬಿಳಗ್ಯೇನ ।
ತಾಯಿ ಮನಿಯಾಗ ತಳಗೇರ್ಯೆ ।
ತಾಯಿ ಮನಿಯಾಗ ತಳಗೇರ್ಯೆ--ಆಕೀಗ್ಯಾರ ।
ಕರುನಂತ ನಿಂಗ ತಿಳವವರ ||೨೧೧೫||

* * *

ನಾಕ್ಕೈದ ದಿನನಾದೆ ನೆವನ್ಯಾಕ ಅನುವೂರ ।
ಸಾಕಿನ್ನ ಹೋಗೋ ಹೊಲಕ್ಹೋಗೊ ।
ಸಾಕಿನ್ನ ಹೋಗೋ ಹೊಲಕ್ಹೋಗೊ-ದನಕರಕ ।
ಹುಲ್ಲಿಲ್ಲ ಮೂಳ ತರಪಿಳೋ ||೨೧೧೬||

* * *

ಮೂದಿಲ್ಲ ಗಾಯವ್ವ ಜೀತಕಿಟುಗೊಂಡವರ ।
ಇನ್ಯಾಳ್ಡ ದಿವಸ ತಡಿಲಿಲ್ಲ ।
ಇನ್ಯಾಳ್ಡ ದಿವಸ ತಡಿಲಿಲ್ಲ--ಕಳಿವ್ಯಾರ ।
ನಿಂಗನ್ನ ಹೊಲಕ ನಿಗ್ಗರಿಸ್ಯೆ ||೨೧೧೭||

* * *

ಕುಂಟ ಗಾಲೂರೂತ ಒಲ್ಲೆನದ ನಿಂಗಣ್ಣ ।
ಹೋಗ್ಯಾನ ಹೊಲಕ ಮುಟ್ಟ್ಯಾನ ।
ಹೋಗ್ಯಾನ ಹೊಲಕ ಮುಟ್ಟ್ಯಾನ–ಕಾಲೈಲ್ಲ ।
ನೋವಾಗಿ ಬಿಗದು ಮರಗಟಿ, ||೨೧೧೮||

ಮರಗಟ್ಟಿ ನೋವಾಗಿ ಬಿಗದ ಕಾಲs ತಾಯಿ।
ಬ್ಯಾಸರsವಾಗಿ ಬಿಸಲಾಗ।
ಬ್ಯಾಸರsವಾಗಿ ಬಿಸಲಾಗ–ನಡದ್ಹೋಗಿ।
ಮನಗ್ಯಾನ ನಿದ್ದಿ ನೆಳ್ಳಾಗ ॥೨೧೯॥

* * *

ಮನಗ್ಯಾನ ನಿದ್ದಿ ನೆಳ್ಳಾಗ ತಾಯವ್ವ।
ಹಾಂವೊಂದು ಬಂದು ಹರಕೊಂತ।
ಹಾಂವೊಂದು ಬಂದು ಹರಕೊಂತ–ಬಲಗಾಲ।
ಕಡದೈತೆ ನಿದ್ದೆ ಎಳಿ ಮಗಗ ॥೨೨೦॥

* * *

ಇಸನೇರ್ಶ್ಯ ತಾಯವ್ವ ಹಸಮಗ್ಗೆಚ್ಚರನೆಲ್ಶ್ಯ।
ಹುಲ್ಶ್ಯಲ್ಲೆ ಜೀತ ಜನಮೆಲ್ಲ್ಯ।
ಹುಲ್ಲ್ಯಲ್ಲೆ ಜೀತ ಜನಮೆಲ್ಲ್ಯ–ಬನ್ನೀಯು।
ಗಿಡದ ನೆಳ್ಳಾಗ ಹಣಿ ಲಿಪಿಯು ॥೨೨೧॥

* * *

ಬನ್ನೀಯು ಗಿಡಬುಡಕ ನೆಳ್ಳಾಗ ಹಣಿ ಲಿಪಿಯು।
ಇನ್ಶ್ಯಲ್ಲೆ ಜೀವ ಸಿಟ್ಟಾದೆ।
ಇನ್ಶ್ಯಲ್ಲೆ ಜೀವ ಸಿಟ್ಟಾದೆ–ದೈವದವ್ಯಾಲ।
ಜೀತಕಿಟಗೊಂಡ ಮನಿಯೊಡಿಯು ॥೨೨೨॥

* * *

ಕತ್ತಲಾದೇ ಶಿವನೆ ಹೊತ್ತ ಏರಿದ್ಯೇ ಶಿವನ।
ನಿಂಗsನ ನೆನಪ ಒಡಿಯಾಗ।
ನಿಂಗsನ ನೆನಪ ಒಡಿಯಾಗ-ಸಿಗೊ ನಿನಗ।
ಮೈ ಮುರಿ ಹೊಡದ ಕಲಿಸ್ಯೇನೋ ॥೨೨೩॥

* * *

ಮೈಮೂರಿ ನಾಹಣದ ಕಲಿಸೇನೋ ಬುದ್ಧೀನ।
ಅನುಕೊಂತ ಒಡಿಯು ಹೊಲಕ್ಹೋದ।
ಅನುಕೊಂತ ಒಡಿಯು ಹೊಲಕ್ಹೋದ--ಮನಗೀದ।
ನಿಂಗಣ್ಣಗೆಲ್ಲೆ ಹುಲ್ಲರವ ॥೨೨೪॥

ನೀನ ಕಳಿಸಿದ್ಯೋ ಹೊಲಕ ಹುಲ್ಹೊರಿ ತರಲಾಕ ।
ಮುಳವಾಡೆ ಜನಮು ಮನಿಯಾಗ ।
ಮುಳವಾಡೆ ಜನಮು ಮನಿಯಾಗ-ಇನ್ಯಾಳ್ಟ ।
ದಿನ ಬಿಟ್ಟರ್ಯಾಕೋ ಈ ದೆಸಿಯ ॥೨೧೨೫॥

* * *

ಮನಿಯಾಗ ಇನ್ಯಾಳ್ಡ ದಿನ ನಿದ್ದರೀ ದೆಸೆಯ ।
ನನಗ್ಯಾಕೋ ಒಡಿಯ ಅನಲಿಲ್ಲ ।
ನನಗ್ಯಾಕೋ ಒಡಿಯ ಅನಲಿಲ್ಲ-ನಿಂಗಣ್ಣ ।
ನೀಗ್ಯಾನ ಜನಮು ನಿಗ್ಗರಕ ॥೨೧೨೬॥

* * *

ನಿಂಗನ್ನ ತಂದಾರ ಮಣ್ಣಾರ ಕೊಟ್ಟಾರ ।
ತಾಯಿಗ್ಹೇಳ್ಯಾರ ತಿಳಿಮಾತ ।
ತಾಯಿಗ್ಹೇಳ್ಯಾರ ತಿಳಿಮಾತ-ಜೀತಕ್ಕ ।
ಇಟಗೊಂಡೊಡಿಯಾಗ ಉಗಳ್ಯಾರ ॥೨೧೨೭॥

* * *

ಮಾತಾಡಿ ಕೊಟ್ಯಾಗಿ ಮಾಡೋದ್ಯೇನ ತಾಯಿ ।
ಹ್ವಾದಂತ ಮಗನು ತಿರುಗsನು ।
ಹ್ವಾದಂತ ಮಗನು ತಿರುಗsನು-ಬರನಿಲ್ಲ ।
ಹಿಡಿತಾಯಿ ಜೀವ ಅಳಬ್ಯಾಡ ॥೨೧೨೮॥

* * *

ಜೀತಿಕಿಟಗೊಂಡಣ್ಣ ಮಲ್ಲಮ್ಮ ನೀ ಬಾರ ।
ಸಲುವೇನ ನಿನ್ನನುಗಾಲ ।
ಸಲುವೇನ ನಿನ್ನನುಗಾಲ-ನಿಂಗಣ್ಣನ ।
ಕೊಂದಾದೆ ಕೌತುಕ ಕರಣಿಲ್ಲ ॥೨೧೨೯॥

* * *

ನಿಂಗನ್ನ ಕೊಡರ್ಯೋ ನನ ಮಗನ ನಿಂಗನ್ನ ।
ಅನುವೊಳೋ ಅಳುವೊಳೋ ಆ ತಾಯಿ ।
ಅನುವೊಳೋ ಅಳುವೊಳೋ ಆ ತಾಯಿ-ನೆನಿನೆನಿಸಿ ।
ಬದುಕೀಗೆ ನೋಡs ನೆಲಿಯಿಲ್ಲ ॥೨೧೩೦॥

ಬದುಕೀಗೆ ನೀನೋಡ ನೆಲಿಯಿಲ್ಲ ದೊಡ್ಡವರ ।
ಮನದಾಗ ಕರಣ ತಟಗಿಲ್ಲ ।
ಮನದಾಗ ಕರಣ ತಟಗಿಲ್ಲ–ನಿಂಗಣ್ಣ ।
ನಿನಗಾದ ಸಾವ ಅವಸರದ ॥೨೧೩೧॥



## ಭೀತಿ

ಹೊರಗ ಹೋಗಲಿಬ್ಯಾಡೋ ನನಮಗನ ಹೊತ್ಯಾಳ್ಳೆ ।
ದುಡ್ಡೀನೊಡೆಯರಿಗೆ ಇಸನಿಲ್ಲೊ ।
ದುಡ್ಡೀನೊಡೆಯರಿಗೆ ಇಸನಿಲ್ಲೊ–ನಮ್ಮಂತ ।
ಬಡವರಿಗೆ ಮಗನ ಇಸನಾದ್ಯೊ ॥೨೧೩೨॥

* * *

ಒಳಗ್ಹೊಂಗ ಕಾಲಿಡಲಿ ಉಳ್ಳವರು ಮನಿಯವ್ವ ।
ನಡಮನಿ ನೂರ ದೀಪುಳ್ಳ ।
ನಡಮನಿ ನೂರ ದೀಪುಳ್ಳ–ಒಡಿಯಾಗ ।
ಬೇಡಿಕೋಳ್ಳೇನ ರುತಿನಿಲ್ಲ ॥೨೧೩೩॥

* * *

ದಮಣಿಗಾಡಿ ಬಂದೆ ದೂರಕ್ಕ ಸರಿ ತಂಗಿ ।
ನೋಡಿ ಗೀಡಿದರ ಎರವಾದೆ ।
ನೋಡಿ ಗೀಡಿದರ ಎರವಾದೆ–ನಮ ಜೀವ ।
ಸಿರಿ ಕಂಡ ಒಳಗ ಸರದಾರ ॥೨೧೩೪॥

* * *

ಕೋತಂಬರ್ಯಾತಕ್ಕ ಮತಿಯುಳ್ಳ ನನ ತಂಗಿ ।
ಕಾರ್‍ಯೆಣ್ಣಿ ತಿನ್ನು ಬಳಗಕ್ಕ ।
ಕಾರ್‍ಯೆಣ್ಣಿ ತಿನ್ನು ಬಳಗಕ್ಕ–ಬೇಡಿದರ ।
ಹೊಲದಣ ಅನ್ನೇಯ ಬಗದಾನ ॥೨೧೩೫॥

ಯಾಕ ಯಾಕಽ ಜೀವ ಕುದ ಕುದ್ದ ಸೊರಗ್ಯಾವ ।
ಬೆಳ್ಳಿ ಬಾಕಲದ ಮನಿಯವರ ।
ಬೆಳ್ಳಿ ಬಾಕಲದ ಮನಿಯವರ-ಕೈಯಾಗ ।
ಅಂಜ್ಯಂಜಿ ದುಡದಿ ಅಪರಾತ್ರಿ ||೨೧೩೬||

* * *

ಮೂರ್ಹಳ್ಳಿ ರಾಯಽರ ಕುದರಿ ಕುಣಿಪೂತ ಬಂತು ।
ಊರ ಹನುಮಪ್ನ ಗುಡಿಮುಂದ ।
ಊರ ಹನುಮಪ್ನ ಗುಡಿಮುಂದ-ಸನಮಗನ ।
ಅಡ್ಡಾಯಬ್ಯಾಡೋ ಕಣಕಿಸರೋ ||೨೧೩೭||

* * *

ಕಲಮನ್ಯಾರ್ಕಣದಾಗ ಕೂಲಿ ಕುಂಬಳಿ ಬ್ಯಾಡ ।
ಝುಲ್ಲಂದ ಜೀವ ಮುರತ್ಯಾಪಿ ।
ಝುಲ್ಲಂದ ಜೀವ ಮುರತ್ಯಾಪಿ-ಹೀನಽರ ।
ಮುಸುಕೀನ ಬಲಿಗೆ ಮನನೊಂದ ||೨೧೩೮||

* * *

ಕಬ್ಬೀನ ವನದಾಗ ಹುಚನಽರಿ ಹೊಕ್ಕಂಗ ।
ಬಡವಽರ ಮನಿಗೆ ಬಗ ಬಂಡಿ ।
ಬಡವಽರ ಮನಿಗೆ ಬಗ ಬಂಡಿ-ಬಂದಽರ ।
ಅಂಜಕೀಯ ನೋಡ ಚಣ ಚಣಕ ||೨೧೩೯||

* * *

ಗಚ್ಚೀನ ಮನಿಯಾಗ ಕಿವಿಮುಚ್ಚಿ ಬಾರಕ್ಕ ।
ಹೆಚ್ಚಳದ ಮನಿಯ ಒಳಮಾತ ।
ಹೆಚ್ಚಳದ ಮನಿಯ ಒಳಮಾತ-ಹೊರನುಡದ ।
ನುಚ್ಚ ನೂರಾತು ಮೈ ಎಲಬು ||೨೧೪೦||

* * *

ಕೈಯ ಮುಗಿಯೋ ಮಗನ ಐದಳ್ಳಿ ಒಡೆಯರಿಗೆ ।
ದೂರಿರತ ಕಂಡ ಮರಿಬ್ಯಾಡೋ ।
ದೂರಿರತ ಕಂಡ ಮರಿಬ್ಯಾಡೊ-ನೆನಪಿರಲ್ಯೋ ।
ಚಾವಡಿಗೆಳಸಿ ತುಳಿಸ್ಯಾರೋ ||೨೧೪೧||




## ಹಸಿವು

ಕಣಜಾ ಬೆಳೆದ ಮಗಗ ಉಣಲಾಕ-ಕೂಳಿಲ್ಲ ।
ಬೀಸಾಕ ಕವಣಿ ಬಲನಿಲ್ಲ ।
ಬೀಸಾಕ ಕವಣಿ ಬಲನಿಲ್ಲ–ಕೊಲ್ಯೆವರ ।
ಸುಡಬೇಕ ಜನಮ ಸುಖನಿಲ್ಲ ॥೨೧೪೨॥

* * *

ಮನಿ ಮಾನಿ ತಿರಗೇನಿ ಉಪ್ಪೀನ್ಹಳ್ಳಿಗೆ ತಾಯಿ ।
ಹೊಲಕ್ಹೋಗು ಮಗಗ ಅಡಲ್ಯೆಂದ ।
ಹೊಲಕ್ಹೋಗು ಮಗಗ ಅಡಲ್ಯೆಂದ–ಕಡನಿಲ್ಲ ।
ಹಿಡಿ ತುತ್ತಿಗೆಂದ ದಯಬನ್ಯೆ ॥೨೧೪೩॥

* * *

ಮೋಣೇವು ನಮಗ್ಯಾಕ ಮೋಟಿ ಮುಂದೀಗಿರಲಿ ।
ಹಣಿ ಬೆವರ ಹರಿಸಿ ತೇಕಿದರ ।
ಹಣಿ ಬೆವರ ಹರಿಸಿ ತೇಕಿದರ-ಸಿಗನೊಲ್ಯೆ ।
ತಂಗಾಳು ತುಕಡಿ ಹಂಗಿರದ ॥೨೧೪೪॥

* * *

ಪಾಲಿಷ್ಟ ಮಾಡೀದ್ರ್ಯೋ ದುಡದಣ್ಣಾಗ್ಹೊಲದವನ ।
ತಿಳಿನಿರಲೊ ನಮಗ ತಿನಲಾಕ ।
ತಿಳಿನಿರಲೊ ನಮಗ ತಿನಲಾಕ–ಬರುಸುಗ್ಗಿ ।
ಭಾಳ ದಿನ ಅಂಬೋ ಕರುಣಿರಲಿ ॥೨೧೪೫॥

* * *

ಉಣ್ಣವರು ಕಂಡಾರು ಕಾಗಿ ಮರಗೂ ಹಂಗ ।
ಮರಗ್ಯಾಪ್ರೋ ನಮ್ಮ ಜನಮಿಂದ ।
ಮರಗ್ಯಾಪ್ರೋ ನಮ್ಮ ಜನಮಿಂದ–ಹಸದ್ಹುಸದ ।
ಕೂಳ ಕೊಡೋ ಶಿವನ ಬಡವೀಗೆ ॥೨೧೪೬॥

ಕಸ ಮುಸರಿ ಮಾಡಿರುವು ಹಸವ ನಿಮಗೂಡ ತಾಯಿ ।
ಹೊತ್ತೊಳ್ಳಿದಿಂದ ಕೊಡಬ್ಯಾಡೆ ।
ಹೊತ್ತೊಳ್ಳಿದಿಂದ ಕೊಡಬ್ಯಾಡೆ–ಉಳಕಲಾ ।
ತುತ್ತರದ ಕೊಡರೆ ಉಣ್ಹೊತ್ತಿಗೆ ||೨೧೪೭||

* * *

ಹೆರವೋರ ಮನಿಯಾಗ ಸೆರಗೊಡ್ಡಿ ಬೇಡಿದರ ।
ಗತಿಯಿಲ್ಲ ನುಚ್ಚ ಮಜ್ಜಿಗೆಗೆ ।
ಗತಿಯಿಲ್ಲ ನುಚ್ಚ ಮಜ್ಜಿಗೆಗೆ–ಹಸದಾಗ ।
ಕೊಡರ್ಯೆನ್ನೆ ದುಡದ ಮುನಸ್ಯಾಕ ||೨೧೪೮||

* * *

ದೂರ ದಾರೀ ಹೊಲಕ ಮುಡುಲಕ-ಹ್ವಾದರ ।
ಹೆಚ್ಚ್ಯಾಕ ಕೂಳ ಅನುವೂರ ।
ಹೆಚ್ಚ್ಯಾಕ ಕೂಳ ಅನುವೂರ–ಜೀತಿದ್ದ ।
ಮನಿ ಯಾವ್ರ ತಾಯಿ ಮನನೊಂದ ||೨೧೪೯||

* * *

ಹಸದೇನೆ ಹಾಂವಾಗೆ ಹೊಸ ಹೊಲಕ ಮುಳ್ಳಚ್ಚಿ ।
ಮನಿ ಮುಟ್ಟುವ ತನಕ ಕಸಿವಿಸಿಯು ।
ಮನಿ ಮುಟ್ಟುವ ತನಕ ಕಸಿವಿಸಿಯು–ಹೊಲದಣ್ಣ ।
ತರಲಿಲ್ಲ ರೊಟ್ಟಿ ವಟಗುಟ್ಟಿ ||೨೧೫೦||

* * *

ಕಳ್ಳೀ ಸಾಲಿನ ತ್ವಾಟಕ್ಕುಳ್ಳೀ ಬಿತ್ತಾಕ್ಹೋಗಿ ।
ಹೊಡಮಳ್ಳಿ ಬನ್ಯೋ ಉಣಲಾಕ ।
ಹೊಡಮಳ್ಳಿ ಬನ್ಯೋ ಉಣಲಾಕ–ಹಬ್ಬಂದ ।
ಪುಡಿರೊಟ್ಟಿ ನೀಡಿ ಮುಗಿಸ್ಯಾರೋ ||೨೧೫೧||



## ಆಯು

ಹೊತ್ತೀಗೆ ಕೈಕೊಟ್ಟ ಅಕ್ಕs ಡೆಕ್ಕಡಿ ಕೋದೆ ।
ಬಿಳಿಜ್ವಾಳ ಮಗನ ಮೈ ಮುರದ ।
ಬಿಳಿಜ್ವಾಳ ಮಗನ ಮೈ ಮುರದ--ಕೋದsರ ।
ಕೆಂಜ್ವಾಳ ಕೂಳ್ಯೆ ಕಡಿಗಣದ ||೨೧೫೩||

* * *

ಮಟೆ ಮಟೆ ಮದ್ಯಾಣ ಗಂಟsಲ ಸೆಳಧಂಗ ।
ಕುಡಿಬೇಕ ರಾಡಿ ಕೆರಿನೀರ ।
ಕುಡಿಬೇಕ ರಾಡಿ ಕೆರಿನೀರ--ಬಡವsರ ।
ಹದಿನಾರ ಪಾಲ ತೊಳಿಹತ್ತ್ಯೆ ||೨೧೫೪||

* * *

ಹದನಾರ ನೀಪಾಲ ತೊಳಿ ಹತ್ತಿ ಮೈ ಕೈಯು ।
ಸುಟಗೊಂಡ ನಮಗ ದಯನಿಲ್ಲ ।
ಸುಟಗೊಂಡ ನಮಗ ದಯನಿಲ್ಲ–ಕರದಂಟ ।
ಕಂದವ್ವ ಬೇಡಿದರ ಕೊಡನಿಲ್ಲ ||೨೧೫೫||

* * *

ಹದಿನೈದ ದಿನಗೂಳು ಮದವಿ ಹಂದರದನ್ನ ।
ಹಂಡೆ ಬಂಡೇವ ಬೆಳಗಿದರ ।
ಹಂಡೆ ಬಂಡೇವ ಬೆಳಗಿದರ--ನಮಗುಂಟ ।
ತಳಗಾಣು ಕರಕ ಹಿಡಿಯನ್ನ ||೨೧೫೬||

* * *

ಮೈಲೀಗಿ ಮಡಿ ತೊಗುವೊಂಡ ಹ್ವಾದsರ ।
ಒಳಗಾಗು ಮುಟಗಿ ಬಡರೊಟ್ಟಿ ।
ಒಳಗಾಗು ಮುಟಗಿ ಬಡರೊಟ್ಟಿ--ಕೊಡವೂರ ।
ಕೈರೊಟ್ಟಿ ತಿನ್ನು ಕುಲದವರ ||೨೧೫೭||

ಮೋಟಿ ಒಕ್ಕಲದಣ್ಣ ವರವರಸ ದುಡದೇನೋ ।
ನಾವ್ನಿವ್ಮ ಮನಿಯ ಬಡಿಗ್ಯಾರೋ ।
ನಾವ್ನಿವ್ಮ ಮನಿಯ ಬಡಿಗ್ಯಾರೊ-ಆಯಂತ ।
ಇನ್ಯಾಳ್ಡ ಪಡಿ ಕೊಡು ನಮಗ ||೨೧೫೭||

* * *

ಕೊಡವೂದು ಹೆಚ್ಚಿನರಿ ಪಡದ ಬಂದೀರೊಡಿಯ ।
ಹೊಲಿಮಗಗ ಕೊಡರಿ ಪಡಿಗಾಳ ।
ಹೊಲಿಮಗಗ ಕೊಡರಿ ಪಡಿಗಾಳ-ಜೋಡ್ಯೆದ ।
ಹಚ್ಚೇನರಿ ತಂದಿ ಹರಮುರಕ ||೨೧೫೮||

* * *

ಹನ್ಯಾಳ್ಡ ಚಿಬ್ಬಲಾ ಇನ್ಯಾಳ್ಡ ಹುಲಿಬುಟ್ಟಿ ।
ಹೆಣದ ತಂದ್ಯೇನೆ ತಾಯವ್ವ ।
ಹೆಣದ ತಂದ್ಯೇನೆ ತಾಯವ್ವ-ಎಡ್ಗೊತ್ತ ।
ಉಣಲಾಕ ಕೊಡಿರಿ ಉಳಿಗಾಳ ||೨೧೫೯||

* * *

ಸಡಗರೇನ್ಹೇಳಲಿ ವಾಡೇದವರ ಮನಿಯ ।
ಪಡಗಲ್ಲ ಕಟ್ಟಿ ಕಲ್ಯಾಳ್ಡ ।
ಪಡಗಲ್ಲ ಕಟ್ಟಿ ಕಲ್ಯಾಳ್ಡ-ಕೊಟ್ಟರ ।
ನೆನಿನಿಲ್ಲ ಗೆಣತಿ ನಿನ ಸೀರೆ ||೨೧೬೦||

* * *

ಅಂಗಳ ಹೊಡದೇನಿ ತಿಂಗಳ ಹನ್ಯಾಳ್ಡ ।
ದೊರಿ ನಿಮ್ಮ ಬಂದ ಬಾಕಲಕ ।
ದೊರಿ ನಿಮ್ಮ ಬಂದ ಬಾಕಲಕ-ಕೊಡಿರೆಯ್ಯ ।
ಉಡು ಸೀರೆ ಹರಿದ ಅನ್ನವರ ||೨೧೬೧||



## ಕೂಲಿ

ಮುಂಜ್ಯಾಲೆದ್ದ ಹೋಗಿ ಮೂಲಂಗ್ಯೊಜ್ಜೀಮ್ಮಾಡಿ ।
ಹುಬ್ಬಳ್ಳಿ ಪ್ಯಾಟೀಗೆ ಹೊತುಗೊಂಡ ।
ಹುಬ್ಬಳ್ಳಿ ಪ್ಯಾಟೀಗೆ ಹೊತುಗೊಂಡು ಹ್ವಾದಽರ ।
ಅರಪಾವು ಕೂಲಿ ತಳಗಾಳಽ ||೨೧೬೨||

* * *

ಬೆಳ್ಳಿ ಮೂಡೂ ಮುಂಚೆ ಹಳ್ಳಽದ ಸೀಮ್ಯಾನ್ನ ।
ಹೊಲದಾಗ ಹೊರಿ ಹೊರಿಯು ಗೋದೀನ ।
ಹೊಲದಾಗ ಹೊರಿ ಹೊರಿಯು ಗೋದೀನ-ಕಿತ್ಯಾಳ್ಡ ।
ನಳಿಗೀಗೆ ಕೂಲ್ಯಾದೆ ತೂಪರಿಹುಲ್ಲ ||೨೧೬೩||

* * *

ಹಕ್ಕಽಲಾ ಆರೀಸೆ ಮುಕ್ಕಽ ನೀರನ ಕುಡದ ।
ಒಕ್ಕಽಲ ಹೊಲದವರ ಬಿಟ್ಟ್ಯಳದ ।
ಒಕ್ಕಽಲ ಹೊಲದವರ ಬಿಟ್ಟಳದ-ತೆನಿಯವ್ವ ।
ನೋಡೇನೆ ಕುಟ್ಟಿ ಗಿರಪಾವ ||೨೧೬೪||

* * *

ಮೂರ ಬಂಡೀಕಾಳ ಹೊಲದ ನಿಟ್ಟೀಗ್ಹಚ್ಚಿ ।
ಬರುವಾಗ ನಾ ಹೊಳ್ಳಿ ತಾಯವ್ವ ।
ಬರುವಾಗ ನಾ ಹೊಳ್ಳಿ ತಾಯವ್ವ-ತರತ್ಯೇನ ।
ಹರಕಂಗಿ ಕೂಲೀಗೆ ಬದಲ ||೨೧೬೫||

* * *

ಗಿಂಡಿ ಮಜ್ಜಿಗಿ ಬೇಡ್ಯೆ ತರಲಾಕ ಹ್ವಾದಽರ ।
ಚಿಟ್ಟೇಯ ಶೆಂಡಿಗಿ ಇಡಿಸ್ಯಾರ ।
ಚಿಟ್ಟೇಯ ಶೆಂಡಿಗಿ ಇಡಿಸ್ಯಾರ-ಕೈಸೋತ ।
ಬಂದೆ ನಾ ಮನಿಗೆ ಮದ್ದಿನಕ ||೨೧೬೬||

ಜಲ್ಲಿ ಜಲ್ಲೀತುಂಬ ಚವಳೀ ಕಾಯ್ದುರದೇನಿ ।
ಹೊಲದವ್ವ ನೀನನಗ ಕೂಲ್ಯೆಷ್ಟ ।
ಹೊಲದವ್ವ ನೀ ನನಗ ಕೂಲ್ಯೆಷ್ಟ–ದಯ ಇರಲಿ ।
ಮನಿ ಬಾಲಗಕ್ಕೆ ಬಾವಿಕ್ಯಾದೆ ॥೨೧೬೭॥

* * *

ದೇಶ ದೇಶದಲೆಲ್ಲಾ ಪಡಿಕಾಳ ಕೂಲ್ಯಾದೆ ।
ನಮೂರಿಗ್ಯಾಕ ಕಡಿಮೆವ್ವ ।
ನಮ್ಮೂರಿಗ್ಯಾಕ ಕಡಿಮೆವ್ವ–ನಮಗ್ಯೇನು ।
ಮಕ್ಕಳಿಲ್ಯೇನ ಮನಿತುಂಬ ॥೨೧೬೮॥

* * *

ಹಿತ್ತಲಗ್ವಾಡಿ ಹ್ವಾರೆ ಹತ್ತ್ಯೆದ ದಿನ ಮಾಡ್ಯೆ ।
ಕೂಡಿರೆಂದ ನಾ ಕೂಲಿ ಕೇಳ್ಯೇನ ।
ಕೂಡಿರೆಂದ ನಾ ಕೂಲಿ ಕೇಳ್ಯೇನ–ಬರುಸುಗ್ಗಿ ।
ಬರಲ್ಹೋಗ ಕೊಡುವಿನೆಂದಾರ ॥೨೧೬೯॥

* * *

ಹತ್ತಿ ಅಂಡಿಗಿ ಮೆಟ್ಟೆ ಹದಿನೇಳು ದಿನವಾಯ್ತು ।
ದೊಡ್ಡs ಗೌಡರ ಮನಿಯಾಗ ।
ದೊಡ್ಡsಗೌಡರ ಮನಿಯಾಗ–ಕೂಲ್ಯಿಲ್ಲೊ ।
ಮಾರಿಬಂದಿಂದ ಬರಹೋಗೋ ॥೨೧೭೦॥

* * *

ಕೌದಿ ಹೊಲದೇನಮ್ಮ ಹೌದ್ವಾದ ಅನಬೇಕ ।
ಮಳಕೊಂದ ರೊಟ್ಟಿ ಭಾಳೇನ ।
ಮಳಕೊಂದ ರೊಟ್ಟಿ ಭಾಳೇನ–ತಾಯವ್ವ ।
ಮನಿಯಾಗ ಬಳಗ ನನಗಿದಿಯ ॥೨೧೭೧॥



# ಬಡತನ

ಬಡವರನ್ನ್ಯಾರನ್ಯಾಕ ಬಯಲೀಗೆಳದ್ಯೋ ಶಿವನೆ ।
ಕರಮಕ್ಕ ನೀಯಾಕ ಕಳಿಸೀದ್ಯೋ ।
ಕರಮಕ್ಕ ನೀಯಾಕ ಕಳಸೀದ್ಯೋ–ಬತಿಗೆಟ್ಟ ।
ಹುಟ್ಟಿಸೀದ್ಯಾಕೊ ಮತ ಮತ್ತ ||೨೧೭೨||

* * *

ಅಡಿವ್ಯಾಗ ಹೊಲನಿಲ್ಲ ಊರಾಗ ಮನಿನಿಲ್ಲ ।
ದುಡಿ ಮುರಿ ತಿಂದ ಬದಕಿದರ ।
ದುಡಿ ಮುರಿ ತಿಂದ ಬದಕಿದರ-ಸರಿನಿಲ್ಲ।
ಊರ ಮುಂದ್ಯಾಗ ಎಣಿಕಿಲ್ಲ ||೨೧೭೩||

* * *

ತಂದ ತಿನ್ನೂವಂದ ಹಂದರಕ ಕರೂದಿಲ್ಲ ।
ಮುಂದ್ಯಾಗ ಮಗನ ನಮ ಮನಿಗೆ ।
ಮುಂದ್ಯಾಗ ಮಗನ ನಮ ಮನಿಗೆ–ಇನ್ನೈಸ ।
ಜನಮಕ್ಕ ಹಂಗ ದೊರಿತನದ ||೨೧೭೪||

* * *

ಅಣ್ಣಾ ನಿನ್ನಽಮಗಳ ಹೊನ್ನಾಳ್ಳರ ಮನಿತನಕ ।
ಕೊಟ್ಟ್ಯಽ ಕೊಲಬ್ಯಾಡೋ ನನಮಗ್ಗ ।
ಕೊಟ್ಟ್ಯಽ ಕೊಲಬ್ಯಾಡೋ ನನಮಗ್ಗ–ನಿನ್ಮಗಳಽ ।
ಒಲದ ಒರಸಽದ ತಿಳಿನೋಡ ||೨೧೭೫||

* * *

ದೊರಿ ನಿಮ್ಮ ಮನಿಯಾಗ ದೊಣ್ಣಿ ದೊಣ್ಣಿ ತುಪ್ಪ ।
ದೂರ ದೇಶಽದ ಎಳಿಬೆಲ್ಲ ।
ದೂರ ದೇಶಽದ ಎಳಿಬೆಲ್ಲ–ನೋಡಿದರ ।
ತೆಳ್ಳಂಬಲಿ ನನಗ ಮರವಾದೆ ||೨೧೭೬||

ಜಾತsರಿ ಬಂದೈತಿ ಊರ ದೇವರ ತಾಯಿ ।
ಉಣಲಿಲ್ಲ ನವುಗ ಸಿಂವಿ ಅಡಿಗಿ ।
ಉಣಲಿಲ್ಲ ನವುಗ ಸಿಂವಿ ಅಡಿಗಿ-ಉಡನಿಲ್ಲ ।
ದಿಂಡಿಲ್ದ ಸೀರ್ಯೆ ದೈಯವಕ್ಕ ॥೨೧೭೭॥

* * *

ನಾಯೀನ್ಯಾತಕ ಬೇಕೋ ಸಾಕಾಕ ಚಿಕ್ಕಣ್ಣ ।
ಉಂಡs ರುಳಿಯುsಲ್ಯೋ ಬಳಗsದ ।
ಉಂಡs ರುಳಿಯುsಲ್ಯೋ ಬಳಗsದ-ಬಾಗೆವಕ ।
ಹಾಲ ಬೇಡಿದರ ನಗೆಗೀಡ ॥೨೧೭೮॥

* * *

ಕೋಡಿ ಬರವುಪ್ಪsಗ ಬೇಡಿಕೊಂಡ್ಯಾಕ ವುಗನ ।
ಅಡನಿಲ್ಲದಾಗ ಕಡನ್ಯೆಲ್ಲಿ ।
ಅಡನಿಲ್ಲದಾಗ ಕಡನ್ಯೆಲ್ಲಿ-ಹರಕೀಗೆ ।
ಬಾಯ್ಯೆಲ್ಲಿ ತಗದ ತರತಿದ್ಯೋ ॥೨೧೭೯॥

* * *

ಸೇರ ಸುಣ್ಣವ ತಂದು ಹಚ್ಚೀನ್ಯೆಂದsದಿಲ್ಲ ।
ಗ್ವಾಡಿ ಕವುಟsದೆ ನನವುಗನ ।
ಗ್ವಾಡಿ ಕವುಟsದೆ ನನವುಗನ-ಹಬ್ಬಕ್ಕ ।
ಕರತಂದೆ ತಂಗಿ ಗುಡಲ್ಯೇನ ॥೨೧೮೦॥

* * *

ರೊಟ್ಟಿ ವೂಡೇನ್ಯೆನ್ನೆ ಸಿಕ್ಕsರ ಹಿಡಿಜ್ವಾಳ ।
ಸಿಟ್ಟಾಗ ಬ್ಯಾಡ ಅಟಗೋಳೋ ।
ಸಿಟ್ಟಾಗ ಬ್ಯಾಡ ಅಟಗೋಳೊ-ದನಗೂಳ ।
ತಿನ್ಹೋಗೋ ತ್ವಾಟ್ದ ಹುಳಿಗಾಯ ॥೨೧೮೧॥



## ಎರೆನಾಡ ದೊರೆ

ನಾಡs ನಡಕಿನ ಕಣಕ ಹಡದವ್ವ ಹೋↄಗ್ಯಾನ ।
ಗುಡಿಗಟ್ಟಿ ಗಡಿಗೆ ನನ ಮಗನ ।
ಗುಡಿಗಟ್ಟಿ ಗಡಿಗೆ ನನ ಮಗನ–ಕುಡಿಲೆಂದ ।
ಕೆಡಕ ಬಗದವರ ಎದಿರಗತ ||೨೧೮೨||

* * *

ಹತ್ತಿ ಬೆಳೆಯುವರಿಲ್ಲ ಹೊತ್ತಿಗ್ಯಾಗ್ಹೋↄಗ್ಯಾರ ।
ಹೊತ್ತ ನೆಲದವಳ ಸುತ್ತೊರದ ।
ಹೊತ್ತ ನೆಲದವಳ ಸುತ್ತೊರದ–ಮುತ್ತೀↄಗಿ ।
ಇತ್ತವರ ಗೆದ್ದ ನಗಿ ಹೊದ್ದ ||೨೧೮೩||

* * *

ಹೊರಗೆಳದ ಕತ್ತೀↄನ ಬೆರಗಾಗಿ ತಿರಿಗ್ಯಾನ ।
ಶಿರಬಾಗಿ ರಣಕ ಚಣ ಚಣಕ ।
ಶಿರಬಾಗಿ ರಣಕ ಚಣ ಚಣಕ–ಚೆಂಡಾಡ ।
ಚಲುವ ಗೆಲಿದಾನ ದೊರಿನಾಡ ||೨೧೮೪||

* * *

ಮಲ್ಲೀↄಗಿ ಮುಡಿಬಿಟ್ಟ ಜನುಮಾನ ಅಡುವಿಟ್ಟ ।
ಸೆಲ್ಲೇↄದ ಸೆರಗ ತೊಡದಿಟ್ಟ ।
ಸೆಲ್ಲೇↄದ ಸೆರಗ ತೊಡದಿಟ್ಟ–ತೆಳುಮಗನ ।
ಭಲ್ಲಿಲ್ಲೈನಾಡ ಗೆಲ್ಲಿದನ ||೨೧೮೫||

* * *

ಕುಂಕುಮ್ಯಾರ್ಹ್ಯಾರ ನೆಲಕ್ಯಾರ ಕೊಚ್ಯಾರ ।
ಸಂಕ್ರಾತ್ರಿ ಮುಂದ ನಾಡಾಗ ।
ಸಂಕ್ರಾತ್ರಿ ಮುಂದ ನಾಡಾಗ–ನೆತ್ತರದ ।
ಕಂಪುಂಡ ಕತ್ತಿ ಕಂಡಾವ ||೨೧೮೬||

ಕಾಳಿ ನೀ ಊಬ್ಯಾವ ಬಾಳ ಬಗಿ ಹರದಾವ ।
ನಾಳೆ ನಮ್ಮೂರ ನಡದಾರಿ ।
ನಾಳೆ ನಮ್ಮೂರ ನಡದಾರಿ–ತೆರವಾದೆ ।
ಹೊಳಿ ರಗತ ತುಂಬಿ ರಣನಾಡೆ ॥೨೧೭॥

* * *

ಆರೂತಿ ನೀನೆತ್ತ ಮೂರೂತಿ ಕುಲದಂವಗ ।
ಕೀರೂತಿ ಗೆದ್ದ ನಲುವವಗ ।
ಕೀರೂತಿ ಗೆದ್ದ ನಲುವವಗ–ನೆತ್ತರದ ।
ನೀರ-ನದಿ-ಕಂಡ-ನಗಿ ನುಂಡ ॥೨೧೮॥

* * *

ಕೊಡಲಿಯ್ಯೆಪಾರೆತ್ತಿ ನಾಡ್ಕ ಬ.ಗಲ ಸುತ್ತಿ ।
ಕೋಡಿ ಹರಿಸ್ಯಾರ ನೆತ್ತರದ ।
ಕೋಡಿ ಹರಿಸ್ಯಾರ ನೆತ್ತರದ–ಚತ್ತರಗಿ ।
ಹಿಡಿದಾರ ಆಡಿ ರಣಗದನ ॥೨೧೯॥

* * *

ಹೊಸ ಬಂದ ನೀ ಸೊಸಿಗೆ ಕುಸು ಕುಸು ಅಳುವ್ಯಾಕ ।
ಯಶವಂತ ಒಡಿಯ ನಿನ್ನವನ ।
ಯಶವಂತ ಒಡಿಯ ನಿನ್ನವನ–ಹಾಡೇಳ ।
ಈ ಸಂದ ನೆತ್ತರ್ಹೊಳಿಯಾಗ ॥೨೯೦॥

* * *

ನೆತ್ತರಾ ನೀ ಕಲಿಸಿ ಮುತ್ತ್ಯಾರ ಕೊತ್ತ್ಯಲ ।
ಎತ್ತರಕ ಮತ್ತ ಗುಡಿ-ನಿಟ್ಟ ।
ಎತ್ತರಕ ಮತ್ತ ಗುಡಿನಿಟ್ಟ–ಒತ್ತರಿಸಿ ।
ಒಲದ ಬರುವಾಗ ಜಯದೇವಿ ॥೨೯೧॥

* * *

ಎರಿನಾಡ ದೊರಿ ನಮ್ಮ ಹಿರಿದಾನ ಒರಿಗತ್ತಿ ।
ಸುರಿಸ್ಯಾನ ಸುತ್ತ ನೆತ್ತರನ ।
ಸುರಿಸ್ಯಾನ ಸುತ್ತ ನೆತ್ತರನ–ನಗಿ ನಗಿಸಿ ।
ನೆಲ್ಲ್ಯಾರನಾಡ ಜಯಿಸ್ಯಾನ ॥೨೯೨॥

## ದುಃಖ

ಹಬ್ಬಽವ ಮಾಡಿದರ ತಳಲವ್ವ ಬಾಗಿಲಕ ।
ಬಿತ್ತಿದರ ಕಬ್ಬ ಬೆಲ್ಲವ್ವ ।
ಬಿತ್ತಿದರ ಕಬ್ಬ ಬೆಲ್ಲವ್ವ–ಬರುವಾಗ ।
ಮನನೊಂದ ಬಂದೆ ಕಣ್ಣೀರ ||೨೧೯೩||

* * *

ಹಾಳ ಹಂಪ್ಯಾಗವ್ವ ಯೋಽಳ್ಯೆಂಟು ದಿನನಿದ್ದ ।
ಮೂಳ ಮೂಳನ್ನ ಗುಡಿನೋಽಡಿ ।
ಮೂಳ ಮೂಳನ್ನ ಗುಡಿ ನೋಽಡಿ–ತಂಗೆವ್ವ ।
ದಿನಕೆಷ್ಟ ಬಂದ್ಯೆ ಕಣ್ಣೀರ ||೨೧೯೪||

* * *

ಅರಿಸಿಣದು ಪುಡಿನಿಲ್ಲ ಸಂಬಾರ ಸಾಸ್ವಿಲ್ಲ ।
ಪಲ್ಲೇಕ ತಾಯಿ ಕಡಿಮನಿಯು ।
ಪಲ್ಲೇಕ ತಾಯಿ ಕಡಿಮನಿಯು–ಹುಡಗೂರ ।
ಕೈರೊಟ್ಟಿ ನೋಽಡ್ಯೆ ಕಳವಽಳ ||೨೧೯೫||

* * *

ಕುಟ್ಟಾಕ ತೆನಿಇಲ್ಲ ಅಟ್ಟೇನೆಂದರಿಲ್ಲ ।
ತಾಯವ್ವ ಚಪ್ಪರದ ಮನಿಯು ।
ತಾಯವ್ವ ಚಪ್ಪರದ ಮನಿಯು–ಕಂಡಽರ ।
ಇಳದಾವ ಕಣ್ಣ ಹನಿ ನಮ್ಮ ||೨೧೯೬||

* * *

ಹುಟ್ಟೇರೂ ಕೂಸೀಗೆ ಕಟ್ಟಾಕು ಕುಂಚಿಗಿಯು ।
ತೊಡಸಾಕ ಅಂಗಿ ಹಳಿನಿಲ್ಲ ।
ತೊಡಸಾಕ ಅಂಗಿ ಹಳಿನಿಲ್ಲ–ಕೊರವಽರ ।
ಕೂಸ ನೋಽಡಿದರ ಕುದಿ ಬಂದ್ಯೆ ||೨೧೯೭||

## ಸ್ವಾತಂತ್ರ್ಯ

ಗಾಳಿಗಲ್ಲಾಡೂವ ಅಳ್ಳೀಯ ಎಲಿಹಾಂಗ ।
ಗೂಳೀ ವ್ಯೈಯವನ ನನ ಮಗನ ।
ಗೂಳೀ ವ್ಯೈಯವನ ನನ ಮಗನ-ಬಾಳೀಳೋ ।
ಒಳಗೊಂಡ ಜಯದ ಸಿರಿದೇವಿ ||೨೧೯೮||

* * *

ನಾಳೆ ನನ್ನ ಜನುಮ ಊಳೀಗಾ ಮಾಡsದ ।
ತಿಳಕೊಂಡ ಸೇವಿ ಸಂಕಟವ ।
ತಿಳಕೊಂಡ ಸೇವಿ ಸಂಕಟವ-ಗೆಳತೆವ್ವ ।
ಗೋಳಾಟವೇನ ಊಳಿಗದ ||೨೧೯೯||

* * *

ಸುಳಿಬಾಳಿ ಎಲಿ ಹಂಗ ನಳನಳಿಸಿ ಹೊಳದಾವ ।
ಎಳಿಮಾರಿ ನಮ್ಮ ಮಕ್ಕಳವ ।
ಎಳಿಮಾರಿ ನಮ್ಮ ಮಕ್ಕಳವ-ಸವಿಯುಂಡ ।
ಸೊತಂತರ ನಾಡ ಮನಿಯಾಗ ||೨೨೦೦||

* * *

ಈದೆಮ್ಮಿ ಕರಕೆಲ್ಲೆ ಹೊಟ್ಟೆತುಂಬಾ ಹಾಲ ।
ನಾದೂನಿ ನಾಡಿಗೆಲ್ಲೀದ ।
ನಾದೂನಿ ನಾಡಿಗೆಲ್ಲೀದ-ಸೆರಿಸಿಕ್ಕ ।
ಮುದಗಾಲ ಮತ್ತ ಜೇಡಿದರ ||೨೨೦೧||

* * *

ಕಗ್ಗ ಬೆಳಸೀನಿರಲಿ ಅಗ್ಗ ಅನಗಾಲಿರಲಿ ।
ಒಗ್ಗೂಡಿ ಇರಲಿ ದೊರಿನಾಡ ।
ಒಗ್ಗೂಡಿ ಇರಲಿ ದೊರಿನಾಡ-ತಾನಾಗಿ ।
ಸಗ್ಗsಕ ಹುತ್ತ ಉಣ್ಣಿಸುತ ||೨೨೦೨||

# ಅಲ್ಲೊಂದು-ಇಲ್ಲೊಂದು

ಗುಬ್ಬಿ ನಸ ಕಂದಯ್ನ ಗೆಜ್ಜಿ ಸಪ್ಪಳ ಕೇಳಿ ।
ನಿಬ್ಬಽಣದೆತ್ತು ಬೆದರ್ಯಾವು ।
ನಿಬ್ಬಽಣದೆತ್ತು ಬೆದರ್ಯಾವು–ಬೆಟ್ಟಸೇರಿ ।
ಮದ್ಯಾಣ್ದ ಮೇವು ಮರತಾವು ॥೨೨೦೩॥

* * *

ಜಾತ್ರೀಗೆ ಹೋಗ್ತೀನಿ ದವನಽವ ತರ್ತೀನಿ ।
ಹೂವ ತರ್ತೀನಿ ತುರುಬೀಗೆ ।
ಹೂವ ತರ್ತೀನಿ ತುರುಬೀಗೆ–ಅತ್ತೀಯ ಮಗಳಿ ।
ಬಂದಿ ತರ್ತೀನಿ ಬಲಗೈಗೆ ॥೨೨೦೪॥

* * *

ಮುಡುಕು ತೊರೆ ಚಂದ ಹಿಂದ್ಲ ಮಂಟಪ ಚಂದ ।
ಲಳ ಲಳನೆ ಹರಿವ ನದಿ ಚಂದ ।
ಲಳ ಲಳನೆ ಹರಿವ ನದಿ ಚಂದ-ಪಾರ್ವಽತಿ ।
ಅರಿಷಿಣದ ಸೀರೆ ನೆರಿ ಚಂದ ॥೨೨೦೫॥

* * *

ನಂಜಽನ ಗೂಡಡಿಕೆ ಮೈಸೂರ ಬಿಳಿ ಎಲೆ ।
ಹಾಕ್ತಽ ಹೋಗ್ತಾರ ದೊರಿಮಕ್ಳು ।
ಹಾಕ್ತಽ ಹೋಗ್ತಾರ ದೊರಿಮಕ್ಳು–ತಮ್ಮಯ್ಯ ।
ಆಡ್ತಽ ಹೋಗ್ತಾರ ಅರಮನಿಗೆ ॥೨೨೦೬॥

* * *

ಹಳ್ಳಽ ದಲ್ನಂಜನ್ಗೂಡು ತಿಟ್ಟಲ್ಲಿ ಬೆಂಗ್ಳೂರು ।
ವಜ್ರ ಮಾಣಿಕದ ಮೈಸೂರು ।
ವಜ್ರ ಮಾಣಿಕದ ಮೈಸೂರು–ಮೂಡ್‌ಜೋರಿ ।
ಗುಗ್ಗರದ ತೇರು ಹರಿದಾವು ॥೨೨೦೭॥

ಮಂಕಯ್ಯ ಮರುಳಯ್ಯ ಪಂಚ ಮುಖದ ಸಿದ್ಧಯ್ಯ ।
ಚಿಂತೀಯ ಬಿಡಿಸೋ ನನ ಗುರುವೆ ।
ಚಿಂತೀಯ ಬಿಡಿಸೋ ನನ ಗುರುವೆ-ರೇವಣ್ಣ ।
ನಿನ ಕಾಂತಿಗಾರೂತಿ ಬೆಳಗೇನೋ ||೨೨೦೮||

* * *

ಮೈಸೂರು ಸುತ ಮುತ್ತ ಸಾಲು ತೆಂಗಿನ ಮರವು ।
ಓಲಾಡಿ ಬೆಳೆದ ಗಜನಿಂಬೆ ।
ಓಲಾಡಿ ಬೆಳೆದ ಗಜನಿಂಬೆ-ಘಮನಕೆ ।
ಗೂಡು ಕಟ್ಟಿದವು ಅರಗೀಣಿ ||೨೨೦೯||

* * *

ಕಳಲೆ ಅನ್ನೋದು ಕಲ್ಯಾಣ ಪಟ್ಟಣ ।
ಅದಕ ಚಿನ್ನದ ಒಳಬೀಗ ।
ಅದಕ ಚಿನ್ನದ ಒಳಬೀಗ-ಹೊರಬೀಗ ।
ಅಲ್ಲಿ ರೇವಯ್ಯ ನೆಲೆಗೊಂಡ ||೨೨೧೦||

* * *

ಹಾದಿ ಹದಿನೈದು ಬೀದಿ ಬೆಂಗಳೂರು ।
ಮಾರ್ಗ ಬಲು ಚಂದ ಮೈಸೂರು ।
ಮಾರ್ಗ ಬಲು ಚಂದ ಮೈಸೂರು-ಬೀದೀಲಿ ।
ಚಲ್ಲಿ ಮಾರಿವೋ ಬಿಳಿಯೇಲೆ ||೨೨೧೧||

* * *

ಊರ್ ಚಂದ ಕಳಲೆ ನೀರ್ಕ ಚಂದ ಕಪ್ಪುಗೆರೆ ।
ದೇವರು ಚಂದ ಮರುಳಯ್ಯ ।
ದೇವರು ಚಂದ ಮರುಳಯ್ಯ-ಮಂಡೆ ಮೇಲೆ ।
ಹೂ ಚಂದ ಹೊನ್ನ ಕಣಗೀಲೆ ||೨೨೧೨||

* * *

ಮೈಸೂರು ಮಲ್ಲೀಗೆ ಮೊಳಿಗೆ ಮುಗಂಡುಗ ।
ನಾಡೆಲ್ಲ ಹಬ್ಬಿ ಘಮ್ಮಂದೊ ।
ನಾಡೆಲ್ಲ ಹಬ್ಬಿ ಘಮ್ಮಂದೊ-ಮೈಸೂರು ।
ಊರಿಗೊಂದು ಹೆಸರ ಪಡೆದಾದೊ ||೨೨೧೩||

ಕೋರೇರೋ ನೇದಾರೊ ಕೊಡಮುಕ್ಕ ನೂತಾರೊ ।
ಬೆಳ್ಳಿ ಕಡ್ಡಿಲಿ ಬೆದೆ ವಡೆದು ।
ಬೆಳ್ಳಿ ಕಡ್ಡಿಲಿ ಬೆದೆ ವಡೆದು–ನೇದಾರೋ ।
ಸ್ವಾಮಿ ರೇವಯ್ನ ರುಷಿಕಂತೆ ॥೨೨೧೪॥

* * *

ಮಾತೀಗೆ ಮೈಸೂರು ನೋಟಕ್ಕಂಜನ ಗೂಡು ।
ಬೆಡಗಿನ ಸೀಮೆ ಬೆಂಗಳೂರು ।
ಬೆಡಗೀನ ಸೀಮೆ ಬೆಂಗಳೂರು–ಬೀದೀಲಿ ।
ಮುತ್ತೀನ ಕಲ್ಲು ಬಿರಿದಾವೋ ॥೨೨೧೫॥

* * *

ಹಸುಮಕ್ಕನೇದಾರೋ ಸೊಸೆ ಮಕ್ಕ ನೂತಾರೊ ।
ಚಿನ್ನzದ ಕಡ್ಡೀಲಿ ಬೆದೆ ವಡೆದು ।
ಚಿನ್ನzದ ಕಡ್ಡೀಲಿ ಬೆದೆ ನಡೆದು–ನೇದಾರೊ ।
ಸ್ವಾಮಿ ರೇವಯ್ನ ರುಷಿಕಂತೆ ॥೨೨೧೬॥

* * *

ನಿಂಬೇಹಣ್ಣಾಗಿ ತುಂಬೇತಿ ನಮ್ಮೂರು ।
ರಂಭೇರಾಡೂದು ಮೈಸೂರು ।
ರಂಭೇರಾಡೂದು ಮೈಸೂರು–ಬೀದೀಲಿ ।
ಗೊಂಬೇಯ ತೇರು ಹರಿದಾವು ॥೨೨೧೭॥

* * *

ಕೆರೆಯ ಕೋಡೀಲಿ ಹದಿನೆಂಟು ಬ್ರಾಹ್ಮಣರು ।
ಜಲದಲ್ಲಿ ನೀರ ಮೊಗೆಯುವಳ ।
ಜಲದಲ್ಲಿ ನೀರ ಮೊಗೆಯುವಳ–ಬಾಲೆಯ ಕಂಡು ।
ಜಗದೇಶ್ವರನ ಜಪವ ಮರೆತಾರೊ ॥೨೨೧೮॥

* * *

ನಾಗzಮಂಗಲದಲ್ಲಿ ನಾಕ್ಹಣದ ಹೆಣ್ಣಿಲ್ಲ ।
ನಾಗಸರದಂತ ದನಿಯಿಲ್ಲ ।
ನಾಗಸರದಂತ ದನಿಯಿಲ್ಲ–ಮೈಸೂರು ।
ಚಾಮ್ರಾಜರಂಥ ಧೊರಿಯಿಲ್ಲ ॥೨೨೧೯॥

ಜಪವ ಮಾಡಯ್ಯ ನಾನಿನ್ನ ಮಗಳಯ್ಯ ।
ಬಿನ್ನಕ ನಮ್ಮ ಮಠಕ ।
ಬಿನ್ನಕ ನಮ್ಮ ಮಠಕ-ಬಿಜಯಮಾಡಿ ।
ಸ್ವಾಮಿ ರೇವಯ್ನ ಗುರುಮಠ ॥೨೨೨೦॥

* * *

ಮಠಾ ಅಂಬೋದ ನಾನೇನು ಬಲ್ಲೆ ಣ್ಣೆ ।
ಗುರುತು ತೋರಿಸು ಶಿಶುಮಗಳೆ ।
ಗುರುತು ತೋರಿಸು ಶಿಶುಮಗಳೆ-ಬರತೀವಿ ।
ಸ್ವಾಮಿ ರೇವಯ್ನ ಗುರುಮಠಕೆ ॥೨೨೨೧॥

* * *

ಅಕ್ಕಿ ಪೂಜೆಯ ಮಾಡೊ ಕಪ್ಪುರದ ಬೆಳಕೀಲಿ ।
ಅಪ್ಪ ಮಲ್ಲಯ್ಯ ಕಿರಿ ಜೆವೆತ ।
ಅಪ್ಪ ಮಲ್ಲಯ್ಯ ಕಿರಿಜೆವೆತ-ನನತಮ್ಮ ।
ಎತ್ತರಿಸಿ ಬೀಸೋ ಚವರೀಯ ॥೨೨೨೨॥

* * *

ನಾಗರ ಪಂಚಮಿ ನಾಡ ಹೆಣ್ಣಿಗೆ ಹಬ್ಬ ।
ನಾಗಪ್ಪಗ್ಹಾಲ ಎರಿಯೋಣ ।
ನಾಗಪ್ಪಗ್ಹಾಲ ಎರಿಯೋಣ-ನನ ಗೆಳತಿ ।
ನಾಗರ ಹೆಡಿಯಂಗ ಆಡೋಣ ॥೨೨೨೩॥

* * *

ಗುರುದೇವ ನಿಮ ಪಾಲ ಹರಹರಸಿ ನಿಮ ಪಾಲ ।
ಶರಣರಿಗೆ ಹಾಲು ಹಿರಿಯರಿಗೆ ।
ಶರಣರಿಗೆ ಹಾಲು ಹಿರಿಯರಿಗೆ-ಎರಿಯೋಣ ।
ಕಿರಿಯರಿಗೆ ಹಾಡಿ ಹರಿಸೋಣ ॥೨೨೨೪॥

* * *

ಚಂದ್ರ ಕಾಳಿಯ ಸೀರಿ ಚಂದ್ರ ಕುಪ್ಪುಸ ತೊಟ್ಟು ।
ಬಂದ ಹಬದಾಗ ನಲಿಯೋಣು ।
ಬಂದ ಹಬದಾಗ ನಲಿಯೋಣು-ವಕ್ಕಾಡಿ ।
ಒಂದಾಗಿ ಇದ್ದು ಅಗಲೋಣ ॥೨೨೨೫॥

ಸಾಕಾಗೂತನ ಕೂಡಿ ಜೋಕಾಲೀ ಜೀಕೂನ ।
ನಾಗರ ಮಿಡಿಯಾಗಿ ಸುಳಿಯೂನ ।
ನಾಗರ ಮಿಡಿಯಾಗಿ ಸುಳಿಯೂನ-ವರ ವರುಷ ।
ನಾಗರ ಪಂಚಮಿಗೆ ಕೂಡೋಣ ॥೧೧೨೬॥

* * *

ಅಳ್ಳಿಟ್ಟು ತಂಬಿಟ್ಟು ಮಾಡಿಟ್ಟ ಎಳ್ಳುಂಡಿ ।
ದಳ್ಳೂರಿ ಕಣ್ಣ ಹನಿಯುವನ ।
ದಳ್ಳೂರಿ ಕಣ್ಣ ಹನಿಯುವನ-ಕೊರಳಾನ ।
ನಾಗ ನಿನಗೆಡಿಯೋ ಕೈಮುಗಿದು ॥೧೧೨೭॥

* * *

ಗಂಡನ ಮನಿಯನ್ನ ಕಂಡು ಬಾಳುವೆಹಾಡಿ ।
ಉಂಡು ಓಡ್ಯಾಡಿ ಆಡೋಣ ।
ಉಂಡು ಓಡ್ಯಾಡಿ ಆಡೋಣ-ಮನೆಮಾತ ।
ಹಿಂಡಿನ್ಯಾಗಾಡಿ ಮರಿಯೋಣ ॥೧೧೨೮॥

* * *

ವಾರೀಗಿ ಗೆಳತೇರ ಕೇರೀಯ ಕೆಳದೇರ ।
ಸೇರಿ ಒಂದೆಡೆ ಕೂಡೋಣ ।
ಸೇರಿ ಒಂದೆಡೆ ಕೂಡೋಣ-ಜೋಕಾಲಿ ।
ತೂರಿ ಜೀಕನ ಆಡೋಣ ॥೧೧೨೯॥

* * *

ಪಂಚಮಿ ಬರಲೆವ್ವ ಮಂಚ ಕಟ್ಟಲಿ ಮನೆಗೆ ।
ಕಂಚಿ ಗೆಳ ತೇರು ಕೂಡಲಿ ।
ಕೆಂಚಿ ಗೆಳ ತೇರು ಕೂಡಲಿ-ನಮಜೀಕ ।
ಮಿಂಚಿ ಮುಗಲೀಗೆ ಏರಲಿ ॥೧೧೩೦॥

* * *

ಅಳುಕೂತ ಬಳುಕೂತ ಬಂದಾಳ ಗುಳಕವ್ವ ।
ಬಂದು ನಿಂತಾಳ ಅಗಸ್ಯಾಗ ।
ಬಂದು ನಿಂತಾಳ ಅಗಸ್ಯಾಗ-ಗೌಡರು ।
ತಂದು ಇಳಿಸ್ಯಾರ ಸೆಳಿ ಮಂಚ ॥೧೧೩೧॥

ಹೋಗೂತ ಹೊನ್ನೀ ಮುರಿಪ ಬರೂತ ಬನ್ನೀ ಮುರಿವ ।
ಕಂಡ ಕಂಡಲ್ಲಿ ಕರಿಬೇವ ।
ಕಂಡ ಕಂಡಲ್ಲಿ ಕರಿಬೇವ-ಮುಡಿವಂಥ ।
ಪುಂಡನ್ನ ದೇವಿ ಹಡದಾಳ ||೨೨೩೨||

* * *

ಅಕ್ಕ ಹಡದಾಳಂತ ಏನೊಯ್ದಿ ಬಸವಯ್ಯ ।
ಮುತ್ತೀನ ಚಂಡ ಕಾಮುರ್ಗಿಲ ।
ಮುತ್ತೀನ ಚಂಡ ಕಾಮುರ್ಗಿಲ-ಸುರಿಮಳೆಯ ।
ಆರತೀಲಿ ಒಯ್ದು ಹರಳೆಲೆಯ ||೨೨೩೩||

* * *

ಹುಟ್ಟೀದ ಯೋಳ್ದಿನಕ ಪಟ್ಟಣಪ ತಿರಗ್ಯಾನ ।
ಬಲುದಿಟ್ಟ ದೇವಿ ನಿನ್ಮಗ ।
ಬಲುದಿಟ್ಟದೇವಿ ನಿನ್ಮಗ-ಕುಮಾರಗ ।
ಸೆಟವಿ ಬರದಾಳ ಯೋಳ್ದಿನ ||೨೨೩೪||

* * *

ಸಂದೀಯ ಮನೆಯನ್ನ ಗೊಂದೀಯ ಮನೆಯನ್ನ ।
ಗೊಂಜಾಳದನ್ನ ಕೆಸರನ್ನ ।
ಗೊಂಜಾಳದನ್ನ ಕೆಸರನ್ನ-ನಮ್ ಕುಮಾರ ।
ಸಂದೀಯ ಹೊಕ್ಕ ನಡುಗೇರಿ ||೨೨೩೫||

* * *

ತಿಂಗಂ ತಿಂಗಳಿಗೆ ಚೆಂದಃ ನಂಜನಗೂಡು ।
ಗಂಧ ತುಂಬೀದೆ ಗುಡಿಗೆಲ್ಲ ।
ಗಂಧ ತುಂಬೀದೆ ಗುಡಿಗೆಲ್ಲ-ನಂಜುಂಡ್ನ ।
ಕಳಸ ತುಂಬೀದೆ ಹಿಡಿ ಹೊನ್ನು ||೨೨೩೬||

* * *

ಏಳೀರಿ ನಂಜುಂಡ ಎಷ್ಟೊತ್ತು ಸುಖನಿದ್ರೆ ।
ಆನೆ ಬಂದೀದೆ ಅರಮನೆಗೆ ।
ಆನೆ ಬಂದೀದೆ ಅರಮನೆಗೆ-ನಂಜುಂಡ ।
ಸೊಳಿ ಬಂದಾಳ ಪಗಡೀಗೆ ||೨೨೩೭||

ಹಡದವ್ವ ಹಡೆದೇನು ಸುಡಬೇಕ ।
ಹಡೆದು ಹೆರವರಿಗೆ ಕೊಡಬೇಕ ।
ಹಡೆದು ಹೆರವರಿಗೆ ಕೊಡಬೇಕ-ಕಣ್ಣೀರು ।
ತಡೆದ ಮಳಿಯಾಗಿ ಸುರಿದಾವ ||೨೨೩೮||

* * *

ಬೀಸಿ ಹಾಡುನು ಬಾರ ಕಾಸು ಜಿಪುಣನ ಹಾಡ ।
ಗಾಸ್ಯಾಕ ಬಾಳು ಜನುಮುಃಕ ।
ಗಾಸ್ಯಾಕ ಬಾಳು ಜನುಮುಃಕ-ಜಗದಾಗ ।
ಸೋಸಿ ನಡೆದುಃರ ಸಂಸಾರ ||೨೨೩೯||

* * *

ಹೊಟ್ಟೀಗಿ ಉಣಲಿಲ್ಲ ಬಟ್ಟೆ ಮೈಗುಡಲಿಲ್ಲ ।
ಕಟ್ಟೆನಾಗಿಟ್ಟ ಮನಿಯಾಗ ।
ಕಟ್ಟೆನಾಗಿಟ್ಟ ಮನಿಯಾಗ-ಸಂಸಾರ ।
ದಿಟ್ಟ ಹುಟ್ಯಾನ ಮಗರಾಯ ||೨೨೪೦||

* * *

ಮಗ ಹುಟ್ಟಿ ಹದಿನಾರು ಮುಗದೊಮ್ಮೆ ಬರ ಬಂತು ।
ಸಿಗಲಿಲ್ಲ ಜನಕ ಹಿಡಿಜೋಳ ।
ಸಿಗಲಿಲ್ಲ ಜನಕ ಹಿಡಿಜೋಳ-ದೊಡಬಸವ ।
ಹಗಿತುಂಬಿ ಕಣಜ ಏರಿಸಿದ ||೨೨೪೧||

* * *

ಮಂದಿ ಮಂದಿ ಎಂದು ಮಂದಿ ನಂಬಲಿ ಹೋದೆ ।
ಮಂದಿ ಬಿಟ್ಟಾರು ನಡುನೀರ ।
ಮಂದಿ ಬಿಟ್ಟಾರು ನಡುನೀರ-ಮಲ್ಲಯ್ಯ ।
ತಂದೆ ನನ್ನ ಕೈಯ ಬಿಡಬೇಡ ||೨೨೪೨||

* * *

ಮಧ್ಯಾಹ್ನ ಮಳಿಹುಯ್ದು ಇಬ್ಬುಃನಿ ಕೆರೆ ತುಂಬಿ ।
ಮಗ್ಗಿ ಕಸ್ತೂರಿ ತೆರೆಹೂದು ।
ಮಗ್ಗಿ ಕಸ್ತೂರಿ ತೆರೆಹೂದು-ನಂಜಪ್ಪ ।
ಮಧ್ಯಾಹ್ನದಾಗಾತೋ ಶಿವಪೂಜಿ ||೨೨೪೩||

ಎಪ್ಪತ್ತು ಗಾವುದಕ ನೆಪ್ಪು ನಂಜನಗೂಡು ।
ಹಿಪ್ಪೇಯ ತೋಪು ಹೊಳೆ ಸಾಲು ।
ಹಿಪ್ಪೇಯ ತೋಪು ಹೊಳೆ ಸಾಲು-ಒಳ್ಳೇದೆಂದು ।
ಅಪ್ಪ ನಂಜುಂಡ ನೆಲೆಗೊಂಡ ॥೨೨೪೪॥

* * *

ನಿಂಬೆ ಹಣ್ಣಿನ ಪೂಜೆ ತುಂಬೆ ಹೂವಿನ ಘಮನ ।
ಇಂದು ನಂಜಯ್ನ ಗುಡಿಯಲ್ಲಿ ।
ಇಂದು ನಂಜಯ್ನ ಗುಡಿಯಲ್ಲಿ-ಬಾಗಲ್ಮುಂದೆ ।
ಜಂಗಮರ ಗಮನ ನಿಲುಬಾರ ॥೨೨೪೫॥

* * *

ಎಡದಲಯ್ಯನ ತೇರು ಬಲದ ಲಮ್ಮನ ತೇರು ।
ರಾಟಾಳ ತೇರು ಕೈತೇರು ।
ರಾಟಾಳ ತೇರು ಕೈತೇರು-ಗೊಂಬೆತೇರು ।
ಹರಿದೊ ನಂಜಯ್ನ ಎಡಬಲಕ ॥೨೨೪೬॥

* * *

ನಂಜನ ಗೂಡಲ್ಲಿ ನಮಗಾರು ನೆಂಟರು ।
ನಂಜಪ್ಪಸ್ವಾಮಿ ಹಿರಿಯಣ್ಣ ।
ನಂಜಪ್ಪ ಸ್ವಾಮಿ ಹಿರಿಯಣ್ಣ-ಇದ್ದಾಗ ।
ಮುಂದ್ಹೋಗಿ ಹೊರಜಿ ಹಿಡಿವೇವು ॥೨೨೪೭॥

* * *

ನಂಜನಗೂಡ್ನಲ್ಲಿ ನಾಲ್ಕೈದು ಬಾಗೀಲು ।
ನಂದಿಕೋಲೈದು ಪಡವೈದು ।
ನಂದಿ ಕೋಲೈದು ಪಡವೈದು-ನಂಜಪ್ನ ।
ಮಂಗಳಾರತಿ ಹದಿನೈದು ॥೨೨೪೮॥

* * *

ನಂಜನ ಗೂಡಲ್ಲಿ ಸಂಬಳದ ಸೂಳೇರು ।
ಕಂಬಿ ಸೀರೇಯ ಎಡಗಾಸೆ ।
ಕಂಬಿಸೀರೆಯ ಎಡಗಾಸೆ-ಹಾಕ್ಕೊಂಡು ।
ನಂಜುಂಡಗಾರ್ತಿ ಬೆಳಗ್ಯಾರ ॥೨೨೪೯॥

ಗುಡ್ಡsದ ವಾರ್‍ಯಾಗ ಗುಲಗಂಜಿ ಬನದಾಗ ।
ಒಬ್ಬsನ ಹ್ಯಾಂಗಿದ್ದಿ ಧರಿಥೊಳ ।
ಒಬ್ಬsನ ಹ್ಯಾಂಗಿದ್ದಿ ಧರಿಥೊಳ-ನಿನಮುಂದ ।
ಅಬ್ಬರಿಸಿ ಗಂಗೆ ಹರಿದಾಳ ||೨೫೦||

* * *

ಮಾರೆಮ್ಮ ಉಟ್ಟಾಳ ಮಂಜೀರ ದುಡುಗೇಯ ।
ಸುತ್ತ ಹಾಕ್ಯಾಳ ಸರ್ಪಾಸ ।
ಸುತ್ತ ಹಾಕ್ಯಾಳ ಸರ್ಪಾಸ-ನಾಗವ್ವ ।
ಹೆಡೆಯ ತಿದ್ಯಾಳ ಸಿರಿಲಕ್ಷ್ಮಿ ||೨೫೧||

* * *

ಆರsತಿ ಹೊರಟಾವು ಕೇರುತಿ ಉಳ್ಳೋಳ್ಗೆ ।
ಕೇರಿ ಕೇರಿಲೆ ಮೆರೆಯೊಳ್ಗೆ ।
ಕೇರಿ ಕೇರಿಲೆ ಮರೆಯೋಳ್ಗೆ-ಮಾರೆಮ್ಗ ।
ಆರತಿ ಹೊರಟಾವು ಐನೂರು ||೨೫೨||

* * *

ಹಾರುವರ ಕೇರಿಗೆ ಹೋದಾಳು ಮಾರಮ್ಮ ।
ನಾಗಾಳ ಹೂವ ಮುಡಲಲ್ಲಿ ।
ನಾಗಾಳ ಹೂವ ಮುಡಲಲ್ಲಿ-ಕಟಿಗೊಂಡು ।
ನಾರೇರಿಗೊಂದೊಂದ ಕೊಡತಾಳ ||೨೫೩||

* * *

ತಾಯಿ ದೊಡ್ಡಮ್ಮ ಏನುಟ್ಟು ಮೆರದಾಳು ।
ಕಾದುಟ್ಟುಕರಿಮು ಮುಸಕುಟ್ಟು ।
ಕಾದುಟ್ಟು ಕರಿದು ಮುಸಕುಟ್ಟು-ಹಾರುವರ ।
ಹೂಬಣ್ಣನುಟ್ಟು ಮೆರದಾಳು ||೨೫೪||

* * *

ಚಂದ್ರಗಾವೀ ಸೀರೆ ಚಂದ್ಯಾಕಣೆ ದೊಡ್ಡಮ್ಮ ।
ಚಂಡಿ ಕೂತವಳೆ ಹೊಳೆಯಲ್ಲಿ ।
ಚಂಡಿ ಕೂತವಳೆ ಹೊಳೆಯಲ್ಲಿ-ದೊಡ್ಡಮ್ಮ ।
ಗೊಂಡೇಯ ಸೀರೆ ಮರೆಮಾಡಿ ||೨೫೫||

ಹೆಡ್ಗೇಲ್ಲಣ್ಣು ಬಂದು ಗಡಿಗೇಲ್ತುಪ್ಪಾ ಬಂದು ।
ಇಟ್ಟಾಡಿ ಬಂದು ಇಡಿಗಾಯಿ ।
ಇಟ್ಟಾಡಿ ಬಂದು ಇಡಿಗಾಯಿ–ದೊಡ್ಡವ್ನ ।
ಒತ್ತಲಸಿ ಬಂದೊ ಕುರಿಗೋಳು ॥೨೨೭೬॥

* * *

ಗಡ್ಡೇಯ ಮೇಗ್ಲಿಂದ ಎದ್ ಬಾರೆ ದೊಡ್ಡವ್ವ ।
ಸೀರ್ಯಾದ ಮುಗ್ಗ ತಂದಿವ್ನಿ ।
ಸೀರ್ಯಾದ ಮುಗ್ಗ ತಂದಿವ್ನಿ–ಮುಡಿಬಾರೆ ।
ಜಾಜೀಯ ಮೊಗ್ಗು ಅರಳ್ಯಾವ ॥೨೨೭೭॥

* * *

ಮಾರೀಯ ಗುಡಿಸುತ್ತ ನೂರೊಂದು ಗಿಡಹುಟ್ಟಿ ।
ಕಳ್ಳ ಕೊಯ್ವಾಗ ಕಸುಗಾಯಿ ।
ಕಳ್ಳ ಕೊಯ್ವಾಗ ಕಸುಗಾಯಿ–ಮಾರವ್ನ ।
ಗಂಡ ಕೊಯ್ವಾಗ ಗಜನಿಂಬಿ ॥೨೨೭೮॥

* * *

ಅಮ್ಮನ ಗುಡಿಮುಂದ ಘಮ್ನನ್ಹೋದಿದು ಏನೆ ।
ಗಂಡು ಭೂತಾಳೆ ಗಜನಿಂಬೆ ।
ಗಂಡು ಭೂತಾಳೆ ಗಜನಿಂಬೆ–ಘಮನಕ್ಕೆ ।
ಹಿಂಡು ಮರವೆಲ್ಲ ಫಲಬಿಟ್ಟೊ ॥೨೨೭೯॥

* * *

ಗಂಗೇಯ ತಡಿಯಲ್ಲಿ ಗೌರಿಮಂಟಪದಲ್ಲಿ ।
ತುಂಬ ಕುಂತಾರ ಶರಣರು ।
ತುಂಬ ಕುಂತಾರ ಶರಣರ–ಪಾದಕ್ಕ ।
ತುಂಬೆ ಹೂವಿಕ್ಕಿ ಶರಣೆಂಬೆ ॥೨೨೮೦॥

* * *

ಏಳುತಾಲೆ ಶ್ರೀಗಿರಿಯ ಏನೆಂದು ನೆನೆದಾಳೊ ।
ಪಾರ್ವತಿ ಪಾದ ಗತಿಯೆಂದು ।
ಪಾರ್ವತಿ ಪಾದ ಗತಿಯೆಂದು–ಮಲ್ಲವ್ವ ।
ತಲೆಯಾಗ ಹಸ್ತ ಮಡಗ್ಯಾಳೊ ॥೨೨೮೧॥

ಸೊಲ್ಲಾಪುರದೊಳಗ ಸಲ್ಲಿಲ್ಲ ಮಲ್ಲೀಗಿ ।
ಹಾಸುಮಂಚಿಲ್ಲ ಹವಳsವು ।
ಹಾಸು ಮಂಚಿಲ್ಲ ಹವಳsವು-ಸಿದರಾಮನ ।
ದಂಡು ಕೋಲೆಲ್ಲ ದವನsವು ||೨೧೬೨||

* * *

ಎಲ್ಲೆಲ್ಲಿ ನೋಡಿದರು ತೆಳ್ಳನ್ನ ಕಲ್ಲಿಲ್ಲ ।
ಜಳ್ಳsನೆ ಹರಿವ ಜಲವಿಲ್ಲ ।
ಜಳ್ಳsನೆ ಹರಿವ ಜಲವಿಲ್ಲ-ಲಿಂಗಯ್ನ ।
ವಸ್ತ್ರ ನಾನೆಲ್ಲಿ ಒಗೆಯುsಲಿ ||೨೧೬೩||

* * *

ಕರುಣಬಂದರ ಕಾಯೋ ಮರಣ ಬಂದರ ಒಯ್ಯೊ ।
ಕರುಣಿ ಕಲ್ಯಾಣ ಬಸವಣ್ಣ ।
ಕರುಣಿ ಕಲ್ಯಾಣ ಬಸವಣ್ಣ-ಕಾಸಿಲಿಂಗ ।
ಕಡೆತನ ಕಾಯೋ ಅಭಿಮಾನ ||೨೧೬೪||

* * *

ಸಿದ್ದಯ್ನ ಗುಡಿಯಲ್ಲಿ ಎದ್ದು ಬೀಸುವಳ್ಯಾರ ।
ರುದ್ರsನಾ ತಂಗಿ ಶಿವಶರಣೆ ।
ರುದ್ರsನಾ ತಂಗಿ ಶಿವಶರಣೆ-ಮಲ್ಲವ್ವ ।
ಎದ್ದು ಶ್ರೀಗಿರಿಯ ನೆನದಾಳೊ ||೨೧೬೫||

* * *

ಸಿದ್ದಯ್ನ ಗುಡಿಯಲ್ಲಿ ಢಬ್ ಅಂಬುವದೇನ ।
ಸಿದ್ದ ಮದ್ದsಳೆ ಶಿವಶಂಖು ।
ಸಿದ್ದ ಮದ್ದsಳೆ ಶಿವಶಂಖು-ಭಾರೀಘಂಟೆ ।
ಎದ್ದು ನಮ್ಮನೆಗೆ ನಿಲಬಾರ ||೨೧೬೬||

* * *

ಕನ್ನಂಬಾಡೀಲೊಂದು ಸಣ್ಣ ತೆಂಗಿನಮರ ।
ರೆಂಬೆ ರೆಂಬೆಗೆ ಎಳೆಗಾಯಿ ।
ರೆಂಬೆ ರೆಂಬೆಗೆ ಎಳೆಗಾಯಿ-ಹಣ್ಣಾಯಿ ।
ಬೆಳ್ಳೀಯ ಗಂಟೆ ಗಲರೆಂದೊ ||೨೧೬೭||

ಹಾಕಯ್ಯ ಹರಗೋಲ ನೂಕಯ್ಯ ತೆಪ್ಪವ ।
ಜೋಕೇಲಿ ನಮ್ಮ ಕಳುಹಯ್ಯ ।
ಜೋಕೇಲಿ ನಮ್ಮ ಕಳುಹಯ್ಯ-ಕನ್ನಂಬಾಡಿ ।
ರಂಭೆ ಕಾಳವ್ವಗ ಇಡುಗಾಯಿ ॥೨೨೬೮॥

* * *

ಕಲ್ಲು ಕಟ್ಟಿಯ ಬಾವಿ ನೆಲ್ಲಕ್ಕಿ ರಂಗೋಲಿ ।
ಅಲ್ಲಿ ಸಿದ್ದಯ್ನ ಶಿವಪೂಜಿ ।
ಅಲ್ಲಿ ಸಿದ್ದಯ್ನ ಶಿವಪೂಜಿ ಮಾಡ್ವಾಗ ।
ಗೋಪುರವ ನೋಡಿ ಬರತೇವಿ ॥೨೨೬೯॥

* * *

ಪಟ್ಟಣಕೆ ಪಡಸಾಲೆ ಮೈಸೂರ್‍ಗೆ ಕೈಸಾಲಿ ।
ಕನ್ನಂಬಾಡೀಲಿ ಕಡು ಚಲುವೆ ।
ಕನ್ನಂಬಾಡೀಲಿ ಕಡು ಚಲುವೆ-ಕಾಳವ್ವ ।
ದೂರದಿಂದ ಕೈಯ ಮುಗದೇವು ॥೨೨೭೦॥

* * *

ಕಾವಿ ದೋತರದವಳೆ ಕೈಲಿ ಜಪ ಸರದವಳೆ ।
ಕಾವೇರಿಗ್ಹೋಗಿ ಬರುವಾಗ ।
ಕಾವೇರಿಗ್ಹೋಗಿ ಬರುವಾಗ-ದ್ಯಾವಮ್ನ ।
ಕಾಯೊಡೆದು ಕೈಯ ಮುಗದೇವು ॥೨೨೭೧॥

* * *

ನರಸೀಪುರದಿಂದ ತರಿಸ್ಯಾರ ಬಣ್ಣವ ।
ಅರಸಿ ಕಾಳಮ್ಮನ ಗುಡಿಯಲ್ಲಿ ।
ಅರಸಿ ಕಾಳಮ್ಮನ ಗುಡಿಯಲ್ಲಿ-ಬಾಗಿಲ್ಮುಂದೆ ।
ನಿಲಸ್ಯಾರ ನೀಲ ಕುದರೀಯ ॥೨೨೭೨॥

* * *

ಕನ್ನಂಬಾಡಿಯೊಳಗ ಏನೇನು ಐಭೋಗ ।
ಯಾರು ಹೊಂಟವರೆ ಸುಳಿಹಂಗೆ ।
ಯಾರು ಹೊಂಟವರೆ ಸುಳಿಹಂಗೆ-ಕಾಳಮ್ಮ ।
ಹೊಂಟವಳೆ ಸಣ್ಣ ನವಿಲ್ಹಂಗೆ ॥೨೨೭೩॥

ರಂಗ ಬರ್ತಾನೆಂದು ರಂಗೋಲಿ ನಾನೊಯ್ದೆ ।
ರಂಗನ ಹಿಂದೆ ರಮಣೇರು ।
ರಂಗನ ಹಿಂದೆ ರಮಣೇರು-ಬರ್ತಾರೆಂದು ।
ಮಂಗಳಾರತಿ ನಾ ತಂದೆ ॥೧೧೭೪॥

* * *

ಕಂಬ ಕಂಬಕ್ಕ ನಿಂಬೀ ಹಣ್ಣಿನ ಪೂಜೆ ।
ಕಂಬ ಕಂಬಕ್ಕ ಮರಿದೀಪ ।
ಕಂಬ ಕಂಬಕ್ಕ ಮರಿದೀಪ-ಬೇಟ್ಗಾರ ।
ರಂಗನ ಪೂಜೆ ದಿನ ದೀನಾ ॥೧೧೭೫॥

* * *

ರಂಗನ್ನ ನೋಡಾಕ ರೇಕು ಮಾಣಿಕವ್ಯಾಕ ।
ಅಂಗಯ್ಯ ತುಂಬ ಹಣವ್ಯಾಕ ।
ಅಂಗಯ್ಯ ತುಂಬ ಹಣವ್ಯಾಕ-ಬೇಟ್ಗಾರ ।
ಸಿಂಗರದ ರಂಗ್ನ ನೋಡಾಕ ॥೧೧೭೬॥

* * *

ಹಳ್ಳದ ನೀರಾಗೆ ತೆಳ್ಳನ್ನ ಕಲ್ಲಾಗೆ ।
ಜಲ್ಲಿ ಸಿಕ್ಕವ್ವ ಬಿಸಲೀಗೆ ।
ಜಲ್ಲಿ ಸಿಕ್ಕವ್ವ ಬಸಲೀಗೆ-ರಂಗಯ್ನ ।
ವಲ್ಲಿ ನಾಣ್ಯಾಗಿ ಮಡಿಯಾಗೆ ॥೧೧೭೭॥

* * *

ಎಲ್ಲವ್ನ ಹೋಗವ್ರು ಎಳ್ಳು ಬೆಲ್ಲಾ ಒಯ್ರೋ ।
ಮಲ್ಲೀಗಿ ಒಯ್ರೋ ತುರುಬೀಗೆ ।
ಮಲ್ಲೀಗಿ ಒಯ್ರೋ ತುರುಬೀಗೆ-ಪರಸರಾಮ್ನ ।
ಬಿಲ್ಲೀಗೆ ಒಯ್ರೋ ಬಿಳಿ ಮುತ್ತ ॥೧೧೭೮॥

* * *

ಗಂಡುಗಲ್ಲಿನ ಮ್ಯಾಲೆ ಗುಂಡ್ಗುಲಿಯ ಕುಂಡಿರಿಸಿ ।
ಗೊಂಡೇಯ ಕೌದಿ ಬಿಗಿಮಾಡಿ ।
ಗೊಂಡೇಯ ಕೌದಿ ಬಿಗಿಮಾಡಿ-ಮಾದೇವ ।
ಗಂಡ್ಗುಲಿಯ ಮ್ಯಾಲೆ ಮೆರೆದಾನೊ ॥೧೧೭೯॥

ಊರ ಮುಂದಲ ಕೆರೆಗೆ ಬಿಟ್ಟ ರಾಮರ ಬಾಣ ।
ನೋಡೋಣ ಬನ್ನಿ ಜನರೆಲ್ಲ ।
ನೋಡೋಣ ಬನ್ನಿ ಜನರೆಲ್ಲ-ಹನುಮಯ್ನ ।
ಜೋಡೆರಡು ಕುದುರೆ ಕುಣಿತಾವ ॥೨೨೮೦॥

* * *

ಕುದುರೆ ಕುಣಿದಾವೊ ಪುನಗನೇರಿಯ ಮೇಲೆ ।
ನೀರು ಕುಣಿದಾವೊ ಕೊಳದಲ್ಲಿ ।
ನೀರು ಕುಣಿದಾವೊ ಕೊಳದಲ್ಲಿ-ರಂಗಯ್ನ ।
ತೇರು ಕುಣಿದಾವೊ ಗಿರಿಯಲ್ಲಿ ॥೨೨೮೧॥

* * *

ದಾಸ್ವಾಳದ ಹೂವು ಕಾಸೀಗೆ ಹದಿನೈದು ।
ದಾಸಯ್ಯಗೈದು ನನಗೈದು ।
ದಾಸಯ್ಯಗೈದು ನನಗೈದು-ಬಿಳಿಗೀರಿ ।
ಜಾಣ ರಂಗಯ್ನ ಜಡೆಗೈದು ॥೨೨೮೨॥

* * *

ಅಚ್ಚ ತುಳಸಿ ದಂಡೆ ನಿಚ್ಚ ನೀಲಿ ಹಾವು ।
ಪಕ್ಷೀಯ ಮ್ಯಾಲೆ ಮೆರೆಯೋರೆ ।
ಪಕ್ಷೀಯ ಮ್ಯಾಲೆ ಮೆರೆಯೋರೆ-ರಂಗಯ್ಗೆ ।
ಲಕ್ಷ್ಮಿ ಆರತಿ ಹಿಡಿದಾಳೋ ॥೨೨೮೩॥



## ಡೊಳ್ಳಿನ ಪದಗಳು

೧

‡ ದೇವಾರು ಬಂದಾವು ಬನ್ನೀರೆ ||ಪಲ್ಲ||

ಮೂಲ ದೇವ ಬಾ ಮೂರು ಲೋಕಕ ಮೇಲವಾದ ಬೀರಯ್ಯ |
ಮೇಲವಾದ ಬೀರಯ್ಯ ನೀ ಬಾ ಹಾಲು ಮತದ ಒಡಿಯನು |
ಹಾಲು ಮತವ ಮೇಲು ಮಾಡಿದ್ಯೋ ಕಾಲ ಭೈರಿ ಕರಿಸಿದ್ದನು |
ಕುಲದೊಳಗುತ್ತಮನಾದ ಕುರುಬನ ಕುಲದೊಳಗ್ಹುಟ್ಟಿ ಬಂದವನು |
ಕುರಿಯಕಾಯುತ ಕಾದು ಅಡವಿಯೊಳುಕೊಳಲನೂದಿ ಕುಣಿದಾಡುವನು
ಕೊಳಲನೂದಿ ಕುಣಿದಾಡುವನಮಸ್ವಾಮಿಮಳಲಿನೊಳಗ ಮಲಗೇಳುವನು|
ತಾಳ ತಂಪ ನಮ್ಮ ಡೊಳ್ಳಡಮಾರಿ ಒಳ್ಳಿತಾಗಿ ಕುಣಿಶ್ಯಾಡವನು |
ಒಳ್ಳಿತಾಗಿ ಕುಣಿಶ್ಯಾಡವನು ಕೈ ಹೊಳ್ಳಿಸಿ ಜಗ್ಗ ಹಾಕುವನು |
ಜಗ್ಗ ಹಾಕಿ ಬಹು ಹಿಗ್ಗಿನಿಂದ ಕೈ ತೆಗ್ಗಿಸಿ ಪದಗಳ ಹೇಳುವನು |
ವೀರಗಾಸಿಯು ವೀರಗರಿಣಕ ಧೀರನಾಗಿ ಧರಿಸಿದ್ದವನು |
ಧೀರನಾಗಿ ಧರಿಸಿದ್ದವನು ಕರವೀರನಾಗಿ ನೀ ಮೆರೆದವನು |
ಧೀರತನವ ತೋರಿದಿ ನಮಗ ಮೂರು ಕಣ್ಣಿನ ದೇವನು |
ಮೂರು ಕಣ್ಣಿನ ದೇವ ನಿನಗ ಸರಿ ಯಾರು ಇಲ್ಲ ನನ್ನಯ್ಯನು |
ಎಡ ಬಲಕಿರುವಂಥ ಮಾವಿನ ಮರ ತೋಪಿಡದಿರುವಂಥ ತೋರಣವು |
ಹಿಡಿದಿರುವಂಥ ತೋರಣವು ಮುಂದ ನಡೆದವು ಸಕಲ ಭಾಗ್ಯೇವು |
ಸಕಲ ಭಾಗ್ಯ ಸಂಪನ್ನ ಸಹಿತ ಸಕಲದೇವ ನೀನಾದವನು |
ಸಕಲದೇವ ನೀನಾದವನು ನೀ ನಮಗ ಕಲಿಸಿಕೊಟ್ಟ ಹಾಡಿಸಿದವನು |
ಎತ್ತ ಹೋದರೂ ಏನನ ಗುರುವೇ ಚಿತ್ತ ನನಮ್ಯಾಲಿರಬೇಕ |
ದೇವಾರು ಬಂದಾವು ಬನ್ನೀರೆ || ||೨೦೮||

---

‡ ಇದನ್ನು (ಪಲ್ಲವನ್ನು) ಪ್ರತಿ ಪದ್ಯದ ಪ್ರಾರಂಭಕ್ಕೂ ಕೊನೆಗೂ ಉಪಯೋಗಿಸತಕ್ಕದ್ದು

೨

ಆದಿಯಲ್ಲಿ ಕಲ್ಯಾಣ ಪಟ್ಟಣದೊಳು ಭಕ್ತಿ ಮಾಡಿದ ಬಸವೇಶ್ವರನ ।
ಮುಕ್ತಿಯ ಪಡೆದನು ಕತೆಯ ಕೇಳಿರಿ ಬಸವೇಶ್ವರನ ॥ಅನುಪಲ್ಲ।
ಬಾಗೆವಾಡಿಯೊಳು ಹುಟ್ಟಿ ಬಂದನು ಶಿವನಂಥ ಬಸವೇಶ್ವರನ ।
'ಶಿವ'ನೆಂಬುವ ನ್ಯಾಯುವಿದ್ದಿಲ್ಲ ತಾನೆ ತಂದ ಬಸವೇಶ್ವರನ ।
ಮಾದಲಾಂಬಿಕೆಯ ಉಡಿಯ ಒಳಗ ಹುಟ್ಟಿ ಬಂದ ಬಸವೇಶ್ವರನ ।
ಹುಟ್ಟಿ ಬಂದು ಮಲಿ ಮುಟ್ಟಿ ಕುಡಿಯಲಿಲ್ಲ ಸೃಷ್ಟಿಕರ್ತ ಬಸವೇಶ್ವರನ
ಸಿಟ್ಟಿಗೆದ್ದ ಮಾದಲಾಂಬಿಕೆ ತೊಟ್ಟಿಲಕ ಹಾಕಿದಳು ಬಸವೇಶ್ವರನ ।
ತನ್ನ ಬೆರಳ ತನ್ನ ಬಾಯೊಳಗಿಟಗೊಂಡು ಡೇಗ ಬಿಟ್ಟಂತ ಬಸವೇಶ್ವರನ।
ಹಸ್ತದೊಳಗ ಅಮೃತವಿಟ್ಟಿದ್ದ ಗುಪ್ತವಿದ್ದ ಬಸವೇಶ್ವರನ ।
ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರ ತಂದ ಬಸವೇಶ್ವರನ ।
ಹೇರು ಅಕ್ಕಿ ಹೇರು ಬ್ಯಾಳಿ ಬೆಲ್ಲ ತುಪ್ಪವ ತಂದ ಬಸವೇಶ್ವರನ ।
ಬಿನ್ನಾಯ ಹೇಳುತ ಅಡಗಿ ಮಾಡುತ ಉಣ್ಣಾಕ ಕರದ ಬಸವೇಶ್ವರನ ।
ಒಂದು ಲಕ್ಷ ತೊಂಬತ್ತಾರು ಸಾವಿರ ಎಲಿಯ ಕೊಟ್ಟ ಬಸವೇಶ್ವರನ ।
ಒಂದರಂತ ಹೋಳಿಗಿ ನೀಡಿದರ ಹೆಚ್ಚ ಆತ ಬಸವೇಶ್ವರನ ।
ಹೆಚ್ಚಿನ ಹೋಳಿಗಿ ತೊಡಿಯ ಕೊಯ್ಸಿದನು ಬಚ್ಚಿ ಇಟ್ಟ ಬಸವೇಶ್ವರನ ।
ಎತ್ತ ಹೋದರ ಏನನ ಗುರುವೆ ಚಿತ್ತ ನನಮ್ಯಾಲಿರಬೇಕ । ॥೨೪೫॥
ದೇವಾರು ಬಂದಾವು ಬನ್ನೀರೆ ॥

೩

ರಾಗ ಇದ್ದರs ಹಾಡು । ಜ್ಞಾನ ಇದ್ದರs ಪದ ।
ಸ್ವಾಮಿ ಯಿದ್ದರ ಬೆನ್ನು ಬಲಗಡಿಗೆ ॥
ಒಡಿಯಾ ಇದ್ದರ ಬಂಡ । ಜಡಿಯ ಇದ್ದರ ಜೋಗಿ ।
ಹೆಡಿಯ ಇದ್ದರ ಸರ್ಪ-ಭೂಷಣನ ॥
ಒಕ್ಕಲಿದ್ದರs ಊರು । ಮಕ್ಕಳಿದ್ದರs ಮನಿ ।
ಮುಕ್ಕಣ್ಣನಿದ್ದರ ಮೂರು ಲೋಕಾವ ॥
ಹಾಲಿದ್ರ ಹಬ್ಬsವು । ತಾಯಿದ್ರ ಮಕ್ಕಳು

ಪೂಜಾರಿದ್ದರ ಸ್ವಾಮಿ ಶೃಂಗಾರವ ||
ಗಂಗಿ ಇದ್ದರ ಬಾವಿ । ಲಿಂಗ ಇದ್ದರ ಗುಡಿ ।
ಜಂಗಮರಿದ್ದರ ಜಗ ಬಲವ ||
ಜೋತಿ ಇದ್ದರs ಮನಿ । ರೀತಿ ಇದ್ದರ ನಾರೀ ।
ಈಶ್ವರಿದ್ದರ ಕೈಲಾಸವು । ಮರ್ತ್ಯಕ್ಕೆ ಸೂರ್ಯರಿದ್ದರ ಬೆಳಿಕೆಲ್ಲ ||

೪

ಊರು ಹುಟ್ಟಿದವೋ ಉಗದಲಿ ತಮ್ಮ ।
ದೇವರು ಹುಟ್ಟ್ಯಾವು ವರವೀಲೆ ||
ಲಿಂಗ ಹುಟ್ಯಾವು ನೀರಾಗಲ್ಲೊ । ಗಂಗವ್ವ ಹುಟ್ಯಾಳ ಸಮುವರದಾಗ ।
ಸುಂಕ ಹುಟ್ಟ್ಯಾವೋ ತೆನಿಯಾಗ। ಕಂಚ ಹುಟ್ಟ್ಯಾವೋ ಕಲಮುಕದಾಗ ।
ಮಿಂಚ ಹುಟ್ಟಿದಾವೊ ಮುಗಲಾಗ। ವಿದ್ಯ ಹುಟ್ಟಿತೊ ವಿಜನಾಗರದಾಗ।
ಬುದ್ಧಿ ಹುಟ್ಟ್ಯಾವೊ ಶಿವನಲ್ಲಿ। ಉಪ್ಪ ಹುಟ್ಟ್ಯಾವೊ ಗಟ್ಟದ ತೆಳಗ ।
ಸೊಕ್ಕು ಹುಟ್ಟ್ಯಾವೋ ಮೈಯಾಗ ||
ಕುರಿಯು ಹುಟ್ಟ್ಯಾವೊ ಕುರಾಣದಾಗ। ಮರಿಯು ಹುಟ್ಟ್ಯಾವೊ ಮಾದಿನ್ನಿಲೆ।
ಕುರಿಯು ಕಾಯ್ವನನ ಕಿಲಾರಿ ಹುಟ್ಟ್ಯಾನು ಉಂಡಾಡು ಗೌಡನಬಳ್ಳ್ಯಾಗ ।
ಕುರಿಯು ಕಾಯ್ವನನ ಕೋಲ ಹುಟ್ಟಿದವು ಕೊದನಿ ನಂದನ ವನದಾಗ।
ಜಗ್ಗ ಹುಟ್ಟ್ಯಾವೊ ಬಿಡ್ಡಿಲಿ ತಮ್ಮ। ಡೊಳ್ಳು ಹುಟ್ಟ್ಯಾವೊ ತುನಿಯಾಗ ।
ಹಗ್ಗ ಮಗ್ಗಗಳು ಆದಿಗೊಂಡಿನ ಆದಿಗೊಂಡಿನ ಬಳ್ಳ್ಯಾಗ ।
ಜಗ್ಗ ಮಗ್ಗಗಳು ಹುಟ್ಟಿದವಲ್ಲೊ ಉಂಡಾಡುಗೌಡನ ಬಳ್ಳ್ಯಾಗ ।
ಮುನ್ನೂರ ಮುರ್ಕೋಟಿ ಲಿಂಗ ಹುಟ್ಟೀವು ತಿರುವಲುತಿಮ್ಮನ ಗಿರಿಯಾಗ ।
ನಾಗಪ್ಪನಗ ಚತ್ರ ಹುಟ್ಟ್ಯಾವೊ ಕೈಯಲಾಸದ ವರವೀಲೆ ।
ಸರ್ವಗೇಣಿ ಬಸವಣ್ಣ ಹುಟ್ಟ್ಯಾನೊ ಜಂಬದ್ವೀಪದ ಗಡ್ಡ್ಯಾಗ ।
ನಮ್ಮನಾಳುವ ಶಿವನ ಹುಟ್ಟ್ಯಾನ ಜಾವಕಂಡಿಯ ನಾಡೊಳಗ ||
ದೇವಾರು ಬಂದಾವು ಬನ್ನೀರೇ ||೨೨೮೭||

೫

ವರಸದ ವ್ಯಾಲ ತಿರಗಿದರೆ ನಮ್ಮರಸಿನ ತಕ್ಕೊಲಾಂಪಾಳಿಲ್ಲ ।
ಹಿಂದಿಗೇರಿ ಪರವ್ವನ ಮನಿಯಾಗ ಶಿಸುವ ನೀಲವ್ವ ಒಯ್ದ್ಯಾಳ ।
ಶಿಸುವ ನೀಲವ್ವಗ ಬೆಸನಾಗ್ಯಾನ । ಸಸಿ ಬೇವಿನ ಮರಪ ಬಸವಣ್ಣನ ।
ಅಂಗಳಾಡಾ ಗಾಡಕಂದ ನೀಲವ್ವಗ ಬಂದು ಕಾಣಿಸಿಗೊಂಡಾನಾ ।
ಗರತರ ಬಂದರು ಕಾಣಿಸಿಕೊಂಡರು ಕಂದ ನೀಲವ್ವಗ ತಿಳಿಸ್ಯಾರ ।
ಕಂದವ್ವ ನೀಲವ್ವಗ ತಿಳಿಯದ ಲೋಗಿ ತಾಯಿ ಪರವ್ವಗ ಹೇಳಿದಳ ।
ಅರಮನಿಯೊಳಗಿರತಾಯಿ ಪರವ್ವ ಕರಣದಲಿ ತಾ ಕೇಳಿದಳ ।
ಏ ನನ ಮಗಳ ನಾದೀತೆಂದು ಬಾಜ ಬಾಜಾರ ಹುಡಿಕ್ಯಾಳ ।
ಬಾಜ ಬಾಜಾರ ಹುಡಿಕಿದರೆ ಬಾಲಿ ನೀಲವ್ವನ ನಾ ಕಾಣೆನೆ ।
ಮಂದಿ ಮಕ್ಕಳ ಪಂಜಗಳೆಲ್ಲ ಹಚ್ಚಿ ಸಂದು ಸಂದನ ಹುಡಿಕ್ಯಾಳ ।
ಸಂದು ಸಂದನ ಹುಡುಕಿದರೆ ನನಕಂದ ನೀಲವ್ವನ ಕಾಣೇನ ।
ಗುಡ್ಡದ ವಾರೆನ್ನ ಕೆಂಡಗಣ್ಣಿನ್ಹುಲಿ ಬಂದು ಕಂಡ ಹೊಂದಿತು
ಕಂದ ನೀಲವ್ವನ ।
ಗುಡ್ಡದ ವಾರ್ಯಾನ ಪಿಚಗಣ್ಣಿನ ಹುಲಿಬಂದು ಕಚ್ಚಿ ಹೋದೀತು
ಕಂಪ ನೀಲವ್ವನ ।
ಪಟ್ಟಣದೊಳಗೊಂದು ಹೆಬ್ಬುಲಿ ಹೊಕ್ಕರ ಪಟ್ಟಣಕ ಉಳುವಿಲ್ಲವ ।
ಕದಗಳ ಹಾಕ್ಯಾವು ಕೀಲವು ಜಡಿದಾವು ಹೋಮದ ಹೊಗಿಯೆಲ್ಲಿದ್ದಾವ ।
ಹೋಮದ ಹೊಗಿಯೆಲ್ಲಿದ್ದು ಗುರುವಿನ ನೇಮಗಳೆಷ್ಟಂತ ವರ್ಣಿಸಲೆ ।
ಲೆಕ್ಕಳಿಲ್ಲದ ಮದ್ದು ಗುಂಡು ಸುಟ್ಟರು ನಂದಿಯ ಗುಡ್ಡ ಏನ ।
ಹೋದವ ಹೋನಮನೆಂಬೊ ಮೇಣದ ಗೊಂಬಿಯು
ವ್ಯಾಲೊಂದರಗಿನಬಣ್ಣ
ಅರಗಿನ ಬಣ್ಣ ಕರಗಿ ಹೋದರ ತಿರಗಿ ಬಾರದು ನಿಮ್ಮ ಸಂಸಾರ ॥
ದೇವಾರು ಬಂದಾರು ಬನ್ನೀರೆ ॥೨೭೮॥

## ಶಿವ ಶರಣರ ಸ್ತೋತ್ರ

ರಚಿಸಿದವರು:-

**ಶ್ರೀಮತಿ ಜಯದೇವಿತಾಯಿ ಲಿಗಾಡೆ, ಸೊಲ್ಲಾಪುರ.**

ಹೆಣ್ಣೀನ ಕಳವಳ ಕೇಳೀ ತಾ ಮರಗ್ಯಾನ ।
ಅಣ್ಣಾ ಮಾಡ್ಯಾನ ಪಾವನ ।
ಅಣ್ಣಾ ಮಾಡ್ಯಾನ ಪಾವನ-ಬಸವಣ್ಣಾ ।
ಹೆಣ್ಣೀನ ಪುಣ್ಯ ಕಟಿಗೊಂಡಾ ||೧೨೮೯||

* * *

ಬಸವಣ್ಣ ನರಮನಿ ಕಂಡು ನಾ ಬೆರಗಾದೆ ।
ಲೇಸ ಬಯಸೂವ ಹಿರಿಮನಿ ।
ಲೇಸ ಬಯಸೂವ ಹಿರಿಮನಿ-ಹೊಕ್ಕುನಾ ।
ಶಿಶುವಾಗಿ ಬದುಕೇನ ಬಸವಯ್ಯಗ ||೧೨೯೦||

* * *

ಮರತ್ಯಾ ಎಂಬೂದು ಕರ್ತಾರನ ಕೈವಾಡ ।
ಭೃತ್ಯಾಚಾರವ ನೀಡಿ ಸಲವಯ್ಯ ।
ಭೃತ್ಯಾಚಾರವ ನೀಡಿ ಸಲವಯ್ಯ-ಬಸವಯ್ಯ ।
ಮರ್ತ್ಯಾನ ಕೈಲಾಸ ಮಾಡಯ್ಯ ||೧೨೯೧||

* * *

ಬಾರಯ್ಯ ಬಸವಣ್ಣ ತೋರಯ್ಯ ನಿನದಾರಿ ।
ಬೀರಯ್ಯ ನಿನ್ನ ಶಿವತತ್ವ ।
ಬೀರಯ್ಯ ನಿನ್ನ ಶಿವತತ್ವ-ಲೋಕದಿ ।
ಸಾರಯ್ಯ ನಿನ್ನ ಸಮಭಾವ ||೧೨೯೨||

* * *

ಕದಳೀಯ ವನದಾಗ ಬದುಕು ಬಾಳೇವ ಮಾಡಿ ।
ಕದಳ್ಯಾಗ ಕಾಲ ತೊಡಕ್ಯಾವ ।
ಕದಳ್ಯಾಗ ಕಾಲ ತೊಡಕ್ಯಾವ-ಪ್ರಭುದೇವ ।
ಮದಳಿ ಬಾರೀಸಿ ತೊಡಕ ಬಿಡಿಸಯ್ಯ ||೧೨೯೩||

ಚನ್ನs ಬಸವಬಾರೊ ಗ್ಯಾನs ಮೂರುತಿ-ಭಾರೊ ।
ಚಿನ್ನsದ ಚಿದ್ ಬಿಂದು ಅರುಬಾರೊ ।
ಚಿನ್ನsದ ಚಿದ್ ಬಿಂದು ಅರುಬಾರೊ–ಗುರುರಾಯ ।
ಸನ್ನೂತ ಚಿತ್ ಕಳೆಯ ತೋರಬಾರೊ ॥೨೨೯೪॥

* * *

ಮುಕ್ತೀಯ ವಲ್ಲಃಭ ಯುಕ್ತಿಗೆ ಸಿಗುವವನಲ್ಲ ।
ಭಕ್ತೀಗೆ ಬಾಯಿ ತೆರದಾನ ।
ಭಕ್ತೀಗೆ ಬಾಯಿ ತೆರದಾನ–ಸಿದ್ಧರಾಮ ವಿ–।
ರಕ್ತ ನನsಗ ಮುಖ ತೋರೋ ॥೨೨೯೫॥

* * *

ಅಕ್ಕsನ ಜೀವನ ಚೊಕ್ಕs ಚಿನ್ನದಂತೆ ।
ಪಕ್ವಾದ ಮಾವೀನ ಫಲದಂತೆ ।
ಪಕ್ವಾದ ಮಾವೀನ ಫಲದಂತೆ–ಅಕ್ಕವ್ವ ।
ಮಿಕ್ಕ್ಯಾಳ ಮೂರು ಲೋಕಕ್ಕ ॥೨೨೯೬॥

* * *

ಅಕ್ಕsಗ ಅರಿಲಾಕ ಭಾವ ಪಕ್ವಾಗಬೇಕ ।
ಮಿಕ್ಕಿ ಮೀರಿದ ಮಹಿಮsಳು ।
ಮಿಕ್ಕಿ ಮೀರಿದ ಮಹಿಮsಳು–ಅಕ್ಕವ್ವ ।
ಹೊಕ್ಕಾಳ ಕದಳೀಯ ವನದಾನ ॥೨೨೯೭॥

* * *

ಮಡಿವಾಳ ಮಾಚಯ್ಯ ಕಡಿಗಣಿಸ ಬ್ಯಾಡಯ್ಯ ।
ಮಡಿ ಮಾಡೊ ಎನ್ನ ಒಳ ಮೈಯ್ಯ ।
ಮಡಿ ಮಾಡೊ ಎನ್ನ ಒಳ ಮೈಯ್ಯ–ಬಿಡದೆ ನೀ ।
ಹಿಂಡ್ಹಿಪ್ಪಿ ಮಾಡೊ ಮದಗಜವ ॥೨೨೯೮॥

* * *

ಕಕ್ಕಯ್ಯನ ಮನಿಯಾಗ ಮಿಕ್ಕ್ಯಳಿದs ಪರಸಾದ ।
ಜ್ವಾಕೀಲಿ ತಂದಾನ ಬಸವಯ್ಯ ।
ಜ್ವಾಕೀಲಿ ತಂದಾನ ಬಸವಯ್ಯ–ಪರಸಾದ ।
ಲೋಕಕ್ಕ ಬೀರಿ ಉಳಿಸ್ಯಾನ ॥೨೨೯೯॥